ಶ್ರೀರಸ್ತು.

ಶ್ರೀಮದುಮಾಜಾನಯೇನಮಃ.

ನಿಖಿಲಾರುರುಕ್ಷು ಮುಮುಕ್ಷು ಜನೋಪಯುಕ್ತವಾಗಿ
ಶಾಲ್ಯದ ಶ್ರೀಮತ್ಕೃಷ್ಣಪ್ರಭು ವಿರಚಿತವಾದ,

# ನಿಜದೀಪಿಕಾ

ಶಿರೋರತ್ನವೆಂಬ ಈ ಗ್ರಂಥವು.

---

ದೊಡ್ಡಬೆಲೆ, ನಾರಾಯಣಮುನೀಷಿಯಿಂದ ವಿರಚಿತವಾದ
ರತ್ನಪ್ರಭೆಯೆಂಬ ಟೀಕೆಯೊಡನೆ,
ಇದರ ಸರ್ವಸ್ವಾತಂತ್ರ್ಯವನ್ನು ಪಡೆದು, ಪರಿಶೋ
ಧಿತರಾದ ನವಲು ಗುಂದದ ಮುತ್ತಿನಕಂತೆ ಪಟ್ಟದ
ಈಶ್ವರ ಸ್ವಾಮಿಗಳವರ ಅನುಮೋದಾನುಸಾರ
ಇವರ ಶಿಷ್ಯನಾದ
ಚೆವೃಬಿಸೆ, ಮರಿಯಪ್ಪನವರಿಗಾಗಿ,

(ಮೊದಲನೇ ಛಾಪಾ 1000 ಪ್ರತಿಗಳು.)

ವಾಜಪೇಯ ಕೃಷ್ಣಯ್ಯನವರ ಸ್ವಕೀಯ,
ಬೆಂಗಳೂರು ಬುಕ್‌ಡಿಪೋ ಮುದ್ರಾಕ್ಷರಶಾಲೆಯೊಳು
ಮುದ್ರಿಸಲ್ಪಟ್ಟಿತು.

ಬೆಂಗಳೂರು,
1893.



ಕ್ರಯ ೧—೮—೦

Presented to
The Veera Saiva Samiga[illegible]
Library
B. S. [illegible] 1st April

ಶ್ರೀರಸ್ತು.

ಪ್ರಸ್ತಾವನಾಪತ್ರವು.

ಅಯ್ಯಾ, ಗುಣೈಕಪಕ್ಷಪಾತಿಗಳಾದ ಆರ್ಯ ಶಿರೋಮಣಿಗಳಿರಾ!

ಈ ಕೆಳಗೆ ಉದಹರಿಸುವ ಸಂಗತಿಯು ತಮಗೆ ತಿಳಿಯದೆ ಇಲ್ಲವು ಆದರು ತಿಳಿದದ್ದನ್ನೇ ಜ್ಞಾಪಕಮಾಡಿದೆನೆಂದಷ್ಟು ಮಾತ್ರದಿಂದಲಾದರು ಸಂತೋಷಿಸುವಿರೆಂದು ಕುತೂಹಲದಿಂದ ಸೂಚಿಸುವೆನು.

ಲೋಕದಲ್ಲಿ ವೇದಶಾಸ್ತ್ರಗಳನ್ನು ಪ್ರಮಾಣ ಭೂತವಾದವುಗಳೆಂಬದಾಗಿ ತಿಳಿದಿರುವ ಮಹನೀಯರ ಮತಾನುಸಾರವಾಗಿ ಭೂಮಂಡಲದೊಳಗೆ ಪಿಪೀಲಿಕಾದಿ ಸಮಸ್ತ ಜೀವರಾಶಿಗಳಲ್ಲಿ ಪುರುಷಜನ್ಮವೇ ಅಮೋಘವಾದುದೆಂದು ಕರತಲಾಮಲಕದಂತೆ ಸುವ್ಯಕ್ತವಾಗಿರುವದು. ಅಂತಪ್ಪ ಪುರುಷಜನ್ಮವ ನೆತ್ತಿದಬಳಿಕ ಪುರುಷಾರ್ಥವನ್ನು ಸಂಪಾದಿಸ ಬೇಕಾದದ್ದು ಅತ್ಯಾವಶ್ಯಕವಾಗಿರುವುದು. ಈ ಪುರುಷಾರ್ಥವಾದರೋ! ಧರ್ಮ,ಅರ್ಥ, ಕಾಮ, ಮೋಕ್ಷವೆಂದು ನಾಲ್ಕುಬಗೆಯಾಗಿರುವುದು. ಇವುಗಳಲ್ಲಿಯು ಕಡೆಯದಾದ ಮೋಕ್ಷವೆಂಬುವದೇ ಪರಮ ಪುರುಷಾರ್ಥವೆಂಬದಾಗಿ ನಿಗಮಾಗಮಗಳಿಂದಲೂ, ಶಿಷ್ಟರ ಅನುಭವ ಬಲದಿಂದಲು, ಸಂದೇಹವಿಲ್ಲದೆ ಗೊತ್ತಾಗಿರುವುದು ಈ ಪರಮ ಪುರುಷಾರ್ಥರೂಪವಾಗಿರುವ ಮೋಕ್ಷವೆಂಬುವದು, ನಿತ್ಯವಾಗಿಯೂ ಅವಿಕಾರಿಯಾಗಿಯು ಅಪಾರವಾಗಿಯು ಅಸದೃಶವಾಗಿಯು ಸಜಾತೀಯ ವಿಜಾತೀಯ ಸ್ವಗತವೆಂಬ ಭೇದತ್ರಯಗಂಧಶೂನ್ಯವಾಗಿಯು ತ್ರಿಕಾಲಾಬಾಧಿತವಾಗಿಯು, ಸ್ವತಃ ಪ್ರಕಾಶಮಾನವಾಗಿಯು ನಿರತಿಶಯಾನಂದ ರೂಪವಾಗಿಯು ಇರುವದು ಅದುದರಿಂದಲೇ ಪೌರುಷಶಾಲಿಯಾದವನು. ಈದೃಶವಾದ ಮುಕ್ತಿಕಾಂತೆಯನ್ನು ಆಲಿಂಗಿಸದಿದ್ದೊಡೆ ಅವನಿಗಿಂತಲು ಕೀಳನು ಪ್ರಪಂಚದಲ್ಲಿಯೇ ಇಲ್ಲವೆಂದು ನಿಸ್ಸಂಶಯವಾಗಿ ತಿಳಿಯಬೇಕು. ಆದರೆ ಇಂತಮೂಲ್ಯವಾದ ಕೈವಲ್ಯವು ಸಮನಿಸ ಬೇಕಾಗಿದ್ದೊಡೆ ಪರಮಾತ್ಮಜ್ಞಾನದಿಂದಲ್ಲದೆ. ಬೇರೊಂದು ಬಗೆಯಾದ ದಾರಿಯೇ ಇಲ್ಲವು. ಆ ಜ್ಞಾನವೆಂಬ ಅನನ್ಯಾದೃಶವಾದ ಕಣ್ಣು ಕಾಣಿಸಬೇಕಾದರೆ, ಸದ್ಗುರುಕೃಪಾ

ಸ್ತ್ರವೆಂಬ ಅಮೋಘವಾದ ಸೂರ್ಯಪ್ರಭೆಯಿಂದಲ್ಲದೆ ಆಗಲಾರದು, ಅಂತಹಶಾಸ್ತ್ರಗಳು ಸಕ್ಕಲ ಭಾಷಾಮಾತೃ ಭೂತವಾಗಿರುವ ಸಂಸ್ಕೃತದಲ್ಲಿಯೇ ವಿಶೇಷವಾಗಿರುವವು. ಅಥವಾ ಕೆಲವು ದೇಶಭಾಷೆಯಾದ ಕನ್ನಡದಲ್ಲಿಯು ಇದ್ದಾಗ್ಯೂ ಕೆಲವು ಏಕದೇಶ ಬೋಧಕಗಳಾಗಿಯೂ, ಹಲವು ಅಬದ್ಧಜಾಲದಿಂದೊಡಗೂಡಿಯು, ಹಲವು ವಿಸಂವಾದಿಗಳಾಗಿಯೂ-ಅತೃಪ್ತಿಕರವಾಗಿಯೂ ಇರುವವಲ್ಲದೆ ಸಮಗ್ರಫಲಪ್ರದಗಳಾಗಿ ಇಲ್ಲವು. ಎಂದರಿತು ಈನ್ಯೂನತೆಯನ್ನು ತಪ್ಪಿಸುವದಕ್ಕು ಮುಂದಲೋಕೋಪಕಾರಕ್ಕಾಗಿಯು ಶಾಲ್ಯದ ಕೃಷ್ಣಪ್ರಭುವೆಂಬ ಮಹಾಕವಿಯು ಅವ್ಯಾಜಕರುಣಾ ಪರಿಪೂರಿತಾಂತರಂಗನಾಗಿ ನಿಜದೀಪಿಕಾ ಶಿರೋರತ್ನವೆಂಬ, ಯಥಾರ್ಥನಾಮವುಳ್ಳ ಅಸಾಧಾರಣವಾದ ಗ್ರಂಥವನ್ನು ರಚಿಸಿದನು. ಇದು ಯಾವವಿಧವಾದ ಉಪಪ್ಲವದಿಂದ ಲೋಖಿಲವಾಗಿ ಪ್ರಕಾಶವನ್ನು ಪಡೆಯದಿರುವದನ್ನು ನೋಡಿ, ಬಹುವಿಧವಾದ ಪ್ರಯಾಸದಿಂದ ಸಂಪಾದಿಸಿದ ಈ ಗ್ರಂಥಪ್ರಕಾಶಕನಿಂದಲದನ್ನು ಪಡೆದು. ಆತನಿಷ್ಟಾನುಸಾರವಾಗಿ, ಪ್ರಕೃತೋಪಯುಕ್ತವಾದ ಸಕಲ ಶಾಸ್ತ್ರಾರ್ಥಗಳ ಉದಾಹರಣ ಪೂರ್ವಕವಾಗಿಯು ಸ್ವಾನುಭವ ಪ್ರಕಾಶ ಪುರಸ್ಸರವಾಗಿಯು ಇರುವದ್ದರಿಂದಲೆ ಅನ್ಯಾದೃಶವಾಗಿರುವಂತೆ ಸರ್ವಸಾಧಾರಣವಾಗಿ ತಿಳಿಯುವದಕ್ಕೋಸ್ಕರ ಸುಲಭವಾದ ಶೈಲಿಯಿಂದ ಯಥಾಮತಿರತ್ನ ಪ್ರಭೆಯೆಂಬ ಟೀಕೆಯನ್ನು ಬರೆದು ಇರುವೆನು. ಇದನ್ನು ಸಜ್ಜನರು ಆಮೂಲಚೂಡವಾಗಿ ಸೂಕ್ಷ್ಮದೃಷ್ಟಿಯಿಂದ ಪರಿಭಾವಿಸಿನೋಡಿ ಗುಣಲೇಶವನ್ನಾದರು ಗ್ರಹಿಸಿದರೆ ನನ್ನ ಶ್ರಮವು ಸಾರ್ಥಕವಾಗುವದೆಂದು ಸಪ್ರಶ್ರಯದಿಂದ ಭ್ಯರ್ಥಿಸುವ,

ಸಾಧುವಿಧೇಯನಾದ ದೊಡ್ಡಬೆಲೆ, ನಾರಾಯಣ ಮುನೀಷಿ.

ಈ ಗ್ರಂಥವನ್ನಪೇಕ್ಷಿಸುವವರು ಈ ಪುಸ್ತಕದ ಯಲ್ಲಾ ಹಕ್ಕನ್ನು ಪಡೆದು ಮುದ್ರಾಪಿಸಿ ಪ್ರಕಾಶಪಡಿಸಿರುವ ಬೆಂಗಳೂರು ಅಕ್ಕಿಪ್ಯಾಟೆಯಲ್ಲಿ ಇರುವ ಚೆಪ್ಪುಬೀನ್ ಮರಿಯಪ್ಪನವರಿಗೆ ಬರೆದು ಪಡಿಯಬಹುದು.

ಇದರ ಕ್ರಯ, ೧—೮—೦



ಶ್ರೀ

ಶ್ರೀ ಸರ್ವಮಂಗಳಾ ಜಾನಕೀ ಸಹಾಯಃ.

ಪಂಚವಿಂಶತಿ ಪದ್ಧತಿ.

## ನಿಜದೀಪಕ ರತ್ನ ಪ್ರಾರಂಭವು.

ಶ್ಲೋ॥ ಕೃತ್ವಾವಸಾಧ್ಯಂವಟತರುಪದೇವೇಷಮಾರ್ಷಂ ಭಜಿ
ತ್ವಾದಿವ್ಯಜ್ಞಾನ್ಯೈರ್ಮುನಿಭಿರನಿಶಂವ್ಯಾಪೃತಸ್ತ್ವಂಯದರ್ಥಂ ॥
ಸಂಸಾರಾಬ್ಧಾವಘಲಿತತಟಿಮಜ್ಜತಾನ್ಸ್ವೋರ್ಥಮಾದ್ಯಂಸೇವೆ
ತ್ವಾಂವಾಂಛಿತಾಪ್ತ್ಯೈಮಿತಮತಿರನಿಶಂದಕ್ಷಿಣಾಮೂರ್ತಿಮೀಶಂ॥

ಅವತರಿಣಿಕೆ॥ ಈ ಭೂಮಂಡಲದಲ್ಲಿ ಪಿಪೀಲಿಕಾದಿ ಜೀವರಾಶಿಗಳೊಳಗೆ ಪುರುಷ ಜನ್ಮವು ಪರಮೋತ್ತಮವಾದದ್ದೆಂದು ನಿಗಮಾಗಮಗಳು ಸಾರುತಲಿರುವವು. ಅಂತಪ್ಪ ಪುರುಷ ಜನ್ಮವನೆತ್ತಿದ ಬಳಿಕ ಪುರುಷಾರ್ಥವನ್ನು ಸಂಪಾದಿಸಬೇಕಾದದ್ದು ಅತ್ಯಾವಶ್ಯಕವಾಗಿರುವುದು. ಆ ಪುರುಷಾರ್ಥವಾದರೋ ಧರ್ಮ, ಅರ್ಥ, ಕಾಮ, ಮೋಕ್ಷವೆಂಬದಾಗಿಯೂ, ನಾಲ್ಕು ಬಗೆಯಾಗಿರುವುದು, ಆದರೆ ಇವುಗಳಲ್ಲಿ ಧರ್ಮಾದಿ ಮೂರು ಪುರುಷಾರ್ಥಗಳು ಕೆಲವು ಕಾಲ ಮಾತ್ರ ಇರತಕ್ಕವುಗಳಾಗಿಯು, ಮಿತವಾದ ಫಲವನ್ನು ಕೊಡತಕ್ಕವುಗಳಾಗಿರುವವೆಂಬದಾಗಿಯು, ವೇದಶಾಸ್ತ್ರಗಳು ಮೊರೆ ಇಡುತಲಿರುವವಲ್ಲದೆ ಸಾಮಾನ್ಯವಾಗಿ ಸರ್ವಾನುಭವಸಿದ್ಧವಾಗಿಯು ಇರುವದು. ಕಡೆಯದಾದ ಮೋಕ್ಷವೆಂಬದು ಪರಮಪುರುಷಾರ್ಥವೆನ್ನಲ್ಪಡುವುದು, ಇದು ನಿತ್ಯಾನಂದರೂಪವಾದದ್ದು, ಲೋಕದಲ್ಲಿ ಸಕಲಪ್ರಾಣಿಗಳು ಹೆಚ್ಚಾದ ಸುಖವನ್ನು ಬಯಸುವದೇ ವಾಡಿಕೆಯಾಗಿರುವದು. ಆದುದರಿಂದ ವಿವೇಕಶಾಲಿಗಳಾಗಿಯೂ, ದೂರದರ್ಶಿಗಳಾಗಿಯೂ, ಇರುವ ಮನುಜರಿಗೆ ಪರಮಾನಂದ ರೂಪವಾದ ಮುಕುತಿಯೆಂಬ ಕಾಂತೆಯು ಕೈಹಿಡಿದು ಆನಂದಿಸುವದೇ ಅವಶ್ಯ

ಕರ್ತವ್ಯವಾಗಿರುವುದು. ಆ ಸರ್ವೋತ್ತಮಾನಂದ ಸ್ವರೂಪವಾದ ಕೈವಲ್ಯವೆಂಬುವದು ಸರ್ವಶಕ್ತನಾಗಿಯೂ, ಅಪರಿಮಿತಾನಂತ ಕಲ್ಯಾಣಗುಣ ಪರಿಪೂರ್ಣನಾಗಿಯೂ, ಸರ್ವಜ್ಞನಾಗಿಯೂ, ಸರ್ವಪಾಲಕನಾಗಿಯು, ಸರ್ವಾಂತರ್ಯಾಮಿಯಾಗಿಯು, ಸರ್ವನಿಯಂತೃವಾಗಿಯು, ನಿರ್ಗುಣನಾಗಿಯು, ಸ್ವತಃಪ್ರಕಾಶಮಾನನಾಗಿಯು, ಸರ್ವೇಶ್ವರನಾಗಿಯೂ ಇರುವ ಪರಮಾತ್ಮನ ಜ್ಞಾನದಿಂದಲ್ಲದೆ ಮತ್ತ್ಯಾವವಿಧವಾದ ಉಪಾಯಗಳಿಂದಲೂ, ಸಹಸ್ರಜನ್ಮಗಳನ್ನೆತ್ತಿದಾಗ್ಯೂ ಮತ್ತ್ಯಾವಮಾರ್ಗಗಳನ್ನು ಆಶ್ರಯಿಸಿದಾಗ್ಯೂ ಸಂಭವಿಸುವದಿಲ್ಲವು. ಆದರೆ ಆ ನಿತ್ಯಾತ್ಮಜ್ಞಾನವೆಂಬ ಪದಾರ್ಥವು ಶಾಸ್ತ್ರಾಧ್ಯಯನದಿಂದಲ್ಲದೆ ಬೇರೆ ವಿಧದಿಂದ ಲಭಿಸುವದಿಲ್ಲವು. ಆ ಶಾಸ್ತ್ರಾಧ್ಯಯನ ಜ್ಞಾನಗಳು ಸದ್ಗುರೂಪದೇಶದಿಂದ ವಿನಾಯಿಸಿ ಮತ್ತೆ ಯಾವವಿಧವಾಗಿಯೂ ಪ್ರಾಪ್ತವಾಗುವದಿಲ್ಲವು. ಅಂತಪ್ಪ ಗುರೂಪದೇಶವಾದರೋ ಆ ಮಹಾನುಭಾವನ ಬಹುತರವಾದ ಸೇವೆಗಳಿಂದಲ್ಲದೆ ಸರ್ವಥಾ ಸಮನಿಸುವದೇ ಇಲ್ಲ. ಆದ್ದರಿಂದ ಆತ್ಮಜ್ಞಾನವು ಸಾಮಾನ್ಯವಾಗಿ ಸರ್ವರಿಗೂ ಅಸಾಧ್ಯವಾಗಿ ಪರಿಣಮಿಸಿತು. ಇದನ್ನೆಲ್ಲ ಚೆನ್ನಾಗಿ ಪರಿಭಾವಿಸಿದ ಈ ಗ್ರಂಥಕರ್ತನು ಸದ್ಗುರುವಿನ ಕಟಾಕ್ಷದಿಂದ ಸಕಲಶಾಸ್ತ್ರಾಧ್ಯಾಯನಗಳ ಮಾಡಿ, ಶ್ರವಣ, ಮನನ, ನಿಧಿಧ್ಯಾಸನಾದಿಗಳ ಮೂಲಕ ಬ್ರಹ್ಮಜ್ಞಾನವೆಂಬ ಸೌಭಾಗ್ಯವನ್ನು ಸಂಪಾದಿಸಿ, ಲೋಕದಲ್ಲಿ ಸಂಪತ್ತನ್ನು ಸಂಪಾದಿಸಿ ಅದನ್ನು ಮತ್ತೊಬ್ಬರಿಗೂ ವಿನಿಯೋಗಿಸದ ನಿರ್ಭಾಗ್ಯನಾದ ಲೋಭಿಯಂತಾಗದೆ ತಾನು ಕಷ್ಟಪಟ್ಟು ಆರ್ಜಿಸಿದ ಬ್ರಹ್ಮಜ್ಞಾನವೆಂಬ ಅಮೃತವನ್ನು ಲೋಕದೊಳು ಇತರರಿಗೂ ಸುಲಭ ಸಾಧ್ಯವಾಗುವಂತೆ ಮಾಡಬೇಕೆಂದು ಚಿಂತನೆಗೈದು ಪರಮ ದಯಾಳುವಾದುದರಿಂದಲೆ ಅವ್ಯಾಜಪರೋಪಕಾರಿಯಾದ ಈ ಮಹಾನುಭಾವನು ಆ ಆತ್ಮತತ್ವಾಮೃತಕ್ಕೆ ಆಶ್ರಯವಾದ ರತ್ನಕಲಶದಂತಿರುವ ನಿಜದೀಪಕ ರತ್ನವೆಂಬೊಂದು ಅಮೋಘವಾದ ಗ್ರಂಥವಂರಚಿಸಲುಜ್ಜುಗಿಸಿ ತಾನು ಮಾಡಲಾರಂಭಿಸಿದ ಕೃತಿಯು ನಿರ್ವಿಘ್ನವಾಗಿ

ಪರಿಸಮಾಪ್ತಿಯಂ ಪಡೆಯುವದಕ್ಕೂ ಜರಾಮರಣ ರಹಿತವಾದ ತನ್ನ ಯಶಶ್ಶರೀರವು ಆ ಚಂದ್ರಾರ್ಕಸ್ಥಾಯಿಯಾಗಿ ಇರುವದಕ್ಕೂ ಗ್ರಂಥಾದಿಯೊಳು ತನಗಿಷ್ಟ ದೈವವಾದ ಶ್ರೀ ದಕ್ಷಿಣಾಮೂರ್ತಿಯ ನಮಸ್ಕಾರ ರೂಪವಾದ ಮಂಗಳವನ್ನು ಮಾಡುತ್ತಾನೆ.

ಟೀ॥ ವಟತರುಪದೇ-ವಟತರು-ಆಲದಮರದ, ಪದೇ-ಮೂಲಸ್ಥಾನದಲ್ಲಿ, ಅವಸ್ಥಾಂ-ಸ್ಥಿತಿಯನ್ನು, ಕೃತ್ವಾ-ಮಾಡಿಕೊಂಡು, ಆರ್ಷಂ-ಋಷಿಸಂಬಂಧವಾದ, ವೇಷಂ-ಅಲಂಕಾರವನ್ನು, ಭಜಿತ್ವಾ-ಹೊಂದಿ, ದಿವ್ಯಜ್ಞಾನೈಃ-ದಿವ್ಯ-ಅಮೋಘವಾದ, ಜ್ಞಾನೈಃ-ಜ್ಞಾನವುಳ್ಳ, ಅಂದರೆ (ಆತ್ಮಜ್ಞಾನವುಳ್ಳ) ಮುನಿಭಿಃ- ಮಹರ್ಷಿಗಳಿಂದ, ಅನಿಶಂ- ನಿರಂತರವು, ವ್ಯಾವೃತಃ-ಸುತ್ತುಲ್ಪಟ್ಟಿರುವ, ತ್ವಂ-ನೀನು, ಅಘಟಿತತಟೇ-ಅಘಟಿತ-ದೊರೆಯದಿರುವ, ತಟೇ-ದಡವುಳ್ಳ, ಸಂಸಾರಾಬ್ಧೌ- ಸಂಸಾರ-ಜನನಮರಣ ಪ್ರವಾಹರೂಪವಾದ ಸಂಸಾರವೆಂಬ, ಅಬ್ಧೌ - ಕಡಲಿನಲ್ಲಿ, ಮಜ್ಜತಾಂ-ಮುಳುಗುವ, ನಃ- ನಮ್ಮಗಳ, ಯದರ್ಥಂ- ಯಾವ ಉದ್ಧಾರಕ್ಕೋಸ್ಕರವು, ಇತಿ-ಹೀಗೆಂದು ತಿಳಿದು, ಆದ್ಯಂ- ಮೊದಲನೆಯವನಾದ, ಅರ್ಥಂ- ಅರ್ಥಸ್ವರೂಪನಾದ, ಈಶಂ - ಸರ್ವೈಶ್ವರ್ಯಸಂಪನ್ನನಾದ, ದಕ್ಷಿಣಾಮೂರ್ತಿಂ- ದಕ್ಷಿಣಾಮೂರ್ತಿ ಸ್ವಾಮಿಯಾದ, ತ್ವಾಂ-ನಿನ್ನನ್ನು, ವಾಂಛಿತಾಪ್ತ್ಯೈ-ವಾಂಛಿತ-ಇಷ್ಟಾರ್ಥದ, ಆಪ್ತ್ಯೈ-ಸಿದ್ಧಿಗೋಸ್ಕರ, ಮಿತಮತಿಃ-ಮಿತ-ಅಲ್ಪವಾದ, ಮತಿಃ-ಬುದ್ಧಿಯುಳ್ಳ, (ಅಹಂ-ನಾನು,) ಅನಿಶಂ-ಅನವರತವು, ಸೇವೇ-ಸೇವಿಸುವೆನು.

ತಾ॥ ದರ್ಭಾಸನ, ಕೃಷ್ಣಾಜಿನ, ವ್ಯಾಘ್ರಚರ್ಮ ಮುಂತಾದ ಋಷಿವೇಷದಿಂದೊಡಗೂಡಿ ಸಚ್ಚಿದಾನಂದಾತ್ಮಜ್ಞಾನ ಸಂಶೋಭಿತರಾದ ಮಹರ್ಷಿಗಳಿಂ ಸೇವಿಸಲ್ಪಡುತ ಜನನಮರಣ ಪ್ರವಾಹರೂಪವಾಗಿರುವದರಿಂದಲೆ ಅಪಾರವಾದ ಸಾಗರದೊಳು ಮುಳುಗಿ ಮುಳುಗುತಲಿರುವ ನಮ್ಮಂಥ ಪ್ರಾಣಿಗಳನ್ನು ಕರಾಲಂಬನವನಿತ್ತು ಉದ್ಧಾರ ಮಾಡಲೋಸುಗ ವಟವೃಕ್ಷದ ಮೂಲಭಾಗದೊಳು ದಕ್ಷಿಣಾಭಿಮುಖ

ನಾಗಿ ದಿವ್ಯಸುಂದರ ವಿಗ್ರಹದಿಂ ಪ್ರಕಾಶಮಾನನಾಗಿಯು ಇರುತ ಪುರಾಣ ಪುರುಷನಾಗಿಯು ಸರ್ವಶಕ್ತನಾಗಿಯು, ಕರುಣಾಸಮು ದ್ರನಾಗಿಯು, ಸರ್ವೇಶ್ವರನಾಗಿಯೂ ಇರುವ ಎಲೈ ಪರಮೇಶ್ವರನೇ! ಪ್ರಕೃತಕಾರ್ಯ ನಿರ್ವಾಹಕಕ್ಕಾಗಿಯು, ಸಂಸಾರೋತ್ತರಣಕ್ಕಾಗಿಯು ನಿನ್ನನ್ನು ಅನವರತವೂ ಸೇವಿಸುವೆನೆಂದು ತಾತ್ಪರ್ಯವು.

ಮನೋಭೂಪನಿಗೆ ವಿಚಾರನೆಂಬ ಪುರೋಹಿತನು ಹೇಳಿದ್ದು.

೧ ಕಂ॥ ತಾ॥ ಗುರುಶಿಷ್ಯ ಸಂವಾದಾನುರೂಪವಾಗಿ ರೂಪಕ ಭಾವ ದಿಂದ ಈ ಗ್ರಂಥವನ್ನು ತಂದಿರುವದರಿಂದ ಪ್ರಕೃತ ಸಂದರ್ಭವನ್ನು ಪ್ರಶ್ನರೂಪವಾಗಿ ಹೇಳುತ್ತಾನೆ. ಎಲೈ ಸಾಧುಜನ ಸಾರ್ವಭೌಮನಾ ದ ಗುರುವೆ? ಈ ಜನನಮರಣ ಪ್ರವಾಹ ರೂಪವಾಗಿರುವ ಈ ಸಂಸಾ ರ ಸಾಗರದಿಂದ ದಾಟುವಿಕೆ ಎಂಬದು ಎನಗೆ ಎಂತಹುದು ? ಮತ್ತು ಪುನರುತ್ಪತ್ತಿರಾಹಿತ್ಯವೆಂಬದು ಹ್ಯಾಂಗೆ ಸಂಭವಿಸುವದು, ಇನ್ನು ಪ ರಮ ಪುರುಷನಾದ ಪರಮಾತ್ಮನೊಡನೆ ಐಕ್ಯವೆಂಬುವದು ಯಾವಮೋ ರಿಗೆ ಲಭಿಸುವದು ? ಮದನಾಂತಕನಾದ ತರುಣೇಂದುಶೇಖರ ಮುಂ ತಾದವರಿಂದ ಇದುಹೀಗೆಯೇ ಸರಿಯೆಂಬದಾಗಿ ನಿಶ್ಚಯಿಸಿ ಯಾವ ರೀತಿಯಿಂದರುಹಲ್ಪಟ್ಟಿತೋ ? ಅದರಂದಮಂ ಸವಿಸ್ತಾರವಾಗಿ ಹೇ ಳಬೇಕೆಂದು ಮನಸ್ಸೆಂಬರಸು (ಶಿಷ್ಯನು) ಬೇಡಿಕೊಂಡನು.

೨ವ॥ ತಾ॥ ಈ ಪ್ರಕಾರವಾಗಿ ಹೇಳಿದ ಚಿತ್ತವೆಂಬ ಮಹೀಪತಿಗೆ, ಅಪ ರಿಮಿತವಾದ ಆನಂದ ಬಾಷ್ಪಗಳು ಉದುರುವಂತೆ, ತೇಜೋದ್ರ ವ್ಯವಾಗಿರುವದರಿಂದ ಬಗೆ ಬಗೆಯಾಗಿ ಉಂಟಾಗುವ ಪರಿಣಾಮ ರೂ

---

೧ ಕಂದ॥ ಮೂ॥ ಎಂತನಗಪ್ಪುದುಸಂಸೃತಿ।
ಯಿಂತೆರಪಪುನರ್ಭವಂಪುರುಷನೊಡನೈಕ್ಯಂ॥
ಕಂತುಹರಾದಿಗಳಿಂನಿಜ।
ಮಿಂತೆಂದಾಜ್ಞಾಪಿಸಿದುದನುಸುರುವದರಿಮಿಂ॥

॥ವಚನ॥

೨ ಮೂ॥ ಇಂತೆಂದುಸುರ್ದ ಮನೋಮಹೀಶಂ, ಸಮುಂದಾನಂದ

ಜವಾದ ಸದ್ವೃತ್ತಿಗಳುಳ್ಳ ಎಲೈ! ಮನಸ್ಸೆಂಬ ಪ್ರಭುವೆ? ಕೇಳು! ಜನನ ಮರಣ ಪ್ರವಾಹ ರೂಪವಾಗಿರುವ ಸಂಸಾರವೆಂಬ ಮಹಾರಣ್ಯದಿಂದ ಬಿಡುಗಡೆಯನ್ನು ಹೊಂದಬೇಕಾದರೆ ನಿನ್ನ ನಿಜವಾದ ಸ್ವರೂಪವನ್ನು ನೀನು ತಿಳಿಯತಕ್ಕದ್ದು ಒಂದೇ ಉಪಾಯವಲ್ಲದೆ ಮತ್ತೆ ಇತರವಾದ ಯಾವ ಯುಕ್ತಿಯೂ ಇಲ್ಲವು. ಆದರೆ ಆ ಆತ್ಮ ಸ್ವರೂಪವೆಂಬ ಅಮೃತ ಸಮುದ್ರಕ್ಕೆ ಮಾಲಿನ್ಯ ರಹಿತವಾದ ಹೊಳೆಯಂತೆ ಶೋಭಿಸುವ ನೀನು ಈ ಪೂರ್ವೋಕ್ತವಾದ ಆತ್ಮವೆಂಬ ಸುಧಾ ಸಾಗರವನ್ನು ಹೋಗಬೇಕಾದರೆ ಪ್ರಸಿದ್ಧವಾದ ಅರ್ಥದಿಂದ ಹೊಂದತಕ್ಕ ಪದಾರ್ಥವು ಒಂದೇ ಆಗಿದ್ದರೂ ಒಳಹೊಕ್ಕು ವಿಚಾರ ಮಾಡಿದರೆ ಬೇರೆಬೇರೆಯಾಗಿ ಇಪ್ಪತ್ತೈದು ಮಾರ್ಗಗಳು ಒಳವು, ಇವುಗಳನ್ನೆಲ್ಲ ಬಿಟ್ಟು ಏಕರೂಪವಾದ ದಾರಿಯಿಂದ ಹೊದುವದು ಬಹಳ ದುರ್ಲಭವಾಗಿರುವುದು. ಆದ್ದರಿಂದಲೇ ವಿಶೇಷ ಸಾಧನ ಪರರಾದವರಿಗೆ ಮಾತ್ರಸಾಧ್ಯವಾಗಬಹುದು, ಹೀಗಿರುವದರಿಂದ ಪ್ರಕೃತದಲ್ಲಿ ಸುಲಭವಾಗಿ, ಹೊಂದುವದಕ್ಕೋಸ್ಕರ ಒಳಭೇದಗಳಾಗಿರುವ ಹಾದಿಗಳನ್ನು ವಿಸ್ತರಿಸಿ ಪೇಳುವೆನು ಕೇಳೆಂದು ಸುವಿಲಾಸದಿಂ ಪೇಳಲಾರಂಭಿಸಿದನು. ಅದೆಂತೆಂದರೆ. ॥೭॥

೩ ಜಂಪೆ॥ ತಾ॥ ಶರೀರವೆಂಬುವದೇ ಪರಮೇಶ್ವರನ ದೇವಸ್ಥಾನವಾಗಿ

---

ಮೋಸರ್ವಂತೆ, ಲೈಸುವೃತ್ತಿಯೆ,ನಿವೃತ್ತಿಯಾಗಬೇಕಾದೊಡ, ವಿಾಸಂಸಾರಗಹನದಿಂದಾತ್ಮ, ಸ್ವರೂಪಾಭಿಜ್ಞಾನಮಂ ಬಿಟ್ಟಾಗದು, ಆಯಾತ್ಮಸುಧಾಸಮುದ್ರಕ್ಕೆ ನಿರ್ಮಲ ಸಿಂಧುವಾದ, ನೀನದಂಪ್ರವೇಶಿಸುವದಕ್ಕೆ ಮುಖ್ಯಾರ್ಥದಿಂ ಪ್ರಾಪ್ತವೊಂದಾಗಿರಲ್,ವಿಚಿತ್ರವಿಶೇಷದಿಂ,ಪಂಚವಿಂಶತಿ ಪದ್ಧತಿಗಳೊಳವ, ಪರಪ್ರಕಾರವಂ ವಿವರಿಸುತಿರ್ಪೆ ನವಧರಿಸೆಂದು, ಸುವಿಭವದಿಂ ಪೇಳುತಿರ್ದಂ.

೩ ಜಂಪೆ॥ ಮೂ ॥ ತನುವೆಶಿವಾಲಯಂ, ಧಾತುಸಪ್ತಕವೆ ಪ್ರಾಕಾರ ನಟ್ಟೈಲುವೆ ವೃಷಭರಾಜಪತಾಕೆ ॥೧॥

ರುವುದು. ಈ ಶರೀರದೊಳಗಿರುವ ಸಪ್ತಧಾತುಗಳೇ ಸುತ್ತಲಿರುವ ಏಳು ವಿಧವಾದ ಪ್ರಾಕಾರಗಳು. ನಡುಬೆನ್ನಿನಲ್ಲಿರುವ ಮೂಳೆಯೆ ವೃಷಭ ರಾಜನಾದ ನಂದಿಯ ಧ್ವಜವು ॥೧॥ ಈ ದೇಹದೊಳಿರುವ ಕರ ಚರಣಾದಿ ಅವಯವಗಳೇ ನಂದೀಶ್ವರ ಚಂಡೀಶ್ವರ ಭೃಂಗೀಶ್ವರ ಮುಂತಾದ ದೇವತೆಗಳಿಗೆ ಆವಾಸಯೋಗ್ಯವಾದ ಸ್ಥಾನಗಳು ಈ ದೇವತೆಗಳಿಗೆ ನವರಂಗ ಸ್ಥಾನವೇ, ಜಾಗ್ರದವಸ್ಥೆಯನ್ನಲ್ಪಡುವದು. ಮತ್ತೆ ಕೆಲಬರು ನೇತ್ರಸ್ಥಾನವು ನವರಂಗಸ್ಥಾನವೆಂಬದಾಗಿಯು ಹೇಳುವರು, ॥೨॥ ಹೀಗೆಯೆ! ಶಿರಸ್ಸು ಗೋಪುರ ಸ್ಥಾನವಾಗಿರುವುದು. ಸ್ವಪ್ನಾವಸ್ಥೆಯು ಸುಖನಾಸಿಯೆಂಬ ಸ್ಥಾನವು, ಎಲೈ! ಮನಸ್ಸೆಂಬ ಮಹರಾಜನೇ? ನೀನೆ ಆ ಕಪಿಲ ನೇತ್ರನಾದ ಪರಶಿವಗೆ ಮನೋಹರವಾದ ಗೋಮುಖ ಪೀಠವೆಂಬದಾಗಿ, ಹೇಳಲ್ಪಡುತಿರುವಿ.॥೩॥ ಆ ಚಿನ್ಮಯ ನೇತ್ರಸ್ಥಾನದಲ್ಲಿ ಪ್ರತಿಫಲಿಸಿದ ಚಿತ್ಸ್ವರೂಪವಾದ ಆತ್ಮಪ್ರಕಾಶವೇ ಗುರುತಾಗಿವುಳ್ಳವನಾಗಿ, ಸರ್ವತ್ರವ್ಯಾಪಿಸಿರುವ ತೇಜಸ್ಸೇ ಪರ್ವತರಾಜ ಪುತ್ರಿಯಾದ ಸರ್ವಮಂಗಳೆಗೆ ಪ್ರಾಣಪ್ರಿಯನಾದ ಪರಶಿವನು ॥೪॥ ಆ ಗಿರಿಜಾ ಪ್ರಾಣಕಾಂತನಾದ ಶಂಕರನೆ ನಿನಗೆ ಮನೆಯ ದೇವರು, ಇತರ ದೈವವನ್ನು ಸೇವಿಸದೆ ಇಂತಪ್ಪ ಸರ್ವೋತ್ತಮವಾದ ದೇವರನ್ನು ಉತ್ತಮವಾದ ಗುಣಗಳೆಂಬ ಫಲಗಳಿಂದಲು, ಹುವ್ವುಗಳಿಂದಲು, ಪೂಜೆಯನ್ನು ಮಾಡಿದ್ದೆ ಆದರೆ ಸಂ

---

ಅವಯವಗಳೆ ದೇವತಾವಾಸಗಳು ಮೊದಲಾದ, ನವರಂಗವೆ,
ಜಾಗ್ರದವಸದನವೆನಿಕ್ಕುಂ ॥೨॥
ಗೋಪುರವೆ ಶಿರವು, ಕನಸೆ ಪೊಡೆಯ ಮನೆಯು, ನೀನೆಪಿಂಗ
ದೃಕ್ಪೀಠನೆನಿಪೆ ಚೆನ್ನಾಗಿ ॥೩॥
ಅಲ್ಲಿ ಬಿಂಬಿಸಿದ ಪರಮಾತ್ಮ ಪ್ರಭೆಯೆಲಿಂಗ, ಮುಳ್ಳಭಿ ವ್ಯಕ್ತಿಯೆ,ಉಮೆಯ ಮನದನ್ನಾ ॥೪॥
ಕುಲದೈವವಿದು ನಿನಗೆ, ಬಳಸದಿತರವ ಸುಗುಣ, ಫಲಕವುಲ
ದಿಂದರ್ಚಿಸಲು ಧನ್ಯನಪ್ಪೆ ॥೫॥

ಶಯ ವಿಲ್ಲದೆ ಕೃತಾರ್ಥ ನಾಗುತ್ತೀಯೋ. ॥೫॥

೪ ವ॥ ತಾ॥ ಈ ಪ್ರಕಾರವಾಗಿ ನುಡಿಯಲು ಬಳಿಕಲಾ ವಿಚಾರವೆಂಬ ಪುರೋಹಿತನನ್ನು ಕುರಿತು ಆತ್ಮ ಸ್ವರೂಪವಾದ ಲಿಂಗದ ಪೂಜೆಯಂ ಮಾಡುವ ವಿಧಾನವು ಎಂತೆಂದು ಬೆಸಗೊಳಲು ವಿಶ್ವಾಸ ಪೂರ್ವಕ ವಾಗಿ, ಈ ಮುಂದೆ ಹೇಳುವ ಪ್ರಕಾರದಿಂ ಪೇಳಲಾರಂಭಿಸಿದನು, ಅದೆಂತೆನೆ.

೫ ತ್ರಿ॥ ತಾ॥ ಸ್ವರ್ಗಾದಿ ಲೋಕಗಳೆಲ್ಲವು ನಾಶವನ್ನು ಪಡೆಯುತಕ್ಕವುಗ ಳು .ಹೀಗೆ ಹೋಗುವ ಲೋಕಗಳಲ್ಲಿ ನಿತ್ಯಾತ್ಮ ಸ್ವರೂಪವಾದ ನಾ ನು ಯೆಂಬ ಪದಾರ್ಥವೊಂದೇ ಲಯವನ್ನು ಪಡೆಯದೆ ಇರುವದು ಎಂಬದಾಗಿ ಭಾವಿಸುತ ಆಭಾವನೆಯು ದಾರ್ಢ್ಯವನ್ನು ಪಡೆದರೆ ಅದೇ ಪರಮೇಶ್ವರನಿಗೆ ಆವಾಹನವೆನ್ನಲ್ಪಡುವದು. ॥೧॥ ಭೂತಭವಿ ಷ್ಯದ್ವರ್ತಮಾನಗಳೆಂಬ ಕಾಲತ್ರಯದಲ್ಲಿಯು ನಾಶವನ್ನು ಪಡೆಯ ದಿರುವ ಸ್ವಸ್ವರೂಪವನ್ನು ಸಂದೇಹವಿಲ್ಲದೆ ಮತ್ತು ಮಾಲಿನ್ಯವಿ ಲ್ಲದೆ ತಿಳಿಯುವಿಕೆಯೆ ಆಸನವೆನ್ನಲ್ಪಡುವದು. ಇಂಥ ಆತ್ಮಸ್ವರೂ ಪವಾಗಿರುವ ತನಗೆ ಪುಣ್ಯಪಾಪಗಳ ಸಂಬಂಧ ವೆಂಬುವದು ಲೇಶವಾ ದರು ಇಲ್ಲವೆಂಬ ಶುದ್ಧವಾದ ಬುದ್ಧಿಯೆ ಪಾದೋದಕವೆನ್ನಲ್ಪಡು ವದು. ಇನ್ನು ಅನಾದಿಕಾಲದಿಂದ ॥೨॥ ಅನುಸರಿಸಿ ಬಂದು ಆವರಿಸಿ

---

೪ ವಚನ॥ ಮೂ॥ ಎಸಲಾ ವಿಚಾರ ಪುರೋಹಿತನ ಮಾತ್ಮಲಿಂ ಗಾರ್ಚನಾ, ವಿಧಿಯೆಂತೆಂದು, ಕೇಳಲನುರಾಗ ಪೂರ್ವಕದಿಂ, ಪೇಳಿದಪನದೆಂತೆನೆ.

## ಆತ್ಮಲಿಂಗಾರ್ಚನಾ ಕ್ರಮಃ.

॥ತ್ರಿಪುಡೆ॥

೫ ಮೂ ॥ ಕೆಡುವ ಭುವನಂಗಳೊಳಗಾನೆ ಕೆಡದೆಮಿಕ್ಕಿಹೆ ನೆಂಬ ಭಾವನೆ । ಒಡೆದುದಾವಾಹಾನವೆನಿಕ್ಕು ದೃಢವಾಗಿ ತನ್ನಾ ॥೧॥
ತಿಳಿವುದಾಸನ ತನಗೆತೋರದುಕಲುಷಪುಣ್ಯ ಸ್ಪೃಷ್ಟಿಯಿಂ
ತೆಂ । ಬಲಘಮತಿಯೆ ಪಾದ್ಯಬಹುಕಾಲಾದಿಯಘಾಗಿ ॥೨॥

ಕೊಂಡಿರುವ ಮೂಲಾಜ್ಞಾನವೆಂಬ ಕತ್ತಲು ದೋಷಲೇಶವಿಲ್ಲದೆ ನಿರ್ಮಲವಾಗಿರುವದರಿಂದಲೇ ಸ್ವತಃ ಪ್ರಕಾಶಮಾನವಾಗಿರುವ ತನಗೆ ಇಲ್ಲವೆಂಬದಾಗಿ ತಿಳಯುವದೇ ದಿವ್ಯವಾದ ಹಸ್ತೋದಕವೆನ್ನಲ್ಪಡುವದು. ಸ್ವರ್ಗ ಮರ್ತ್ಯ ಪಾತಾಳಗಳೆಂಬ ಮೂರುಲೋಕಗಳನ್ನು ಸ್ವಾಧೀನ ಮಾಡಿಕೊಂಡು ಪ್ರಭುತ್ವವನ್ನು ಮಾಡುತಲಿರುವ ದೇವತೆಗಳು ಅನವರತವು ಅಪರಿಮಿತವಾದ ಪ್ರಯತ್ನವನ್ನು ಮಾಡುತಲಿರುವರಾಗಿ ॥೩॥ ಯಾವ ಸದಾತ್ಮಕವಾದ ಬ್ರಹ್ಮವೆಂಬ ಸಮುದ್ರದಲ್ಲಿರುವ ಸುಖವೆಂಬ ಉದಕದ ಒಂದು ಬಿಂದುವಿನ ಒಂದು ಲೇಶವನ್ನು ಪಾನಮಾಡಿ ಪರಮಾನಂದಾನುಭವದಿಂ ದುಂಟಾದ ಸುಖಪಾರವಶ್ಯದಿಂದಿರುವೆನೆಂಬುವ ವಿವೇಕವು ಹುಟ್ಟಿದರೆ ॥೪॥ ಅದನ್ನು ಆಚಮನೋದಕವೆಂದು ಹೇಳುವರು. ನಾನಾ ಬಗೆಯಾದ ವಿಷಯಗಳ ಸಾರಾಸಾರವನ್ನು ಗ್ರಹಿಸುವ ದಶೇಂದ್ರಿಯಗಳಿಗೆ ಗೋಚರಿಸಿರುವ ಸ್ಥಾವರ ಜಂಗಮಾತ್ಮಕವಾದ ಪ್ರಪಂಚವನ್ನು ಅದಕ್ಕೆ ಅತೀತನಾಗಿರುವ ನಾನು ಒಂದು ಕಾಲಕ್ಕು ಸ್ಮರಿಸುವದಿಲ್ಲ. ॥೫॥ ಎಂಬದಾಗಿ ತಿಳಿಯುವದೆ ಸ್ನಾನವು, ಮತ್ತು ಸತ್ವರಜಸ್ತಮಗಳೆಂಬ ಗುಣತ್ರಯದಿಂದ ಮಿಳಿತವಾದ ಮಾಯೆಯ ಆವರಣಕ್ಕೆ ಲೇಶವಾದರು ಶಿಲುಕದಿರುವ ಶುದ್ಧವಾದ ಚೈತನ್ಯವು ನಾನೆ ಎಂಬದಾಗಿ ತಿಳಿವುದೆ ವಸ್ತ್ರವೆಂದೆನಿಪುದು ॥೬॥ ಪೃಥಿವ್ಯಪ್ತೇಜೋವಾಯ್ವಾಕಾಶ

---

ಪೊತ್ತಮೂಲಾಜ್ಞಾನ ಮಂತಾನುತ್ತರಿಪುದಘ್ರ್ಯಂಜಗತ್ತ್ರಯ
ಮೊತ್ತಿಯಾಳ್ವಸುರೇಂದ್ರ ಮುಖರಾಯತ್ತರಾಗಿ ॥೩॥
ಆವಸನ್ಮಯ ಜಲಧಿಸುಖ ನೀರಾಣುಲೇಶವಪೀರ್ದುತೃಪ್ತಿದ।
ಶಾವಿವಶರಾಗಿರ್ಪ ರೆಂಬಾ ವಿಚಾರ ಮುದಿಸೆ ॥೪॥
ಆಚಮನವೆನಿಸುವದು ನಾನಾ ಗೋಚರಾನಂದದಲಿ ಮುಳುಗಿರ। ಲೀಚರಾಚರ ಮನುನೆನೆಯುನ ಹೀನ ಮಹಿಮ ॥೫॥
ಎಂದೆಣಿಸುವುದೆ ಸ್ನಾನ ಮಾವೃತಿಯಿಂದ ಶಿಲುಕದನಿಚ್ಚ ಬೆಳಗಾ। ನೆಂದೆನುವದೆವಸ್ತ್ರಗುಣಗಳಿಗಿರದೆನಿಸುತಾ ॥೬॥

ಗಳೆಂಬ ಪಂಚಭೂತಗಳೆನಿಪ ಮುತ್ತಿನ ಮಣಿಗಳಲ್ಲಿ ಸತ್ಯಜ್ಞಾನಾನಂದ ಸ್ವರೂಪವಾದ ನಾನು ಎಂಬ ಪದಾರ್ಥವು ಅನವರತವು ಪ್ರೋಣಿಸಲ್ಪಟ್ಟಿರುವ ದೆಂಬದಾಗಿ, ಉಂಟಾದ ನಿಶ್ಚಲ ಬುದ್ಧಿಯ ಧಾರೆಯು ಯಜ್ಞೋಪವೀತವೆಂಬ ಉಪಚಾರವನ್ನಾಗಿ ಲೋಕದೊಳು ಅನುಭವವಿಶಾರದರಾದ ಸಾಧುಗಳು ನುಡಿಯುವರು. ॥೨॥

೬ ವ॥ ತಾ॥ ಬಗೆಬಗೆಯಾಗಿರುವ ಹುವ್ವು, ಗಂಧ, ಹಣ್ಣು, ಹೆಣ್ಣು, ಮೊದಲಾದ ವಿಷಯವಾಸನೆಗಳಿಂದ ಸಹಿತವಾದ ಈ ಚರಾಚರ ಪ್ರಪಂಚವು ನಿರಂತರದಲ್ಲಿಯೂ ನನ್ನಿಂದಲೇ ಧರಿಸಲ್ಪಟ್ಟಿರುವದೆಂಬ ಸಂತತ ಬುದ್ಧಿಭಾವನೆಯೇ ಸರ್ವೋತ್ತಮವಾದ ಗಂಧ ಸಮರ್ಪಣವೆಂಬ ಉಪಚಾರವೆಂಬದಾಗಿ ತಿಳಿಯತಕ್ಕದ್ದು.

೭ ಜಂಪೆ ॥ ತಾ ॥ ಲೋಕದೊಳು ತಿಲದಲ್ಲಿ ತೈಲವು ಯಾವಮೇರಿಗೆ ವ್ಯಾಪಿಸಿಕೊಂಡಿರುವುದೋ ? ಅದೇ ರೀತಿಯಿಂದಲೇ ಸ್ವಲ್ಪವಾದರೂ ಅವಕಾಶವನ್ನು ಬಿಡದೆ ಆತ್ಮಸ್ವರೂಪವಾಗಿರುವ ನಾನು ಚರಾಚರರೂಪವಾಗಿರುವ ಈ ಸರ್ವ ಪ್ರಪಂಚದಲ್ಲಿಯೂ, ವ್ಯಾಪಿಸಿರುವೆನೆಂಬ ಅಖಂಡವಾದ ಭಾವನೆಯೇ ಅಕ್ಷತ ಸಮರ್ಪಣವೆಂಬ ಉಪಚಾರವಾಗಿರುವದೆಂದು ಸಾಧುಗಳುಸುರುವರು. ॥೧॥ ತಾನು ಗುರುಕುಲವಾಸ ಮಾಡುವ ಸಮಯದೊಳು ತನ್ನ ಯಥಾರ್ಥವಾದ ಸ್ವರೂಪಸ್ಥಿತಿಯನ್ನು ಕರತಲಾಮಲಕದಂತೆ ಅನುಭವಕ್ಕೆ ಬರುವಹಾಗೆ ಉಪದೇ

---

ಭೂತ ಮುಕ್ತಾವಳಿಗಳೊಳುನಾಂ ಪ್ರೋತವಾಗಿಹ ಸೂತ್ರ
ಮೆಂಬಭಿ ! ಜಾತಮತಿ ಯಜ್ಞೋಪವೀತಂಸಾಧುಗಣ್ಯ ॥೨॥

೬ ಮೂ॥ ವ॥ ಅನೇಕವಾಸ ನಾವಿಶ್ರವಾದ ಪ್ರಪಂಚ ಮೆನ್ನಿಂ
ದಲೆ । ಧೃತಮೆಂಬ ಧ್ಯಾನಂ ಗಂಧಮೆನಿಪುದು.

೭ ಮೂ॥ ಜಂಪೆ। ಎಳ್ಳನಲಿಪೆಣ್ಣೆಯವೊಲೆಡೆಬಿಡದೆನಾನು। ಜಗ।
ದಲ್ಲಿಹೆನೆನುವದಕ್ಷತವ್ರಜಂಸತಿಲಂ ॥೧॥
ಗುರುಶಿವಾತ್ಮತ್ರಯದಿ ಕೂಡದಿದೆಭೇದವೆಂ । ಬರದಂಶಿರಿಮುರ
ದತಳಿರೆಸುತಘನರು ॥೨॥

ಶಿಸಿದ ಸದ್ಗುರುವಿನ ಪರಮಾರ್ಥ ಸ್ವರೂಪಕ್ಕು ಸಾಕ್ಷಾತ್ಪರಶಿವನ ಸ್ವರೂಪಕ್ಕೂ ಪ್ರತ್ಯಗಾತ್ಮ ಸ್ವರೂಪವಾಗಿರುವ ತನಿಗೂ ಕಾಲತ್ರಯದಲ್ಲಿಯೂ ಪರಮಾರ್ಥ ವಿಚಾರದಿಂದ ಭೇದವೆಂಬುವದು ಲೇಶಮಾತ್ರವೂ ಇಲ್ಲವೆಂದು ತಿಳಿಯುವದೆ ಬಿಲ್ವಪತ್ರಮರದ ಚಿಗುರುಗಳ ಸಮರ್ಪಣೆ ಎಂಬದಾಗಿ ಶಿವಾರ್ಚನಾ ಪರಾಯಣರಾದ ಮಹಾನುಭಾವರು ಹೇಳುತಲಿರುವರು. ॥೨॥ ಗುಣತ್ರಯ ಸ್ವರೂಪವಾದ ಅವಿದ್ಯೆಯ ಮಹಿಮೆಯಿಂದ ಕಳದ ಜನ್ಮಗಳಲ್ಲಿಯೂ, ಈಗಿನ ಮತ್ತು ಮುಂಬಿನ ಜನ್ಮಗಳಲ್ಲಿಯೂ, ಪ್ರಾಪ್ತವಾದ ಇನ್ನೂ ಪ್ರಾಪ್ತವಾಗುವ ರೂಪರಸಾದಿ ವಿಷಯಗಳ ವಾಸನಾ ಸಂಬಂಧವೆಂಬುದು ನಿಜಾತ್ಮ ಸ್ವರೂಪವಾದ ನನಿಗೆ ಇಲ್ಲವೆಂದರಿವುದೇ ಕೃಷ್ಣಾಗರುವಿನಿಂದ ಹಾಕಿದ ಧೂಪಸಮರ್ಪಣವೆಂಬ ಉಪಚಾರವೆಂದು ಆರ್ಯರು ಪೇಳುವರು. ॥೩॥ ಹಗಲಿರಳು ಕಾಣಬರುವ ಸೂರ್ಯ, ಚಂದ್ರ, ಅಗ್ನಿ, ಮುಂತಾದ ಅಲ್ಪಪ್ರಕಾಶವುಳ್ಳ ಪದಾರ್ಥಗಳ ಬೆಳಕಿನಿಂದ ನಾನು ಎಂದಿಗೂ ಪ್ರಕಾಶಿಸುವದಿಲ್ಲವು. ಮತ್ತು ಈ ಸೂರ್ಯಚಂದ್ರಾದಿಗಳನ್ನು ನಾನು ಎಂಬ ಪದಾರ್ಥದ ಅಪಾರವಾದ ಪ್ರಕಾಶದ ಲೇಶಮಾತ್ರದಿಂದ ಪ್ರಕಾಶಪಡಿಸುತಲಿರುವೆನು. ಎಂಬ ಬುದ್ಧಿಪ್ರಕಾಶವೇ ದೀಪಸಮರ್ಪಣವೆಂಬ ಉಪಚಾರವನ್ನಾಗಿ ಹೇಳುವರು.॥೪॥ಈಪ್ರಪಂಚದೊಳು ಕಾಣಬರುವ ಪೃಥಿವ್ಯಾದಿ ಭೂತಗಳನ್ನು ಇವುಗಳಕಾರ್ಯಗಳನ್ನು ನಾನು ನಿರಂತರದಲ್ಲಿಯೂ ಗ್ರಾಸಮಾಡುತಲಿರುವೆನು ಎಂಬದಾಗಿ ಉಂಟಾಗುವ ದೃಢತರವಾದ ಭಾವನೆಯೆ ನೈವೇದ್ಯವೆಂಬ ಉಪಚಾರವೆನ್ನಲ್ಪಡುವದೆಂದು ಹಿರಿಯರು

---

ಭವಭವಂಗಳೊಳೊಡನೆಬಂದವಾಸನೆಯುಸಂ । ಗವನಿಷೇಧಿಸು
ವದೆಯುಗರುಧೂಪಮುಕ್ಕುಂ ॥೩॥
ಖಗಪಾದಿಯಿಂದಾಂಪ್ರಕಾಶಿಸೆ ಪ್ರಕಾಶಿಸುವೆ । ಖಗಪಾದಿಗಳ
ನೆಂಬಕಾಂತಿಯೆದೀಪಂ ॥೪॥
ಉಂಬೆನೀಭುವನದಕದಂಬಮಂ ನಿತ್ಯಮಾಗೆಂಬುದೆ । ನೈವೇದ್ಯ
ವೆಂಬರುಪಿರಿಯರು ॥೫॥

ಹೇಳುವರು. ॥೫॥ ಮನಸ್ಸು, ವಾಕ್ಕು, ಕಾಯ, ಎಂಬ ಕರಣತ್ರಯದೊಳಗೆ ಒಂದರಲ್ಲಿ ಮತ್ತೊಂದನ್ನು ಆರೋಪಿಸುವ ಮಲಿನವಾದ ಭ್ರಮೆಗೆ ನಾನು ಯಾವಾಗಲೂ ಬೇರೆ ಯಾಗಿಯೇ ಇರುವೆನೆಂಬ ಶ್ಲಾಘ್ಯವಾದ ಭಾವನೆಯೇ ತಾಂಬೂಲವೆಂಬ ಉಪಚಾರ ಸಮರ್ಪಣೆಯಾಗುವದೆಂದು ಆರ್ಯರು ಅರುಹುತಿರುವರು. ॥೬॥ ಕೂಟಸ್ಥವಾಗಿಯೂ ಎಲ್ಲಾ ಕಾಲಗಳಲ್ಲಿಯೂ, ಎಲ್ಲಾ ವಸ್ತುಗಳಲ್ಲಿಯೂ ಎಲ್ಲಾ ದೇಶಗಳಲ್ಲಿಯೂ, ವ್ಯಾಪಕವಾಗಿರುವ ಬ್ರಹ್ಮಪದಾರ್ಥಕ್ಕೆ ಅಭಿನ್ನವಾಗಿರುವ ನಾನು ಎಂಬ ಪದಾರ್ಥದಲ್ಲಿಯೇ ಅನೇಕಕೋಟಿ ಬ್ರಹ್ಮಾಂಡಗಳು ಅನವರತವೂ ಕುಂಭಕಾರನ ॥೭॥ ಚಕ್ರದ ತೆರದೊಳು ತಿರುಗುತಿರುವವೆಂಬ ಸಂಶಯ ರಹಿತವಾಗಿ ವೇದಶಾಸ್ತ್ರಾಧ್ಯಯನದಿಂದ ಉಂಟಾದ ವಿಚಾರಣೆಯೇ ಪ್ರದಕ್ಷಿಣ ಸಮರ್ಪಣೆಯೆನ್ನಲ್ಪಡುವದು. ವಿಷ್ಣುವೇ ಮುಂತಾದ ನಿಖಿಲದೇವತೆಗಳ ಸಮುದಾಯದಲ್ಲಿ ನಿತ್ಯಜ್ಞಾನಾನಂದ ಸ್ವರೂಪನಾದ ನಾನು ಎಂಬ ಪದಾರ್ಥವೇ. ॥೮॥ ನಮಸ್ಕಾರ ಯೋಗ್ಯವಲ್ಲದೆ ಅನಿತ್ಯವಾಗಿಯೂ ದೋಷಯುಕ್ತವಾಗಿಯೂ, ಇರುವ ಈ ದೇವತೆಗಳೂ, ಈ ಜಗತ್ತು ಯಾವದೊಂದು ಆತ್ಮಸ್ವರೂಪವಾದ ನನ್ನಿಂದ ನಮಸ್ಕಾರಾರ್ಹವಲ್ಲವೆಂಬ ಸರ್ವೋತ್ತಮವಾದ ಭಾವನೆಯೇ ಪ್ರಣಾಮ ಸಮರ್ಪಣವೆಂಬ ಉದಾರವಾದ ಉಪಚಾರವೆಂದು ಉತ್ತಮರುಸುರುವರು. ... ॥೯॥

---

ಕರಣತ್ರಯಾಧ್ಯಾಸಕಲ್ಮಷಸ್ಥಿತಿಗೆ ನಾಂಪೊರಗೆಂಬುದದುವೆ ।
ತಾಂಬೂಲವಾಗಿಹುದು ॥೬॥
ಕೂಟಸ್ಥನಾದೆನ್ನಕುಕ್ಷಿಯಲ್ಲಿಯೆಜಗ । ತ್ಕೋಟಿಗಳ್ತಿರುಗು
ವವುಕುಂಭಕಾರಕನಾ ॥೭॥
ಚಕ್ರದತೆರದೊಳೆಂಬಚರ್ಚೆಯೆಪ್ರದಕ್ಷಿಣಂ । ಚಕ್ರಿಪ್ರಮುಖ
ದೇವಸರಣಿಯುಲ್ಲಾನೇ ॥೮॥
ವಂದ್ಯನಲ್ಲದೆತುಚ್ಛವಾದಜಗವೆನ್ನಿಂದ । ವಂದ್ಯವಲ್ಲೆಂಬುದೆ
ವಂದನೆಯೆನಿಪುದು ॥೯॥

೪ ವ॥ ತಾ॥ ಸರ್ವವ್ಯಾಪಿಯಾಗಿ ಆತ್ಮಸ್ವರೂಪನಾದ ಈಶ್ವರ ನಿಗೆ ದೃಷ್ಟಿಗೆ ಗೋಚರಿಸುವ ಈ ಪ್ರಪಂಚವನ್ನು ಲಕ್ಷ್ಯವಾಡಿ ಕೊಂಡು, ವೇದ ಶಾಸ್ತ್ರಗಳಲ್ಲಿ ಹೇಳಿರುವ ಮೇರಿಗೆ ಕ್ಲಿಪ್ತವಾಗಿ, ಹದಿನೇಳು ಬಗೆಗಳಾಗಿರುವ ಉಪಚಾರಗಳನ್ನು ಮೇಲೆ ವಿಸ್ತರಿಸಿ ದಂತೆ ಹೇಳಿ ತರುವಾಯ ಈ ಪ್ರತ್ಯಕ್ಷವಾಗಿರುವ ಜಗತ್ತನ್ನೆ ಹೇತುವನ್ನಾಗಿ ಮಾಡಿಕೊಂಡು ಆ ಜಗತ್ತನ್ನು ಸಕಾರಣವಾಗಿ ತಿರ ಸ್ಕಾರವಾಡುವದರ ಮೂಲಕ ಆತ್ಮಸ್ವರೂಪವಾದ ಪರಶಿವನ ಪೂ ಜಾ ವಿಧಾನವಂ ನಿಗಮಾಗಮ ಸಮ್ಮತವಾಗಿ ಇಂತೆಂದು ಪೇಳುವನು.

ಆತ್ಮಲಿಂಗಾರ್ಚನಾ ಪ್ರಥಮಪದ್ಧತಿಯು ಮುಗಿದುದು.

## ೨ ಶಿವಪೂಜಾ ಪದ್ಧತಿ ಪ್ರಾರಂಭವು.

೧ ಏಕತಾಳ॥ ತಾ॥ ವೇದಶಾಸ್ತ್ರಗಳನ್ನು ಪ್ರಮಾಣಗಳೆಂದೆಣಿಸಿ ಅ ವುಗಳಲ್ಲಿ ಉದಿತವಾಗಿರುವಂತೆ ವಿಚಾರವನ್ನು ಮಾಡಿದ್ದೆ ಆದರೆ ಸ್ವಲ್ಪ ವಾದರೂ ಎಡೆಬಿಡದೆ ಈಚರಾಚರಾತ್ಮಕವಾದ ಪ್ರಪಂಚದಲ್ಲಿ ಸರ್ವ ತ್ರವ್ಯಾಪಿಯಾಗಿರುವ ಆತ್ಮಲಿಂಗಕ್ಕೆ ಮಾಡುವದಕ್ಕು ಮಾಡುವವನಿ ಗೂ ಪರಮಾರ್ಥವಾಗಿ ಅವಕಾಶವೇ ಇಲ್ಲದಿರುವದ್ದರಿಂದ ಆವಾಹನ ವೆಂಬ ಉಪಚಾರವೇ ಇಲ್ಲವೆಂಬದಾಗಿ ಪ್ರಾಜ್ಞರು ಅರಿಯಬೇಕು.

---

೪ ಮೂ॥ ವ॥ ಆತ್ಮೇಶ್ವರನಿಗೆಂದು ದೃಶ್ಯಭೂತ ಪ್ರಪಂಚವಂ ಕುರಿತು । ವಿಧಿ ಮುಖದಿಂದೆಣಿಸಿದ ಸಪ್ತದಶೋಪ ಚಾರವಂ ಪೇಳಿ। ಮತ್ತಂ ದೃಶ್ಯಭೂತ ಪ್ರಪಂಚವಂ ಕುರಿತು ನಿ ಷೇಧ ರೂಪದಿಂ ಸ್ವರೂಪ ಲಿಂಗಾರ್ಚನೆಯಂ ಪೇಳುತಿರ್ದ ಪನದೆಂತೆನೆ.

ಆತ್ಮಲಿಂಗಾರ್ಚನಾ ಪ್ರಥಮಪದ್ಧತಿಯು ಸಂಪೂರ್ಣವು.

## ೨ ಶಿವಪೂಜಾ ಪದ್ಧತಿ ಪ್ರಾರಂಭವು.

೧ ಮೂ॥ ಏಕತಾಳ॥ ಊಹಿಸಲಖಿಲದೊಳಗಿಪುದಕಾ । ವಾಹನೆ ಯೆ ನಮ್ಮಾ ವಾಸವಾಗಿರುವಾ ॥೧॥

ಅಂದರೆ ಈ ಮೇಲ್ಕಂಡಂತೆ ಉಂಟಾಗುವ ತಿಳುವಳಿಕೆಯೆ ಆವಾಹನ ವೆಂಬ ಉಪಚಾರವೆಂದು ಭಾವವು. ॥೧॥ ಸತ್ತಾಮಾತ್ರಪ್ರಧಾನವಾಗಿ ರುವದರಿಂದಲೇ ವಸ್ತುಮಾತ್ರವಾಗಿರುವದಕ್ಕೆ ಆಸನವೆಂಬ ಉಪಚಾ ರವು ನಿಮಿತ್ತವೆ ಇಲ್ಲವು. ಭೂತಭವಿಷ್ಯದ್ವರ್ತಮಾನಗಳೆಂಬ ಕಾಲ ತ್ರಯದಲ್ಲಿಯೂ ಅಬಾಧಿತ ಮಾಗಿರುವದರಿಂದಲೇ ಸದ್ರೂಪವಾಗಿ ರುವಭಾವನೆಯಿಂದ ಆವರಣವನ್ನು ನಿವಾರಣೆಮಾಡಲು ಅಪಾರಮಾ ರ್ಥಿಕವಾದ ಮಾಯಾ ಮಾಲಿನ್ಯದಿಂ ದೊಡಗೂಡಿದ ಆತ್ಮಲಿಂಗಕ್ಕೆ ಪಾದಪ್ರಕ್ಷಾಳನಕ್ಕೆ ಅರ್ಹವಾದ ಜಲವು, ಹಸ್ತಪ್ರಕ್ಷಾಳನೆಗೆ ಉಪ ಯುಕ್ತವಾದ ಉದಕವೂ, ಆಚಮನವು, ನಿಮಿತ್ತವಿಲ್ಲವೆಂಬದಾಗಿ, ತಿಳುವಳಿಕೆಯು ಮೂಲಕ ನಿಷೇಧಿಸುವದೇ ಪಾದ್ಯಾರ್ಘ್ಯಾಚಮ ನಗಳೆಂಬ ಉಪಚಾರವೆಂದು ಪ್ರಾಜ್ಞರು ಉದಹರಿಸುವರು. ॥೨॥ ದೋಷಗಂಧ ರಹಿತವಾಗಿರುವದರಿಂದಲೇ ಅತ್ಯಂತ ನಿರ್ಮಲವಾಗಿರು ವ ಸ್ವತಃ ಪ್ರಕಾಶಮಾನವಾದ ಚಿತ್ಸ್ವರೂಪಕ್ಕೆ ಸ್ನಾನವೆಂಬುವ ದು ಹ್ಯಾಗೆ ಸಂಭವಿಸುವದು, ಸರ್ವಾಂತರ್ಯಾಮಿಯಾಗಿ ಇದ್ದುಕೊಂ ಡು ಚರಾಚರಾತ್ಮಕವಾದ ಸಕಲ ಪ್ರಪಂಚವನ್ನು ಬದುಕಿ ಇರುವ ಹಾಗೆ ಮಾಡಿಕೊಂಡಿರುವ ಅಚಿಂತ್ಯವಾದ ಶಕ್ತಿಯುಳ್ಳ ಆತ್ಮಸ್ವರೂ ಪವಾದ ಲಿಂಗಕ್ಕೆ ಮನೋಹರವಾದ ವಸ್ತ್ರವೆಂಬುಪಚಾರವು ಎಂ ತು ಸಮನಿಸುವದು. ಎಂಬ ಅನುಭವಜನ್ಯವಾದ ನಿಷೇಧವೇ ಸ್ನಾ ನವಸ್ತ್ರಗಳೆಂಬ ಉಪಚಾರವೆಂಬದಾಗಿಉತ್ತಮರು ಪೇಳುವರು ॥೩॥ ವ್ಯಾವಹಾರಿಕಗಳಾಗಿರುವ ಗೋತ್ರಗಳಲ್ಲಿ ಯಾವದೊಂದು ವಿಧವಾದ ಗೋತ್ರವೂ ಇಲ್ಲದೆ ಇರುವ ವಸ್ತುವಿಗೆ ಉಪವೀತಸಮರ್ಪಣವುಂ ಟೆ ? ಸ್ಥೂಲಸೂಕ್ಷ್ಮಕಾರಣಗಳೆಂಬ ಶರೀರತ್ರಯದಲ್ಲಿ ಯಾವ ಶರೀ

---

ವಸ್ತುಮಾತ್ರಕೆ ಪಟ್ಟವಣೆಯೆ ಭಾವನಿ । ರಸ್ತಕಲುಷಕೆ ಪಾ
ದ್ಯಾರ್ಘ್ಯಾಚಮನವೆ ॥೨॥

ಕೇವಲ ಚಿನ್ಮಯಕೆ ಸ್ನಾನವೇ ಮಂತರ್ಜೀವಿತ ವಿಶ್ವಕ್ಕೆ ಚೇ
ಲವೇಚಾರು ॥೩॥

ರವೂ ಇಲ್ಲದಿರುವ ವಸ್ತುವಿಗೆ ಗಂಧೋಪಚಾರವೆಂಬದು ಹ್ಯಾಗೆ? ಆ ಖಂಡವಾಗಿರುವದರಿಂದಲೇ ಘನವಾಗಿರುವದಕೆ ಅಕ್ಷತೋಪಚಾರವೆಂಬುವದು ಎಂತು ಸಂಭವಿಸುವದು, ಎಂಬಶ್ಲಾಘ್ಯತರವಾದ ಭಾವನೆಯೆ ಉಪವೀತಗಂಧಾಕ್ಷತ ಸಮರ್ಪಣವೆಂದು ಉತ್ತಮರುಸುರುವರು. ||೪|| ಕಾಲಪರಿಚ್ಛೇದವು ವಸ್ತುಪರಿಚ್ಛೇದವು ದೇಶಪರಿಚ್ಛೇದವು ಇಲ್ಲದಿರುವ ಅಂದರೆ ಎಲ್ಲಾ ಕಾಲಗಳಲ್ಲಿಯು ಎಲ್ಲ ವಸ್ತುಗಳಲ್ಲಿಯು ಇರುವ ವಸ್ತುವಿಗೆ ಪುಷ್ಪಸಮರ್ಪಣೆಯು ಕೆಲಸವಿಲ್ಲವು ಅಚೇತನ ಸ್ವರೂಪವಾಗಿರುವ ಚರಾಚರ ಪ್ರಪಂಚಕ್ಕೆ ಸಂಬಂಧಪಟ್ಟಕ್ರಿಯಾದಿ ದೋಷಗಳ ಗಂಧರಹಿತವಾಗಿ, ||೫|| ಗುಣತ್ರಯಾತ್ಮಕವಾದ ಮಾಯೆಯ ಸಂಬಂಧ ಶೂನ್ಯವಾಗಿಯು ಇರುವ ವಸ್ತುವಿಗೆ ಸುವಾಸನೆ ಯಿಂದೊಡಗೂಡಿದ ಧೂಪೋಪಚಾರವು ನಿಮಿತ್ತವಿಲ್ಲವು. ಸರ್ವಪ್ರಕಾರದಲ್ಲಿಯು ತಾನು ಮತ್ತೊಂದಕ್ಕೆ ಸಾಕ್ಷಿಯಾಗಿಯೂ, ತನಗೆ ಮೆತ್ತೊಂದು ಸಾಕ್ಷಿಯಿಲ್ಲದಿರುವದಾಗಿಯು ಇರುವ ಅಮೋಘವಾದ ಆತ್ಮಪದಾರ್ಥಕ್ಕೆ ದೀಪೋಪಚಾರವು ಅವಶ್ಯಕವಿಲ್ಲವು. ನಿತ್ಯಾನಂದ ಮಯವಾಗಿರುವದರಿಂದಲೇ, ನಿತ್ಯತೃಪ್ತವಾಗಿರುವ ಆತ್ಮಲಿಂಗಕ್ಕೆ ದಿವ್ಯಾನ್ನ ನಿವೇದನೋಪಚಾರವು ಸರ್ವಾತ್ಮನಾ ಅವಶ್ಯಕವಿಲ್ಲವು. ಎಂಬದಾಗಿ ಪರಮಾರ್ಥ ವಿಚಾರದಿಂದ ಮಾಡುವ ನಿಷೇಧವೇ ಪುಷ್ಪ,ಧೂಪ, ದೀಪ, ನಿವೇದನಗಳೆಂಬ ಉಪಚಾರಗಳೆನ್ನಲ್ಪಡುವವು. ||೬|| ಈ ಕಾಣಬರುವ ಸ್ಥಾವರ ಜಂಗಮಾತ್ಮಕವಾದ ಸರ್ವಪ್ರಪಂಚಕ್ಕೆ ಅಧಿಷ್ಠಾನವಾಗಿ ಅಂದರೆ ಆಶ್ರಯವಾಗಿರುವ

---

ಗೋತ್ರಾತಿಗಕ್ಕೆ । ಯಜ್ಞೋಪವೀತವೇಚ್ಯುತ । ಗಾತ್ರಕೆ ಗಂಧವೆ ಘನವಾದಕ್ಷತವೆ ||೪||

ಎಡೆದೆರವಿಲ್ಲದ ಮೃಡಕೆ ಕುಸುಮಗಳೆ । ಜಡಜಗತ್ಕರ್ತೃವ್ಯಾಜ ಡರಳಿದುದಕ್ಕೆ ||೫||

ಧೂಪವೆ ನಿರ್ಗತ ಧೂಪಕೆ । ಸಾಕ್ಷಿಗೆ ದೀಪವೆ ತೃಪ್ತಕೆ ದಿವ್ಯೋದನವೆ ||೬||

ದಾಗಿಯು ಭೇದವೆಂಬ ಪದಾರ್ಥದ ವಾಸನೆಯೇ ಇಲ್ಲದಿರುವದಕ್ಕೆ ತಾಂಬೂಲ ಸಮರ್ಪಣೆಯನ್ನು ಮಾಡುವದು ಹ್ಯಾಗೆ ಮತ್ತು ಉತ್ಪತ್ತಿ ಶೂನ್ಯವಾಗಿರುವದರಿಂದ ಆದಿಯಿಲ್ಲದಿರುವದಾಗಿಯು ನಾಶವನ್ನು ಪಡೆಯದ್ದರಿಂದ ಅಂತ್ಯವಿಲ್ಲದಿರುವದಾಗಿಯೂ ಇರುವವಸ್ತುವಿಗೆ॥೭॥ ಪ್ರದಕ್ಷಿಣವೆಂಬ ಉಪಚಾರವನ್ನು ಮಾಡುವದಕ್ಕೆ ಹ್ಯಾಂಗೆ ಸಮಂಜಸವಪ್ಪುದು! ಋಗಾದಿ ವೇದಗಳಿಗೂ ಈವೇದಗಳ ಶಿರಗಳಾದ ಉಪನಿಷತ್ತುಗಳಿಗೂ ಸ್ತೋತ್ರಮಾಡುವದಕ್ಕೆ ಗೋಚರಿಸದಿರುವ ಅಮೇಯವಾದ ಆತ್ಮಪದಾರ್ಥವನ್ನು ಸ್ತೋತ್ರಮಾಡುವದು ಹ್ಯಾಗೆ? ಈಹಿಂದೆ ಹೇಳಿದ ಸರ್ವೋತ್ತಮವಾದ ಲಕ್ಷಣಗಳಿಂ ದೊಡಗೂಡಿದ. ॥೮॥ ಆತ್ಮಸ್ವರೂಪವಾಗಿರುವ ತನಗೆ ಈಮೇಲೆ ಹೇಳಿದ ಕ್ರಿಯಾರೂಪವಾಗಿರುವ ಸಪ್ತದಶೋಪಚಾರಗಳು ನಿಮಿತ್ತವಿಲ್ಲವೆಂದು ನಿಷೇಧ ಮಾಡುವಿಕೆಯೆ ಸಚ್ಚಿದಾನಂದಾತ್ಮಕವಾದ ಆತ್ಮಲಿಂಗಕ್ಕೆ ಅಮೋಘವಾದ ಅರ್ಚನವೆಂದು ತತ್ವಶಾಸ್ತ್ರಪಾರೀಣರಾದ ಮಹನೀಯರು ಪೂಜಿಸುತಲಿರುವರು, ಆದಕಾರಣ ನೀನು ಪ್ರತಿದಿನದಲ್ಲಿಯು ಈ ರೀತಿಯಿಂದಲೆ ಅಸದೃಶವಾದ ಆತ್ಮೋಪಚಾರವನ್ನು ಮಾಡುತ್ತಿರಬೇಕೆಂದಾಶಯವು. ॥೯॥

೧ ವ॥ ತಾ॥ ಈ ಪ್ರಕಾರವಾಗಿ ಸ್ವಸ್ವರೂಪವಾದ ಶಿವನ ಪೂಜಾವಿ

ಮೂಲವಾಗಿಹ ಭೇದವೊಂದದಿರ್ಪುದಕೆ ತಾಂಬೂಲವೆ ಯಂತವ ಪೊಂದದಿರ್ಪುದಕೆ ॥೭॥
ಬಲಗೊಂಬುದೆ ವೇದ ಪಟಲಾಗಮ್ಯಕೆ। ಲಲಿತನುತಿಯೆ ಯೇಕ ಲಕ್ಷಣಮುಳ್ಳಾ್ಗೆ ॥೮॥
ತನಗೆಂಬುದೇ ಪೂಜೆ ನಾತ್ವೀಕರನುಭವ। ಘನವಿದು ನೀನಿದ ನನುದಿನನಡಸು ॥೯॥

೧ ಮೂ॥ ವ॥ ಇಂತೆಂದು ಸ್ವರೂಪ ಶಿವಪೂಜಾಪದ್ಧತಿಯಂ ಪೇಳಿ ಸಂತೋಷಚಿತ್ತದಿಂದಿನ್ನೊಂದು ಪ್ರಕಾರವಂ ಪೇಳುತಿರ್ದಪನೆಂತೆನೆ.

ಧಾನವನ್ನು ಸವಿಸ್ತಾರವಾಗಿ ಹೇಳಿ ಪರಮಾನಂದವನ್ನು ಹೊಂದಿದ ಚಿತ್ತದಿಂದ ಮತ್ತೊಂದು ರೀತಿಯಿಂದ ಅಪ್ರತಿಮವಾದ ಆತ್ಮಾರಾಧನ ಪ್ರಕಾರವನ್ನು,ವೇದಶಾಸ್ತ್ರಗಳಿಗೆ ಅನುಸಾರವಾಗಿ ಇಲ್ಲದೆ ಕೇವಲ ಅನಾತ್ಮಾಭಿಮಾನಿಗಳಾಗಿರುವಂಥವರ ಮತಗಳನ್ನು ಸಕಾರಣವಾಗಿಯೂ, ಸಪ್ರಮಾಣವಾಗಿಯೂ ಸಯುಕ್ತಿಕವಾಗಿಯು ನಿರಾಕರಣೆಯನ್ನು ಮಾಡಿ ಹೇಳುತ್ತಲಿಧಾನೆ.

೧ ಶಿವಪೂಜಾ ಪದ್ಧತಿಯು ಮುಗಿದುದು.

## ೨ ಅನಾತ್ಮ ನಿರಸನ ಪದ್ಧತಿ ಪ್ರಾರಂಭವು.

೧ ಜಂಪೆ॥ ತಾ॥ ಲೋಕದೊಳು ತಾನೇ ತನ್ನ ಮಗನೆಂಬದಾಗಿ ಅಥವಾ ತನಗಿಂತಲೂ ಭಿನ್ನನಾಗಿಯೂ ಪರಮಾರ್ಥವಾಗಿ ತನ್ನ ಸಂಬಂಧವಿಲ್ಲದೆಯು ಇರುವ ತನ್ನ ಮಗನೇ ತಾನೆಂಬದಾಗಿಯೂ ತಿಳಿದಿರುವರ ಮಾತುಗಳನ್ನು ನೀನು ಖಂಡಿತವಾಗಿಯು ಕೇಳಬೇಡ. ಮತ್ತು ಅಚೇತನವಾಗಿರುವದರಿಂದಲೇ ಜಡವಾಗಿರುವ ಈ ದೇಹವನ್ನೇ ನಾನು ಎಂಬದಾಗಿ ತಿಳಿದಿರುವ ಅಂದರೆ ದೇಹಾತ್ಮವಾದಿಗಳಾಗಿರುವವರ ಗುಂಪಿನಲ್ಲಿ ಒಂದು ಕಾಲಕ್ಕೂ ಸೇರಬೇಡ. ॥೧॥ ಇನ್ನು ಚಕ್ಷುರಾದಿ ಜ್ಞಾನೇಂದ್ರಿಯಗಳನ್ನಾಗಲಿ, ಪಾಣಿಪಾದಾದಿ ಕರ್ಮೇಂದ್ರಿಯಗಳನ್ನಾಗಲಿ ಯಾರಾದರೆ ಆತ್ಮಸ್ವರೂಪವೆಂದು ಉಸುರುವರೋ ಅಂಥವರ ಮಾತಿನಲ್ಲಿ ನಂಬಿಗೆಯನ್ನು ಒಂದುಕಾಲಕ್ಕೂ ಇಡಬೇಡ ಅಲ್ಲದೆ ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನಗಳೆಂಬ ಪಂಚಪ್ರಾಣ

---

೧ ಶಿವಪೂಜಾ ಪದ್ಧತಿಯು ಸಂಪೂರ್ಣಮ್.

೨ ಅನಾತ್ಮ ನಿರಸನ ಪದ್ಧತಿ ಪ್ರಾರಂಭವು.

೧ ಮೂ॥ ಜಂಪೆ॥ ಸುತನಾತ್ಮನೆಂಬವರಸುದ್ದಿಯಂಗೈಯ್ಯದಿರು।
ಕುತನುತಾನೆಂಬುವರಕೂಟವೈದದಿರು ॥೧॥
ತಾನೆಂಬರಿಂದ್ರಿಯವಿತಾನಮುಂನೆಂಬದಿರು । ಪ್ರಾಣಗಳನಾತ್ಮ
ನೆಂಬುವರಪೊಂದದಿರು ॥೨॥

ವೃತ್ತಿಗಳನ್ನು ಆತ್ಮವೆಂಬದಾಗಿ ನುಡಿಯುವವರ ಸ್ನೇಹವನ್ನು ಮಾಡಲೇ ಬೇಡ ಅಂದರೆ ಪ್ರಾಣಾತ್ಮವಾದಿಗಳನ್ನು ಸ್ನೇಹಿಸಬೇಡ ॥೨॥ ಅನೃತ ಮಯಮಾಗಿಯು ದೋಷಕಲುಷಿತವಾಗಿಯು ಜಡವಾಗಿಯೂ ಇರುವ ಅಹಂಕಾರವನ್ನು ಆತ್ಮಸ್ವರೂಪವೆಂದು ಹೇಳುವವರನ್ನು ಯಾವ ವಿಷಯ ವಿಚಾರಕ್ಕು ಕೋರಲೇ ಬೇಡ. ಈರೀತಿಯಾಗಿ ನಿರೂಪಿಸುವಂಥವರ ವಚನ ಪರಂಪರೆಯು ಮರಳಿನ ಸೇತುವೆಯಂತೆ ದಾರ್ಢ್ಯವಿಲ್ಲದ್ದಾಗಿರುವದು ಇವರೆಲ್ಲರು ತತ್ವವನ್ನು ವಿಚಾರಮೂಲಕವಾಗಿ ಅರಿಯದೆ ಭ್ರಾಂತರಾಗಿರುವರು ಈಭ್ರಾಂತರೊಂದಿಗೆಶೇರಿದರೆ ನೂರು ಜನಕುರುಡರಿಗೆ ಒಬ್ಬಕುರುಡನು ದಾರಿಯನ್ನುತೋರಿಸುವೆನೆಂದು ಕರದುಕೊಂಡು ಹೋದರೆ ಅವನು ಅವರೂ ಹ್ಯಾಗೆಹಳ್ಳದಲ್ಲಿ ಬೀಳುವರೋ ಅದರಂತಾಗುವದು ಆದ್ದರಿಂದಲೇ ಇವರ ಜತೆಯನ್ನು ಶೇರಿದಿರು. ॥೩॥ ನಿರ್ಗುಣನಾಗಿಯು ನೀರೂಪನಾಗಿನಾಗಿಯು ನಿರ್ಲೇಪಿಯಾಗಿಯು ಇರುವ ಪರಶಿವನಲ್ಲಿ ಯಾವನಾದರು ದೋಷಗಳನ್ನಾಗಲಿ, ಗುಣಗಳನ್ನಾಗಲಿ ಎಣಿಸಿದರೆ ಅಂಥವರಿಗೆ ನಿಜವಾದ ಆತ್ಮಸ್ವರೂಪವೆಂಬುವದು ಖಂಡಿತವಾಗಿ,ತಿಳಿಯದಾದ ಕಾರಣ ಅವರಮಾರ್ಗವನ್ನು ಕನಸಿನಲ್ಲಿಯೂ ಮೆಟ್ಟದಿರು ನಾನು ಎಂಬಪದಾರ್ಥವು ಯಾರೆಂದರೆ ಅಮೋಘವಾದ ಆತ್ಮನೆಂಬದಾಗಿ ಅರಿತುಕೊಳ್ಳು ॥೪॥ ಮತ್ತಂ ವಿವರಿಸುವೆ ನಾಲೈಸು! ಸರ್ವಸಾಕ್ಷಿಯಾಗಿಯು,ಅವಿಕಾರಿಯಾಗಿಯೂ ಇರುವದರಿಂದ ಕೂಟಸ್ಥನಾಗಿಯು,ಕಾಲತ್ರಯದಲ್ಲಿಯೂ ಅಬಾಧಿತವಾಗಿರುವದ್ದರಿಂದ ಸತ್ವಗುಣ ಪ್ರಧಾನ ವಾಗಿರುವ ಮಾಯೆ

---

ಅಂತರಂಗವನಾತ್ಮನವುದೆಂಬರೆಳಸದಿರು। ಇಂತಿವರಸಂಗದಿಂದಿ
ಹುದಾತ್ಮನಲ್ಲಿ ॥೩॥
ಗುಣದೋಷವೆಂಬವರ ಕುಲಪಥವಮೆಟ್ಟದಿರು । ಎಣಿಸುನಾನಾ
ರೆನ್ನಲೀಶ್ವರನೆನುತಾ ॥೪॥
ಪ್ರತ್ಯಗಾತ್ಮನೆನುತ್ತಪರಮಾತ್ಮನೆಂದೆನುತ । ಸತ್ಯನೆಂದೆನು
ತನಿಸ್ಸಂಗನೆಂದೆನುತ ॥೫॥

[ 3 ]

ಯು ಇಲ್ಲವೆ ಮಲಿನ ಸತ್ವಪ್ರಧಾನವಾದ ಅವಿದ್ಯೆಯು ಸಂಬಂಧದಿಂದ ಶೂನ್ಯವಾಗಿಯೂ, ಇರುವ ಆತ್ಮಸ್ವರೂಪವೇ ನಾನು ಎಂಬ ಪದಾರ್ಥವೆಂಬದಾಗಿ ತಿಳಿದುಕೊ. ... ... ||೫||

೨ ವ|| ತಾ|| ಈ ಪ್ರಕಾರವಾಗಿ ಚೇತನ ಸ್ವರೂಪವಾದ ಆತ್ಮಪದಾರ್ಥವಲ್ಲದ ಪದಾರ್ಥಗಳನ್ನು ತ್ಯಾಗ ಮಾಡುವ ದಾರಿಯನ್ನು ಸುಲಭವಾಗಿಯೂ, ಸಯುಕ್ತಿಕವಾಗಿಯೂ, ವಿಶದವಾಗಿಯೂ, ಅರುಹಿ ಲೋಕೋಪಕಾರಾರ್ಥವಾಗಿ ಮತ್ತೊಂದು ವಿಧವಾದ ಸರಣಿಯನ್ನು ತೋರಿಸುತ್ತಾನೆ.

೩ ಅನಾತ್ಮನಿರಸನ ಪದ್ಧತಿಯು ಮುಗಿದುದು.

೪ ದೃಗ್ದೃಶ್ಯ ವಿವೇಕ ಪದ್ಧತಿ ಪ್ರಾರಂಭವು.

೧ ತಾ|| ಅಟತಾಳ|| ನಿರಂತರ ಮುಂಕಾಣಬರುತಲಿರುವದಾಗಿರುವ ಈ ಸ್ಥಾವರ ಜಂಗಮಾತ್ಮಕವಾದ ಸಮಸ್ತ ಲೋಕಗಳು ಕಾಣಲಿಕ್ಕೆ ಅರ್ಹವಾಗಿರುವದ್ದರಿಂದಲೇ ದೃಶ್ಯವೆನಿಸಿಕೊಳ್ಳುವದು. ಈ ಅಶೇಷ ಪ್ರಪಂಚವನ್ನು ನೋಡುತಲಿರುವ ಕಣ್ಣುದೃಕ್ಕೆಂಬದಾಗಿ ಹೇಳಲ್ಪಡುವದು. ||೧|| ಹೀಗೆಯೇ ಹಿಂದ ಹಿಂದಕ್ಕೆ ವಿಚಾರ ಮಾಡಿಕೊಂಡು ಹೋಗುವಲ್ಲಿ ಈ ಹಿಂದೆ ಹೇಳಿದ ದೃಕ್ಕೆಂಬ ಪದಾರ್ಥವಾದ ಕಣ್ಣಿನ ಗುಣದೋಷಗಳಾದ ಪಟುತ್ವ, ಆಂಧ್ಯಮೊದಲಾದವುಗಳು ದೃಶ್ಯವೆಂಬ ಹೆಸರಿನಿಂದ ಕರೆಯಲ್ಪಡುವವು. ಆ ಈದೃಕ್ಕಿನ

---

೨ ಮೂ|| ವ|| ಇಂತನಾತ್ಮ ನಿರಸನ ಸೂಚನ ಪದ್ಧತಿಯಂ ಸೂಚಿಸಿ, ಇನ್ನೊಂದು ಪ್ರಕಾರಮಂ, ಪೇಳುತಿರ್ದಪನದೆಂತೆನೆ.

೩ ಅನಾತ್ಮನಿರಸನ ಪದ್ಧತಿಯು ಮುಗಿದುದು.

೪ ದೃಗ್ದೃಶ್ಯ ವಿವೇಕ ಪದ್ಧತಿ ಪ್ರಾರಂಭವು.

೧ ಮೂ|| ಅಟತಾಳ|| ತೋರುವೀಸಚರಾಚರಂಗಳು ತೋರ್ಕೆಗಹವು । ದೃಶ್ಯವು । ತೋರಿಸುವ ಕಣ್ಣಿದನುದೃಕ್ಕೆಂದೊರೆಯುಲಸೆಗುಂ ||೧||

ಗುಣದೋಷಗಳಿಂದ ಪಟುತ್ವ ಆಂಧ್ಯಗಳನ್ನು ತಿಳಿಯುವ ಬುದ್ಧಿ ಯೆಂಬ ಪದಾರ್ಥವು ದೃಕ್ಕೆಂಬದಾಗಿ ಹೇಳಲ್ಪಡುವದು. ||೧|| ಈರೀತಿಯಿಂದೃಕ್ಕೆಂಬ ಪೆಸರಂ ಪಡೆದ ಬುದ್ಧಿಯೆಂಬ ಪದಾರ್ಥದಲ್ಲಿರುವ ಕಾಮ, ಕ್ರೊಧ, ಲೋಭ, ಮುಂತಾದ ಪದಾರ್ಥಗಳು ದೃಶ್ಯವೆನ್ನಲ್ಪಡುವವು. ಈಮೇರಿಗೆ ದೃಶ್ಯವೆಂಬ ನಾಮವನ್ನು ಹೊಂದಿ ಹೊಳೆಯುತಿರುವ ಕಾಮಾದಿ ಪದಾರ್ಥಗಳನ್ನು ಮುಂಭಾಗ ದೊಳಿಟ್ಟುಕೊಂಡು ಅನಾದಿಯಾದ ಮಾಯಾಪ್ರಭಾವದಿಂದ ತಾನು ಅವುಗಳೊಂದಿಗೆ ಸೇರಿ ಒಂದಾಗಿ, ||೨|| ಅವುಗಳನ್ನು ನಿರಂತರ ಮುಂತಿಳಿದು ಕೊಳ್ಳುತಲಿರುವ ಅರಿವೇದೃಕ್ಕೆನ್ನಲ್ಪಡುವದು. ಆದರೆ ಆಮೂಲದೃಕ್ಪದಾರ್ಥಕ್ಕಿಂತಲು ಬೇರೆಯಾಗಿ ಈದೃಕ್ಕನ್ನು ತಿಳಿಯಕ್ಕದ್ದು ಮತ್ತೊಂದು ಇಲ್ಲವಾದುದರಿಂದಲು, ಒಂದು ವೇಳೆ ಇಧೆಯೆಂದು ಹೇಳಲಿಕ್ಕೆ ಪ್ರಯತ್ನ ಪಟ್ಟರೆ ಆದೃಕ್ಕನ್ನು ನೋಡುವದು ಮತ್ತೊಂದುದೃಕ್ಕು ಇದನ್ನು ಕಾಣುವದು ಇನ್ನೊಂದು ದೃಕ್ಕು ಈಮೇರೆ ಎಲ್ಲಿಗೂ ಪಾರವಿಲ್ಲದೆ (ಅನವಸ್ಥ) ಎಂಬ ಶಾಸ್ತ್ರವಿಹಿತವಾದ ದೋಷವು ಬರುವದಾಗಿ ಈಮೇಲೆಹೇಳಿದ ಕಾಮಾದಿಗಳ ಸ್ವಭಾವವನ್ನು ಅಂದರೆ ಅವುಗಳ ಗುಣ ದೋಷಗಳನ್ನು ಅರಿಯುವದೇ ಚಿತ್ಪದಾರ್ಥವೆಂಬದಾಗಿ ನಿಶ್ಚಯಿಸಬೇಕು. ತರುವಾಯ ಆಚಿದ್ವಸ್ತುವೇ ನೀನು ಎಂಬದಾಗಿಅರಿಯತಕ್ಕದ್ದು,ಯೋಗ್ಯವಾಗಿರುವದು. ||೪|| ಈ ಪ್ರಕಾರವಾಗಿ ಮೊದಲು ಈ ಪ್ರಪಂಚವನ್ನು ಉದ್ದೇಶಿಸಿ ಕ್ರಮಕ್ರಮವಾಗಿ ಹಿಂದ ಹಿಂದಕ್ಕೆ ದೃಗ್ದೃಶ್ಯಪದಾರ್ಥಗಳನ್ನು ವಿಚಾರ ಮಾಡುತ ಹೋದ

---

ಅದರ ಪಟುಮಾಂದ್ಯಾದಿಗಳು ದೃಶ್ಯಾಭಿಧಾನದಿಂದಿಹ | ವದರನೋಡುವಬುದ್ಧಿದೃಕ್ಕಹುದರ್ಥಗಳನು ||೧||

ಅಲ್ಲಿರುವ ಕಾಮಾದಿಗಳು ದೃಶ್ಯಾಖ್ಯೆಯಿಂದಾರಾಜಿಸಾ | ಲೆತಮುಂನಿದಿರಿಟ್ಟವಂತಾನೇಕವಾಗಿ ||೨||

ಕಾಬಚಿತ್ತೆದೃಕ್ಕೆನಿಪುದದಕಾಚೆದೃಕ್ತ್ವಂತೋರದು | ಪಬಗೆಯೊಳಾದರೆಯುದಂ | ನೀನೆನ್ನಲುಚಿತಂ ||೪||

ಕೆ ಕಡೆಗೆ ದೃಕ್ಪದಾರ್ಥವಾದ ಆತ್ಮಾಭಿನ್ನನಾದ ನೀನೇನಿಲ್ಲುವಿ ಆನೀ ನು ಎಂಬ ಪದಾರ್ಥವೇದ್ರಷ್ಟೃವೆನಿಸಲ್ಪಡುವದು. ಆದರೆ ಈ ಪೂರ್ವ ಪೂರ್ವದ ನಿಷೇಧವೆಂಬುವದು ವಿಚಾರದ ಮೂಲಕ ದೃಢವಾಗುತ ಬಂದರೆ ಕಡೆಗೆ ಚಿತ್ಸ್ವರೂಪವಾದ ಆತ್ಮವಸ್ತುವೊಂದಲ್ಲದೆ ಮತ್ತೆ ಯಾವ ಪ್ರಪಂಚವೂ ಉಳಿಯದೆ ಇರುವದು. ಆದ್ದರಿಂದಲೇ ಆಸಮಯದಲ್ಲಿ ದೃಕ್ಕು, ದೃಶ್ಯ, ದ್ರಷ್ಟೃ, ಎಂಬ ತ್ರಿಪುಟಿಯು ಆವರಣ ರಹಿತವಾದುದರಿಂದ ಶುದ್ಧವಾಗುತ್ತದೆ ಯಾಗಿ ಶುದ್ಧಾತ್ಮಸ್ವರೂಪನಾಗಿ, ಭಾಸಿಸುತಲಿರುವಿ ॥೫॥

೨ ವ॥ ತಾ॥ ಆದರೆ ವಿಜ್ಞಾನವೆಂಬ ಪದಾರ್ಥಕ್ಕು ಭಾನವೆಂಬಪದಾರ್ಥಕ್ಕು ಪರಸ್ಪರವಾಗಿ ಜನ್ಯಜನಕ ಭಾವವು ಉಂಟೋ? ಅಂದರೆ ವಿಜ್ಞಾನವೆಂಬ ಪದಾರ್ಥದಿಂದ ಭಾನವೆಂಬ ವಸ್ತುವು ಹುಟ್ಟುತದೆಯೋ ಇಲ್ಲವೊ ಎಂಬದಾಗಿ ಆಕ್ಷೇಪವು ಬಂದರೆ ಅದಕ್ಕೆ ಸಮಾಧಾನವನ್ನು ಈ ಮುಂದೆ ಉದಹರಿಸುವನು.

೩ ಕಂ॥ ತಾ॥ ವಿಚಾರ ಮೂಲಕವಾಗಿ ಚೆನ್ನಾಗಿ ಅರಿತಿರುವ ಮನಸ್ಸೆಂಬ ಪ್ರಭುವೆ ಲಾಲಿಸು, ಪ್ರಕಾಶಮಾತ್ರವಾಗಿರುವ ಆತ್ಮ ಸ್ವರೂಪವು ವಿಜ್ಞಾನದಿಂದ ಹುಟ್ಟಿದಂಥಾದ್ದು ಆಗುವದಿಲ್ಲವು. ಜ್ಞಾನಸ್ವರೂಪವಾದ ವಸ್ತುವು ಪ್ರಕಾಶ ಮಾತ್ರದಿಂದ ಹುಟ್ಟಿತೆಂದು ಎಂದಿಗೂ

---

ನಾನೆನುತ ದೃಶ್ಯಕ್ಕೆ ಸಂಗತಿನಾಟಲಾಗನೀನಹೆ। ಭಾನಮಾತ್ರನ । ವಾವರಣನನುಭಾವಸಿದ್ಧಂ ॥೫॥

೨ ಮೂ॥ ವ॥ ವಿಜ್ಞಾನ ಭಾನಗಳಿಗೆ ಜನ್ಯಜನಕತ್ವವುಂಟೊ? ಇಲ್ಲವೊ ಎಂದು ಆಕ್ಷೇಪವಂ ಮಾಡಿದರೆ ಇಲ್ಲವೆಂಬದಾಗಿ ಪೇಳುತಲಿದಾದ್ಧನೆ.

೩ ಮೂ॥ ಕಂದ॥ ವಿಜ್ಞಾನ ಜನ್ಯವಾಗದು।
ವಿಜ್ಞಾನಭಾನಂನುಭಾನಜನ್ಯವೆನಿಸದೈ॥
ಯಜ್ಞಾನವಿಲ್ಲಿಭಾವಸೆವಿ।
ಜ್ಞಾನಸ್ಫುಳಿಕೆಕೇರದ್ವೈಪರಿಣಾವು

ಅನ್ನಿಸಿಕೊಳ್ಳಲಾರದು ನಿತ್ಯವಾಗಿಯು ಜ್ಞಾನಸ್ವರೂಪವಾಗಿಯು ಇರುವ ಆತ್ಮಸ್ವರೂಪಕ್ಕೆ ಪರಿಣಾಮವೆಂಬುವದು ಎಂದಿಗೂ ಸಂಬಂಧಿಸುವದಿಲ್ಲವು. ಹಾಗೆ ಒಂದುವೇಳೆ ಆ ಆತ್ಮಸ್ವರೂಪವಾದ ಅವಿಕಾರಿಪದಾರ್ಥಕ್ಕೆ ಪರಿಣಾಮವನ್ನು ಒಡಂಬಟ್ಟು ಜನ್ಯಜನಕ ಭಾವವನ್ನು ಹೇಳಿದರೆ (ಕೃತಕವಾಗಿರುವದೆಲ್ಲವು ಅನಿತ್ಯವೆಂಬ) ಶಾಸ್ತ್ರಾನುಸಾರದಿಂದ ಆತ್ಮವೆಂಬ ವಸ್ತುವು ಅನಿತ್ಯವಾಗಬೇಕಾಗುತ್ತದೆ. ಆದ್ದರಿಂದ ಆತ್ಮನಿಗೆ ಪರಿಣಾಮವೆಂಬುವದು ಇಲ್ಲವೆಂತಲು ಇನ್ನು ವಿಜ್ಞಾನ ಭಾನಗಳಿಗೆ ಜನ್ಯಜನಕ ಭಾವನ್ನೂ ಇಲ್ಲವೆಂಬದಾಗಿಯೂ ತಿಳಿಯತಕ್ಕದ್ದು. ॥೨॥

೪ ಕಂ॥ ತಾ॥ ಎಲೈ ಮನಸ್ಸೆಂಬ ಪ್ರಭುವೇ ಕೇಳು! ಜ್ಞಾನಸ್ವರೂಪವಾಗಿರುವ ವಸ್ತುವು ಭಾನರೂಪವಾಗಿರುವ ಪದಾರ್ಥದಿಂದ ಉಂಟಾದದದ್ದು ಆಗುವದಿಲ್ಲ. ಇಲ್ಲವೆ ಆರಂಭಿಸಲ್ಪಟ್ಟದ್ದಾದರೂ ಆಗಲಾರದು ಈ ಪ್ರಕಾಶ ರೂಪವಾಗಿರುವ ಭಾನವೆಂಬ ಪದಾರ್ಥವೆ ಜ್ಞಾನವು ಜ್ಞಾನವೆಂಬ ನಾಮಾಂತರವನ್ನು ಮಾತ್ರ ಪಡೆದು ಅರ್ಥಾಂತರವನ್ನು ಪಡೆಯದಿರುವದಾಗಿರುವ ವಿಜ್ಞಾನವಿಶ್ರೇಯಸ್ಕರ ವಾಗುವಂತೆ ಹೊಳೆವ ಭಾನಸ್ವರೂಪವಾದ ವಸ್ತುವಾಗಿರುವದು. ಹೀಗಿರುವಲ್ಲಿ ಇವೆರಡಕ್ಕು ಜನ್ಯಜನಕ ಭಾವವೆಂಬುವದು ಹ್ಯಾಂಗೆ ಸಮಂಜಸವಾಗುವದು. ಆದ್ದರಿಂದಲೆ ಅಭಿನ್ನವಸ್ತುವೆಂಬದಾಗಿ ತಿಳಿಯತಕ್ಕದ್ದು. ॥೩॥

೫ ವ॥ ತಾ॥ ಈ ಮೇಲೆ ವಿವರಿಸಿದ ಮೇರೆಗೆ ದೃಶ್ಯಪದಾರ್ಥದ ಸ್ವ

---

೪ ಮೂ॥ ಕಂದ॥ ಮಾನಸದೈವನೆ ಕೇಳೀ।
ಜ್ಞಾನಂ ಮೇಣಾಗದಾಗದಾರಂಭಕವಿಾ॥
ಭಾನಕ್ಕೆ ಭಾನವೆವಿ ।
ಜ್ಞಾನಂ ವಿಜ್ಞಾನಮೆಸುಭದ್ರ ಭಾನಂ॥

೫ ಮೂ॥ ವ॥ ಇಂತೆಂದು ದೃಗ್ದೃಶ್ಯವಿಭಾಗಪದ್ಧತಿಯನ್ನರುಹಿ ಇನ್ನೊಂದು ಪ್ರಕಾರಮಂ ಪೇಳುತಿದ್ದಪನದೆಂತೆನೆ.

೪ ದೃಗ್ದೃಶ್ಯವಿವೇಕ ಪದ್ಧತಿಯು ಮುಗಿದುದು.

ರೂಪಗಳನ್ನು ಹಾಗೆ ದೃಶ್ಯಪದಾರ್ಥದ ಸ್ವರೂಪಗಳನ್ನು ಸಂದೇ
ಹ ವಿಲ್ಲದಂತೆ ಚನ್ನಾಗಿ ವಿಶದ ಪಡಿಸಿ ಇನ್ನೊಂದು ರೀತಿಯಿಂದ ಮುಂ
ದೋಪಕಾರಕ್ಕಾಗಿ ಪೇಳುತ್ತಿದ್ದಾನೆ.

೪ ದೃಗ್ದೃಶ್ಯವಿವೇಕ ಪದ್ಧತಿಯು ಮುಗಿದುದು.

## ೫ ಅಹಂಪದಾರ್ಥ ವಿವೇಚನ ಪದ್ಧತಿ ಪ್ರಾರಂಭವು.

೧ ತಾ॥ ಜಂಪೆ॥ ಪುತ್ರನಲ್ಲಿ ಅಹಂಕಾರವೆಂಬ ಕರಣದ ಸಂಬಂಧ
ವಿದ್ದರೂ ಜನ್ಯಜನಕ ಭಾವಅಂದರೆ ಇವನು ಹುಟ್ಟಿಸಿದವನು ಇವನು
ಹುಟ್ಟಿದವನು ಎಂಬದರಿಂದಲು, ಲೋಕದೊಳು ಇವನು ಜನ್ಯನು
ಇವನು ಜನಕನು ಎಂಬದಾಗಿ, ವ್ಯವಹರಿಸುವವರ ವ್ಯವಹಾರದಿಂದ
ಲು, ಆ ಅಹಂಕಾರವೆಂಬ ಕರಣಕ್ಕೆ ಭೇದವು ಸಂಭವಿಸುವದು, ಅಂದ
ರೆ ಲೋಕದೊಳು ಅಜ್ಞರು ಅಭಿಮಾನಾತಿಶಯದಿಂದ ತಮ್ಮ ಪು
ತ್ರಾದಿಗಳು ತಮಗಿಂತಲು ಅತ್ಯಂತ ಭಿನ್ನರೆಂಬದಾಗಿ ಪ್ರತ್ಯಕ್ಷದ
ಲ್ಲಿ ಕಾಣಬರುತ್ತಿದ್ದಾಗ್ಯೂ ಅವರಿಗೇನಾದರು ಸಂತೋಷ ವುಂಟಾದರೆ
ನಾವೇ ಸಂತುಷ್ಟರಾದೆವೆಂತಲು, ಅವರಿಗೇ ನಾದರು ದುಃಖವುಂಟಾ
ದರೆ ನಾವೇ ದುಃಖಿಗಳಾದೆ ವೆಂತಲೂ ಹೇಳುವರು. ಇದು ಇವರಂ
ತೆ ಇತರಅಜ್ಞರು ವ್ಯವಹರಿಸುವದರಿಂದಲು, ಅವಿಚಾರದಿಂದಲು ಉಂ
ಟಾಗಿರುವದು. ಸ್ವಲ್ಪವುಟ್ಟಿಗೆ ವಿಚಾರ ಮಾಡುವದರಿಂದಲೇ ಅಹಂ
ಕಾರಕ್ಕಿಂತಲು ಪುತ್ರಾದಿಗಳು ಭಿನ್ನರೆಂದು ಸ್ಪಷ್ಟವಾಗುವದು ॥೧
ಮತ್ತು ಜಡವಾಗಿಯು ಅಚೇತನವಾಗಿಯು ಇರುವ ಈಸ್ಥೂಲ ಶ
ರೀರವಲ್ಲಿ ಅಭಿಮಾನ ರೂಪವಾದ ಅಹಂಕಾರವು ಪ್ರವರ್ತಿಸಿದಾಗ್ಯೂ

---

## ೫ ಅಹಂಪದಾರ್ಥ ವಿವೇಚನ ಪದ್ಧತಿ ಪ್ರಾರಂಭವು.

೧ ಮೂ॥ ಜಂಪೆ॥ ತನಯನೊಳಹಂಕಾರ ತಗುಲಿದರು ಜನ್ಯಾದಿ
ಜನರ ಸಂಗತಿಯಿಂದ ಜನಿಸುವದುಭೇದಂ ॥೧॥
ವಪುವನೊಳಹಂಕಾರ ವರ್ತಿಸಿದರು ಮೃತಿ । ಮುಖ್ಯಪದಂ
ಳಲಿ ಸಂಗತಕ್ಕಹುದುಭೇದಂ ॥೨॥

ಅಂದರೆ ದೇಹದಲ್ಲಿ ಅಹಂತೆಯು ಉಂಟಾದಾಗ್ಯೂ ಮೂರ್ಛಾವಸ್ಥೆ ಯಲ್ಲಿಯು, ದೇಹವನ್ನು ನಾನು ಎಂಬದಾಗಿ ವ್ಯವಹರಿಸುವದಿಲ್ಲವಾದ ಕಾರಣ ಶರೀರದಲ್ಲಿ ಅಹಂಕಾರ ಯೋಗವನ್ನು ಮಾಡುವದು ದೊಡ್ಡ ತಪ್ಪಾಗಿರುವದು. ಈಹಿಂದೆ ಹೇಳಿದ ಯುಕ್ತಿಯಿಂದ ಅಹಂಕಾರ ವೆಂಬದು ಶರೀರಕ್ಕಿಂತಲು ಭಿನ್ನವಾದದ್ದೆಂತ ಸಂದೇಹವಿಲ್ಲದೆ ತಿಳಿಯಬೇಕು. ||೧|| ಇನ್ನು ಚಕ್ಷುರಾದಿ ಪಂಚ ಜ್ಞಾನೇಂದ್ರಿಯಗಳಲ್ಲಿಯು,ಪಾಣಿಪಾದಾದಿ ಕರ್ಮೇಂದ್ರಿಯಗಳಲ್ಲಿಯು ಅಹಂಕಾರವನ್ನು ಅಜ್ಞರು ಉದಹರಿಸುವರು ಇದು ಸುತರಾಂಯುಕ್ತ ಸಹವಾಗಿಲ್ಲವು, ಅದು ಹ್ಯಾಗೆಂದರೆ ? ಪ್ರಪಂಚದಲ್ಲಿ ಯಾವನಿಗೆ ಆದಾಗ್ಯೂ ಒಂದು ಕಣ್ಣೆ ಆಗಲಿ ಇಲ್ಲವೆ ಒಂದು ಕಾಲಾಗಲಿ ಹೋದರೆ ಆಸಮಯದಲ್ಲಿ ನನ್ನ ಕಾಲುಹೋಯಿತುಎಂಬದಾಗಿ ವ್ಯವಹರಿಸುವ ನಲ್ಲದೆ ನಾನೆಹೋದೆನೆಂದು ವ್ಯವಹರಿಸುವದಿಲ್ಲ. ಒಂದುವೇಳೆ ಅತ್ಯಾಂತಮೂಢಭಾವದಿಂದ ಹಾಗೆಯೇ ವ್ಯವಹರಿಸಿದರೆ ಕಣ್ಣು ಯಾವಾಗ ಹೋಯಿತೋ ಆಗಲೇ ಅವನೂ ಹೋದನು ಬಳಿಕ ಅವನು ಎಂಬಪದಾರ್ಥವಿಲ್ಲದೆ ಇರಬೇಕಾಯಿತು ಹಾಗಾದರೆ ಇನ್ನೊಂದು ಆವರ್ತಿ ಅವನು ಮಾತನಾಡದೆ ಇರಬೇಕಾಗುತ್ತೆ ಹಾಗೆ ಕಾಣಬರುವದಿಲ್ಲವಾದ್ದರಿಂದ ಇಂದ್ರಿಯಗಳಲ್ಲಿ ಅಹಂಕಾರ ಪ್ರಯೋಗವನ್ನು ಮಾಡಬಾರದು. ಈಯುಕ್ತಿಯಿಂದಲೇ ಅಹಂಕಾರವು ಇಂದ್ರಿಯಗಳಿಗಿಂತಲೂ ಭಿನ್ನವೆಂದು ಅರಿಯುವದು ||೩|| ಅಲ್ಲದೆ ಪ್ರಾಣಾಪಾನಾದಿ ಪಂಚಪ್ರಾಣಗಳಲ್ಲಿಯು ಕೆಲಬರು ಅಹಂಕಾರವುಂ ಪೇಳುವರು. ಇದೂ ಅವಿಚಾರಿತ ರಮಣೀಯ ವಾಗಿರುವದು, ಅದೆಂತೆಂದೊಡೆ ಯಾವದಾದರೊಂದು ಪ್ರಾಣಿಗೆ ಏನಾದರು ಒಂದು ನಿಮಿತ್ತದಿಂದ ವ್ಯಸನವು ಪ್ರಾಪ್ತವಾದಡೆ ಆ

---

ಇಂದ್ರಿಯದಿಹಮ್ಮಿರುವೆನಿಸಿದರುತಪಕಾ | ರಂಧ್ರವದಿನೆನವಕಾರಣಮುಕ್ಕುಭೇದಂ ||೩||

ಅಸುವಿನೊಳಹಂಕಾರವುಂಟೆಂದರು ಸ್ಪುರದ್ವ್ಯಸನದಿಂ ಕಳಿವೆನೆಂಬಲ್ಲಹುದುಭೇದಂ ||೪||

ಸಂದರ್ಭದಲ್ಲಿ ಆತನು ನನ್ನ ಪ್ರಾಣಗಳನ್ನಾದರೂ ಬಿಟ್ಟುಬಿಡುವೆನೆಂದು ಅಹಂಕಾರಕ್ಕೂ ಪ್ರಾಣಗಳಿಗೂ ಅತ್ಯಂತಭೇದ ತೋರುವಂತೆ ಸ್ಪಷ್ಟವಾಗಿ ವ್ಯವಹರಿಸುವನು. ಈ ಹೇತುವಿನಿಂದಲೆ ಪಂಚಪ್ರಾಣಗಳಿಗೂ ಅಹಂಕಾರವೆಂಬ ಕರಣಕ್ಕೂ ಭೇದವೆಂಬುವದು ಸಿದ್ಧವಾಗಿರುವುದೆಂದು ಭಾವಿಸತಕ್ಕದ್ದು ||೪|| ಜಗತ್ತಿನಲ್ಲಿ ಮತ್ತೆ ಕೆಲಬರು ಅಂತಃಕರಣದಲ್ಲಿ ಅಹಂಕಾರ ರೂಪಕರಣವನ್ನು ಹೇಳುವರು ಅಂದರೆ ಅಂತಃಕರಣವೇ ಅಹಂಕಾರವೆಂದು ನುರುವರು. ಯಾವನಾದರೊಬ್ಬ ಮನುಷ್ಯನು ಮಲಗಿದ್ದು ಎದ್ದ ಬಳಿಕ ಇದುವರಿಗೆ ಏನಬಲ್ಲೆ, ಎಂದು ಅವನನ್ನು ಯಾರಾದರು ಪ್ರಶ್ನೆಮಾಡಿದರೆ ಆಗಲವನು, ನಾನು ಇದುವರಿಗೂ ಸುಖವಾಗಿನಿದ್ರೆಮಾಡುತಲಿದ್ದೆ ಯಾವದೊಂದನ್ನು ಅರಿಯೆ, ಎಂಬದಾಗಿ ಅಹಂಕಾರಕ್ಕಿಂತಲು ಅಂತಃಕರಣವು ಭಿನ್ನವಾಗಿರುವಂತೆ ಯಾವಪ್ರೇರಣೆಯು ಇಲ್ಲದೆ ನಿಸ್ಸಂಶಯವಾಗಿ ವ್ಯವಹರಿವನು, ಆದಕಾರಣ ಅಂತಃಕರಣಕ್ಕೂ ಅಹಂಕಾರಕ್ಕೂ ಭೇದವು ಸ್ಪಷ್ಟವಾಗಿರುವುದೆಂದು ನೆನಸತಕ್ಕದ್ದು ||೫|| ಎಲೈ ಮನಃಪ್ರಭುವೆಕೇಳು ! ಚನ್ನಾಗಿ ಕಾಣಬರುವಂಥವುಗಳಾಗಿ ಈಪ್ರಪಂಚದೊಳು ಕಾಣಬರುವ ಈಮೇಲೆ ಉದಹರಿಸಿದ ಶರೀರಾದಿ ಪದಾರ್ಥಗಳು ಅಹಂಕಾರಕ್ಕೆ ಸ್ಥಾನಗಳಾಗಿಲ್ಲವು. ಮತ್ತೆ ಆಅಹಂಕಾರಕ್ಕೆ ಸ್ಥಾನವಾವುವೆಂದರೆ ಅದನ್ನು ನಿನ್ನಯ ತಿಳುವಳಿಕೆಗಾಗಿ ವಿವರಿಸುವೆನು ||೬|| ನಿಷ್ಕಳವಾಗಿಯು ಮಾಯಾಸಂಬಂಧವಾದ ಆವರಣ ಶೂನ್ಯವಾಗಿಯು ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆ

---

ಅಂತರಂಗದಲಿಹಮೃತ್ಯುಡಸಿರ್ದರು ಸುಷುಪ್ತಿ | ಯಿಂತಿಳಿಯೆನೇನನೆಂದೆನಲಕ್ಕುಭೇದಂ ||೫||

ಇದವಿಗರ್ಭಂಗಳಾಗಿರ್ದವಿವು | ಹವ್ಮಿಗಾಸ್ಪದವಾಗವಾವುದೆಸೆ ಪದವದರೆಕೇಳೂ ||೬||

ಇದವುಗಳಾಗಿರ್ದವಿವು ! ಹವ್ಮಿಗಾಸ್ಪದವಾಗ ವಾವುದೆನೆಪದೆ ವದಕೆ ಕೇಳೂ ||೬||

ನಂದ ಮಯಗಳೆಂಬ ಪಂಚಕೋಶಾವರಣಗಳಿಲ್ಲದಿರುವದಾಗಿಯು, ತ್ರಿಕಾಲಾಬಾಧ್ಯ ವಾಗಿಯು, ಅವಿಕಾರಿಯಾಗಿಯು, ನಾಶರಹಿತವಾಗಿಯು, ಅನಾದಿಯಾಗಿಯು, ಸ್ವತಃಪ್ರಕಾಶವಾಗಿಯು, ನಿತ್ಯಾನಂದ ರೂಪವಾಗಿಯೂ, ಇರುವ ಚಿದಾನಂದ ಘನಪದಾರ್ಥವೆ ಆಅಹಂಕಾರಕ್ಕೆ ಅರ್ಥವು, ಎಂಬದಾಗಿ ಸಂಶಯವಿಪರ್ಯಯಗಳಿಲ್ಲದೆ ತಿಳಿದುಕೊ. ಶಾಸ್ತ್ರ ಪ್ರಮಾಣ ದಿಂದಲು ಅನುಭವ ದಿಂದಲು ಜಡಗಳಾಗಿರುವ ಈಶರೀರಾದಿಗಳನ್ನು ಅಹಂಕಾರಕ್ಕೆ ಅರ್ಥವೆಂದು ಎಂದಿಗೂ ತಿಳಿಯಬೇಡ ‖೭‖

೧ ಕಂ‖ ತಾ‖ ಒಳಗು ಹೊರಭಾಗದಲ್ಲಿಯೂ ಸ್ಫುರಿಸುವ ಭಾವಗಳಲ್ಲಿ ಅಹಂಕಾರಾತ್ಮರುಗಳು ಪ್ರಕಾಶವಾಗಿ ತೋರುತಲಿರುವರು, ಅದೆಂತು ಎಂಬದಾಗಿ ಚಿತ್ತದಲ್ಲಿ ಚನ್ನಾಗಿ ಚಿಂತಿಸಿ ಬುದ್ಧಿಯಿಂದ ಒಳಹೊಕ್ಕು ವಿಚಾರಮಾಡಿ ನೋಡಿದ್ದೇ ಆದರೆ ರತ್ನವು, ಮತ್ತು ಆ ರತ್ನದ ಥಾಳಥಳ್ಯವು ಇವುಗಳಂತೆ ಎಂಬದಾಗಿ ತಿಳಿಯಬರುವದು, ಈ ಅರ್ಥವು ಬಹು ವಿಚಾರ ಪರರಾದ ಮಹನೀಯರ ಸೂಕ್ಷ್ಮಬುದ್ಧಿಗೆ ಗೋಚರಿಸುವದಲ್ಲದೆ ತರರಿಗೆ ಸಾಧ್ಯವಲ್ಲ. ಆದರೆ ಈ ಅಹಂಕಾರಾತ್ಮರು ಅವಿವೇಕದಿಂದ ಅಭಿನ್ನವಾಗಿರುವಂತೆಯೇ ತೋರುವರು ಎಂದು ತಿಳಿಯತಕ್ಕದ್ದು.

೨ ವ‖ ತಾ‖ ಈ ಪ್ರಕಾರವಾಗಿ ಅಹಂಕಾರವೆಂಬ ಪದಾರ್ಥದ

---

ನಿಷ್ಕಲನಿರಾವರಣ ನಿಜತತ್ವಪದ ಕರ್ಥ । ಪುಷ್ಕಳಮನೆಂದಿಗು ಪೊರಗನೊಂದಿರದು ‖೭‖

೧ ಕಂದ‖ ಬಹಿರಂತರ್ಭಾವಸ್ಫುರಿಸ ।
ದಹಮಾತ್ಮರ್ತೋರ್ಪರೆಂತೆನಲ್ಚಿತ್ತದಿನಿ ‖
ರ್ವಹಿಸಿಹುದರ್ಥಮಮಣಿ ।
ಮಹಗಳಹಾಗಿರ್ಪರೆಂದುಮಥಿಸಿಯೆಮತಿಯೊಳ್ ‖

೨ ಮೂ‖ ವ‖ ಇಂತಹಂ ಪದಾರ್ಥದ ಪದ್ಧತಿಯುಂ ವಿಶದಪಡಿಸಿ ಇನ್ನೊಂದು ಪ್ರಕಾರದಿಂದ ಹೇಳುತಿದ್ದಾನೆ.

ಸ್ವರೂಪವಮಾರ್ಗವನ್ನು ತಿಳಿಯಹೇಳಿ ಇನ್ನೊಂದು ಬಗೆಯಾಗಿ ಪೇಳುತ್ತಲಿದಾನೆ.

೫ ಅಹಂಪದಾರ್ಥ ವಿವೇಚನ ಪದ್ಧತಿಯು ಮುಗಿದುದು.

೬ ಪಂಚಕೋಶ ವ್ಯತಿರೇಕ ಪದ್ಧತಿ ಪ್ರಾರಂಭವು.

೧ ತ್ರಿಪುಡೆ॥ ತಾ॥ ಲೋಕದೊಳು ಮನುಷ್ಯನ ದೇಹದಲ್ಲಿ ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯಗಳೆಂಬದಾಗಿ ಐದುಕೋಶಗಳಿರುವವು. ಆದರೆ ಇವುಗಳಲ್ಲಿ ಅನ್ನಮಯಕೋಶದೊಳಗೆ ಪ್ರಾಣಮಯಕೋಶವು, ಆ ಪ್ರಾಣಮಯ ಕೋಶದೊಳಗೆ ಮನೋಮಯಕೋಶವು, ಮನೋಮಯ ಕೋಶದೊಳಗೆ ವಿಜ್ಞಾನಮಯಕೋಶವು, ವಿಜ್ಞಾನಮಯ ಕೋಶದಲ್ಲಿ ಆನಂದಮಯಕೋಶವು ಈ ಮೇರಿಗೆ ಇರುವವು. ಇವುಗಳೊಳಗೆ ಕಡೆಯದಾದ ಆನಂದಮಯ ಕೋಶದಲ್ಲಿ ನಾಶರಹಿತವಾಗಿಯು, ಆನಂದಘನವಾಗಿಯು ಇರುವ ಬ್ರಹ್ಮಪದಾರ್ಥವು ಥಳಥಳಿಸುವ ಜೀವರತ್ನದಂತೆ ಅಡಗಿಕೊಂಡಿರುವದು. ॥ ೧ ॥ ಇನ್ನು ಈ ಪ್ರಪಂಚ ಕೋಶಗಳ ಕ್ರಮವಾದ ವಿವರವೆಂತೆಂದೊಡೆ ? ಧಾತುವೆಂಬುವದು ರಸಧಾತುವೆಂತಲು, ರಕ್ತಧಾತುವೆಂತಲೂ, ಮಾಂಸಧಾತುವೆಂತಲೂ, ಮೇದೋಧಾತುವೆಂತಲೂ, ಅಸ್ಥಿಧಾತುವೆಂಬದಾಗಿಯೂ, ಮಜ್ಜಾಧಾತುವೆನ್ನುವದಾಗಿಯೂ, ಶುಕ್ಲಧಾತುವೆಂಬದಾಗಿಯೂ ಏಳು ಬಗೆಯಾಗಿರುವುದು. ಇವೇ ಸಪ್ತಧಾತುಗಳೆನ್ನಲ್ಪಡುವವು. ಇವು ಏಳೂ ಮಲಿನವಾ

---

೫ ಅಹಂಪದಾರ್ಥ ವಿವೇಚನ ಪದ್ಧತಿಯು ಮುಗಿದುದು.

೬ ಪಂಚಕೋಶ ವ್ಯತಿರೇಕ ಪದ್ಧತಿ ಪ್ರಾರಂಭವು.

೧ ಮೂ॥ ತ್ರಿಪುಡೆ॥ ಐದುಪದರದಚೀಲದೊಳಗಣನರ್ಘ್ಯರತ್ನದ
ತೆರದನಿಜವೀ । ಐದುಕೋಶಗಳಂತರಾಳದೊಳಡಗಿರುವದು ॥೧॥
ಧಾತುಸಪ್ತಕದಿಂದಕೂಡಿಹ ತನುವೆನಿಪುದನ್ನ ಮಯಕೋಶ
ವು । ಪೇತಮಲಸಿಚೆಯುಂಪ್ರಘನುಮೊಂದೆಣಿಕೆವಡೆಗುಂ ॥೨॥

ದವುಗಳು, ಈ ಸಪ್ತಧಾತುಗಳಿಂದ ಕೇರಿರುವ ಸ್ಥೂಲಶರೀರವೇ ಮೊದಲನೆಯ ದಾದ ಅನ್ನಮಯಕೋಶವೆಂಬದಾಗಿ ಹೇಳಲ್ಪಡುವದು. ‖೧‖

ಈ ರೀತಿಯಾಗಿರುವ ಸ್ಥೂಲಶರೀರದೊಳಗೆ ಇರುವ ಲಿಂಗದೇಹದೊಳಗೆ ವಾಕ್ಕು, ಪಾಣಿ, ಪಾದ, ಪಾಯು, ಉಪಸ್ಥಗಳೆಂಬ ಪಂಚಕರ್ಮೇಂದ್ರಿಯಗಳಿಂದಲೂ, ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನಗಳೆಂಬ ಪಂಚಪ್ರಾಣಗಳಿಂದಲು ಕೇರಿ ಇರುವುದೇ ಪ್ರಾಣಮಯಕೋಶವೆಂಬದಾಗಿ ಕರೆಯಲ್ಪಡುವದು. ‖ ೩ ‖ ಈ ಪ್ರಾಣಮಯಕೋಶವೆಂಬ ಆ ವರಣದ ಮಧ್ಯಭಾಗದೊಳು ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳೆಂಬ ಜ್ಞಾನೇಂದ್ರಿಯ ಪಂಚಕವು ಇನ್ನು ಮನಸ್ಸು, ಇವುಗಳಿಂದ ಕೂಡಿರುವ ಕೋಶವನ್ನೇ ಆತ್ಮವಿದ್ಯಾ ಪಾರಂಗತರಾದ ವಿದ್ವಾಂಸರು ಮನೋಮಯಕೋಶವೆಂಬದಾಗಿ ಹೇಳುತಿರುವರು ‖೪‖

ಆಮನೋಮಯವೆಂಬ ಪದರದಬಳಗಡೆಯಲ್ಲಿ ಚಿತ್ತು ಎನಿಸಿಕೊಂಬ ಆತ್ಮಸ್ವರೂಪದಿಂದಲು, ಇನ್ನು ಜ್ಞಾನೇಂದ್ರಿಯಗಳಿಂದಲು ಅಹಂಕಾರವೆಂಬ ಅಂತಃಕರಣದಿಂದಲೂ ಕೇರಿವಿಜ್ಞಾನ ಮಯಕೋಶವೆಂಬದಾಗಿ ನಾಮವನ್ನು ಹೊಂದಿ ಪ್ರಸಿದ್ಧಿ ಪಡೆದಿರುವದು. ‖೫‖ ಈಮೇಲೆ ಉದಹರಿಸಿದ ಸಪ್ತವಿಧವಾದ ಧಾತುಗಳಿಂದ ಹುಟ್ಟಿ ಉತ್ತಮವಾದ ವಸ್ತುವಿನ ದರ್ಶನಾ ನಂತರದಲ್ಲಿ ಇದು ನನಗೆ ಆಗಬೇಕೆಂಬ ಪರ್ಯಾಯಾರ್ಥವುಳ್ಳ ಪ್ರಿಯವು, ಅಂಥಪ್ರಿಯವಾದ ಪದಾರ್ಥದಲಾಭ

---

ಇದರಮಧ್ಯದಲಿಂಗದೇಹದಲಿರುವಕರ್ಮೇಂದ್ರಿಯಗಳುಂ ಪ್ರಾಣ
ದನಿಕರವುಂಗೂಡಿಗಾಳಿಯಪದರಮಕ್ಕುಂ ‖೩‖
ಈವರಣದವಲಗ್ನದೊಳ್ ಜ್ಞಾನೇಂದ್ರಿಯಗಳುಂ। ಮನಮುಮೊಂ
ದಿರೆಕೋವಿದರುಪೇಳ್ವರುಮನೋಮಯಕೋಶಮೆಂದು‖೪‖
ಆಪೊರೆಯಗರ್ಭದಲೆನಾಲ್ಕನೆಯದುಚಿದಿಂದ್ರಿಯಹಂಕೃತಿಗಳಿಂ
ರೂಪವನಾಂತಿರುತಿಹುದುಕೋಶಂಗೂಢಮಾಗಿ ‖೫‖
ಧಾತುಜನ್ಯಗಳಾದ ಪ್ರಿಯಮೋದ ಪ್ರಮೋದಗಳುಂ ಪ್ರಕೃತಿ
ಯುಂ। ಪ್ರೀತಿರಲ್ಕಾನಂದಮಯಮೆಂದೊಪ್ಪವಡೆದಾ ‖೬‖

ದಿಂದುಂಟಾದ ಸಂತೋಷವೆಂಬರ್ಥವುಳ್ಳ ಮೋದವುಹಾಗೆ ಪ್ರಾಪ್ತವಾದ ವಸ್ತುವಿನ ಅನುಭವದಿಂದುಂಟಾದ ಸುಖವೆಂಬರ್ಥವುಳ್ಳ ಪ್ರಮೋದವು, ಪ್ರಕೃತಿಯು, ಇವುಗಳಿಂದ ಕೂಡಿ ಇರುವುದೇ ಐದನೆಯುದಾದ ಆನಂದಮಯ ಕೋಶವೆಂಬದಾಗಿ ಶಾಸ್ತ್ರಜ್ಞರು ಹೇಳುವರು. ಮತ್ತು ಅನುಭವಸಿದ್ಧವಾಗಿಯು ಇರುವುದೆಂದರಿಯುವದು ‖೬‖

ಈಮೇಲಿಗೆ ಅನ್ನಪ್ರಾಣಮನೋ ವಿಜ್ಞಾನಾನಂದ ಮಯಗಳೆಂಬ ಪಂಚಕೋಶಗಳು ಕೇರಿಬಂದು ಅಂಡವಾಗಿರುವುದು, ಆ ಅಂಡದ ಮಧ್ಯಪ್ರದೇಶವನ್ನು ಹೊಂದಿರುವದರಿಂದಲೂ ಭೋಗಾನುಭವವನ್ನು ಹೊಂದಿರುವವನ ಭಾವವನ್ನು ಹೊಂದದೆ ಇರುತ ಪರಿಪೂರ್ಣವಾಗಿ ಚಿದಾನಂದಾತ್ಮಕವಾಗಿಯು ಇರುವ ಆತ್ಮಸ್ವರೂಪವೇ ನಾನು ಎಂಬದಾಗಿ ದೃಢವಾದ ತಿಳುವಳಿಕೆಯಿಂದ ಮೊದಲು ಈಪಂಚ ಕೋಶಗಳನ್ನು ಜಯಿಸತಕ್ಕವನಾಗು ‖೭‖

೧ ಗೀ‖ ತಾ‖ ಲೋಕದೊಳು ವೀಣೆಯಮೇಲೆ ಹಾಕಿರುವ ಗೌಸಣಿಗೆ ಅಂದರೆ ಮೇಲಿನ ಚೀಲ ಅದರಲ್ಲಿರುವ ಗುಣಗಳು ವೀಣಾತಂತ್ರಿಗಳಾಗಲಿ ಇವೆ ಗಾನವಾಗುವುದೇ ಇಲ್ಲ, ಹಾಗೆಯೇ ಈಮೇಲು ಹೊದಿಕೆಯ ಹಾಗಿರುವ ಅನ್ನಮಯಾದಿ ಪಂಚಕೋಶಗಳ ಗುಣಗಳ ಸಂಬಂಧವೆಂಬುವದು ನಿರ್ಲಿಪ್ತನಾಗಿರುವ ಆತ್ಮನಿಗೆ ಉಂಟೆ ? ಅಥವಾ ಅಖಂಡಾತ್ಮ ಸ್ವರೂಪವಾಗುವದೇ ಇಲ್ಲವು. ಅಂಥ ಚಿನ್ಮಾತ್ರ ವಸ್ತುವೇ ನಾನು ಎಂಬದಾಗಿ ಅನವರತವೂ ಭಾವಿಸುತಿದ್ದರೆ ಜನನ ಮರಣ ಪ್ರವಾಹ ರೂಪವಾದ ಸಂಸಾರದ ಬಂಧವೆಂಬುವದು ಒಂದು ಕಾಲಕ್ಕು ಇರಲಾರದು.

---

ಅಂಡವಹುದಾ ಮಧ್ಯದಲಿತದವಾಪ್ತಿಯಿಂ ಭೋಕ್ತೃತೆಯಪ್ರೌ
ರ್ದದಖಂಡಚಿತ್ತೇನಾನೆನುತವುಂಕೋಂಡುಜೈಸು ‖೭‖

೧ ಮೂ‖ ಗೀ‖ ಕವಚೆಗುಣವೆ ವಿಪಂಚಿಕಾಗಾನವುಲ್ಲ । ಮಾದರೀ
ಕೋಶನಿಷ್ಠಗುಣಾವಳಿಗಳು। ಆತ್ಮನಿಷ್ಠಮೆಯುಲ್ಲವೆಂದರಿದು।
ನಾನೆನುತಂ ಭಾವಿಸಲ್‌ಬಂಧವೆತ್ತಲಿಹುದು.

೩ ವ॥ ತಾ॥ ಈ ಪ್ರಕಾರವಾಗಿ ನುಡಿಯಲು ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ ಆನಂದಮಯಗಳೆಂಬ ಈ ಪಂಚಕೋಶಗಳೇ ಆತ್ಮಸ್ವರೂಪ ವಾಗದಿರುವದಕ್ಕೆ ನಿಮಿತ್ತವೇನೆಂದು ಕೇಳಲಾಗಿ, ಪೃಥಿವಿ, ಜಲ,ತೇಜಸ್ಸುಗಳೆಂಬ ಭೂತತ್ರಯದ ತ್ರಿವೃತ್ಕರಣದಿಂದಲೇಅಂದರೆ ಮಿಳಿತ ಪರಿಣಾಮದಿಂದಲೇ ಈಮೇಲೆಹೇಳಿದ ಪಂಚಕೋಶಗಳು ಹುಟ್ಟಿ ಇರುವವು. ಆದಕಾರಣದಿಂದಲೇ ಭೂತತ್ರಯಕ್ಕೂ ಮತ್ತು ಅವುಗಳ ಮಿಳಿತ ಪರಿಣಾಮಕ್ಕೂ,ಆತ್ಮನುಭಿನ್ನನಾಗಿರುವದರಿಂದ ಕೋಶಗಳಾತ್ಮ ಸ್ವರೂಪವಾಗಲಾರವೆಂದು ಹೇಳುತಲಿಧಾನೆ.

೪ ಸಾಂಗತ್ಯ॥ ತಾ॥ ಲೋಕದೊಳು ಪೃಥ್ವಿ ಅಂದರೆ ಭೂಮಿಯು ಇದು ಅನ್ನರೂಪವಾಗಿ ಪರಿಣಮಿಸುವದು, ಅದನ್ನು ಮನುಷ್ಯನು ಭುಜಿಸಲು ಅದು ಉತ್ತಮ, ಮಧ್ಯಮ, ಅಧಮ, ವಿಭಾಗದಿಂದ ಮೂರು ಬಗೆಯಾಗಿ ಪರಿಣಮಿಸುವದು, ಇವುಗಳಲ್ಲಿ ಒಂದಂ ಶಕ್ಕೆಕಿಟ್ಟ, ಅಥವಾ ಘನಾಂಶವೆಂತಲೂ, ಮತ್ತೊಂದಕ್ಕೆ ಮಾಂಸಾಂಶವೆಂತಲೂ, ಇನ್ನೊಂದು ಭಾಗಕ್ಕೆ ಮನೋಂಶವೆಂಬದಾಗಿಯೂ ಹೆಸರು ಎಂಬದಾಗಿ ತಿಳಿಯತಕ್ಕದ್ದು. ॥೧॥ ಮತ್ತು ಈ ಪೂರ್ವೋಕ್ತರೀತಿಯಿಂದಲೇ ಮನುಷ್ಯನು ಕುಡಿದ ಜಲವು ಪರಿಣಾಮವನ್ನು ಹೊಂದಿ ಅಪಾಯವಿಲ್ಲದೆ, ಉತ್ತಮ, ಮಧ್ಯಮ, ಅಧಮಗಳೆಂಬ ಅಂಶತ್ರಯರೂಪವಾಗಿ ಅಂದರೆ ಕಿಟ್ಟಾಂಶ, ಮಧ್ಯಮಾಂಶ, ನಿರ್ಮಲಾಂಶಗಳೆಂಬದಾಗಿ

---

೩ ಮೂ॥ ವ॥ ಇಂತೆನಲೀ ಕೋಶಂಗಳೇ ತಕ್ಕಾತ್ಮನಾಗದೆನಲು.

೪ ಮೂ ॥ ಸಾಂಗತ್ಯ॥ ಅನ್ನದಕಿಟ್ಟಮಧ್ಯಮನಿರ್ಮಲಾಂಶವು
ತ್ಪನ್ನವಾಗುವದುತ್ರಿವಿಧದಿ । ಚನ್ನಾಗಿಮಲಮಾಂಸಮಾನಸ
ರೂಪದಿಂದಿನ್ನು ಪೂರ್ವೋಕ್ತರೀತಿಯಲಿ ॥೧॥
ತೋಯದ ಕಿಟ್ಟಮಧ್ಯಮ ನಿರ್ಮಲಾಂಶವೆ ಕಾಯ ಮಾಗು
ವದು ತ್ರಿವಿಧದಿ! ನೋಯದೆ ಮೂತ್ರರುಧಿರ ಪ್ರಾಣರೂಪದಿಂ
ತೀಯಹಾಕಾರದಪಾಂಗನೈದಿ ॥೨॥

ಮೂತ್ರರೂಪದಿಂದಲೂ,ರಕ್ತರೂಪದಿಂದಲೂ,ಪ್ರಾಣರೂಪದಿಂದಲೂ ಆಕಾರಭೇದಗಳನ್ನುಹೊಂದಿಕೆಡದೆಹೊಂದಿಹೊಂದುತಲಿರುವದು.॥೨॥ ಇದರಂತೆಯೇಅಗ್ನಿಯು ಸಂಬಂಧವಾದ ಕಿಟ್ಟಾಂಶ,ಮಧ್ಯಮಾಂಶ, ನಿರ್ಮಲಾಂಶಗಳು,ಈಶರೀರವೆಂಬ ಜಗತ್ತಿನೊಳಗೆನೋಡುವವರಿಗೆಅತ್ಯಾಶ್ಚರ್ಯವನ್ನುಂಟುಮಾಡುತ ಮೂಳೆಯ ರೂಪವಾಗಿಯು, ಮಜ್ಜಾರೂಪವಾಗಿಯು, ವಾಗ್ರೂಪವಾಗಿಯು, ನಾಮಭೇದಗಳಂ ಪಡೆದು ಮೂರು ಬಗೆಗಳಾಗಿ ಪ್ರಕಾಶಿಸುತಲಿರುವವು. ॥೩॥ ಈ ಪ್ರಕಾರವಾಗಿ ನಿರಂತರವೂ ಆಯಾಯು ಇಂದ್ರಿಯಗಳಿಗೆ ಗೋಚರಗಳಾಗಿ ವಿಕೃತಿ ಪರಿಣಾಮಗಳನ್ನು ಹೊಂದಿ ಪೃಥಿವ್ಯಾದಿ ಭೂತತ್ರಯಗಳಿಂದ ಹುಟ್ಟಿರುವಹಾಗೆಯೇ ಪ್ರತ್ಯಕ್ಷವಾಗಿ ನಾಶವನ್ನು ಹೊಂದುವ ಈ ಪಂಚಕೋಶಗಳು ಅವಿಕಾರಿಯಾಗಿಯು, ಪರಿಣಾಮ ಶೂನ್ಯನಾಗಿಯೂ, ಹ್ರಾಸವೃದ್ಧಿಗಳಿಲ್ಲದೆಯೂ, ಇರುವ ಆತ್ಮಸ್ವರೂಪವು ಹ್ಯಾಗೆ ಆದಾವು? ಯಾವಾಗಲೂ, ಯಾವಬಗೆಯಿಂದಲೂ, ಯಾವ ನಿಮಿತ್ತದಿಂದಲೂ, ಈ ಕೋಶಗಳಲ್ಲಿಯು, ಕೋಶಗಳ ಸಂಧಿಗಳಲ್ಲಿಯೂ, ಸಂಬಂಧಿಸದೆಯೇ ಅಖಂಡವಾಗಿರುವ ಪರಪ್ರಕಾಶ್ಯವಾಗದ ಚೈತನ್ಯರೂಪದಿಂದಿರುವ ಚಿದ್ವಸ್ತುವು.॥೪॥ನೀರಿನಿಂದ ನೆನೆಯದ ಶುದ್ಧವಾದಪಾದರಸದಂತೆಯು,ಇನ್ನು ಮೋಡಗಳಗುಂಪಿನಿಂದ ವಿಕಾರವನ್ನು ಪಡೆಯದಿರುವ ನಿರ್ಮಲವಾದ ಆಕಾಶದಹಾಗೆಯು, ಅನವರತವೂ ಪಂಚಕೋಶಗಳಲ್ಲಿರುತಲಿದ್ದರೂ, ಲೋಕದಲ್ಲಿ ಪ್ರಕಾಶಮಾನನಾದ ಸೂರ್ಯನ ಬಿ

---

ತೇಜದ ಕಿಟ್ಟಮಧ್ಯಮ ನಿರ್ಮಲಾಂಶವೆರಾಜಿಸುತಿಹುದು ತ್ರಿವಿಧದಿ ಜಗದೊಳಗಸ್ಥಿಮಜ್ಜವಾಗ್ರೂಪದಿಂ ಸೋಜಿಗವೆನಿಸೆಯೆ ನೋಳ್ಪರಿಗೆ ॥೩॥

ಇದಿರಿಟ್ಟು ತೋರಿಕೆಡುವ ಮೂರುಭೂತದೊಳುದಿಸಿದ ವಿವ್ರಕಾಣವಿವರಿಂ। ದುದಿಶಿದ ಕೋಶಂಗಳೆಂತಹ ವಿದರಲ್ಲಿ ಚದರದ ನಿತ್ಯಚೈತನ್ಯ ॥೪॥

ಸಿಲು ಉತ್ತಮಪದಾರ್ಥಗಳ ಗುಣಸಂಬಂಧವನ್ನಾಗಲಿ ದೋಷಸಂಬಂಧ ವನ್ನಾಗಲಿ ಹ್ಯಾಂಗೆ ಹೊಂದುವದಿಲ್ಲವೋ ? ಅದರಂತೆಯೇ ಆಕೋಶ ಗಳ ಗುಣಗಳಸಂಬಂಧವನ್ನಾಗಲಿ ಇಲ್ಲವೆ ದೋಷಗಳ ಸಂಬಂಧವನ್ನಾ ಗಲಿ ಹೊಂದುವದೇ ಇಲ್ಲವು. ಆದುದರಿಂದಲೇ ನಿರಂತರವೂ ನಿರ್ಮಲ ತೇ ಜೋಘನವಾಗಿರುವುದು. ||೫|| ಲೋಕದಲ್ಲಿ ಬಾಳೆಯಕಂಭದಲ್ಲಿ ಒಳಒಳ ಗೆಹೋಗುತ ಸೂಕ್ಷ್ಮವಾದ ಪಟ್ಟೆಗಳು, ಮೇಲೆಮೇಲೆ ಬರುತ ಸ್ಥೂ ಲವಾದ ಪಟ್ಟೆಗಳು ಹ್ಯಾಗೆ ಕೇರಿ ಇರುವವೋ? ಅದರಂತೆಯೆ ಈ ದೇಹ ವೆಂಬುವದು ಒಳಗೆ ಹೋಗುತ ಸೂಕ್ಷ್ಮಕೋಶಗಳಿಂದ ಕೂಡಿರುವ ದಾಗಿಯು, ಮೇಲೆ ಸ್ಥೂಲಕೋಶಗಳಿಂ ಕೇರಿರುವದಾಗಿಯೂ ಇಧೆ. ಆಒಳಒಳೆಗಣಕೋಶಗಳೆಂಬವು ಮನುಷ್ಯನುವ್ಯಾವಹಾರಿಕವಾಗಿ ಆಚ ರಿಸುವ ಪಾಪಪುಣ್ಯರೂಪವಾಗಿ ಆಚರಿಸುವ ಕರ್ಮಜಾಲಕ್ಕೆ ಒಂದೊಂ ಧುಮಾರ್ಗದಿಂದ ಸಹಾಯಕಾರಿಗಳಾಗಿ ಇರುತಲಿರುವವು||೬||ಆದರೆ ಆ ಬಾಳೆಯ ಕಂಭವನ್ನು ಹಿಡಿದು ಮೇಲಿರುವ ಒಂದೊಂದು ಪಟ್ಟೆಗಳ ನ್ನು ಕ್ರಮವಾಗಿ ಬಿಡಿಸುತ ಬಂದರೆ ಕಡೆಗೆ ಭೇದವಿಲ್ಲದೆ ವಿಕಾರವಿಲ್ಲ ದೆಯು ಇರುವ ದಿಂಡು ಎಂಬ ಒಂದು ಪದಾರ್ಥವು ಹ್ಯಾಗೆ ಲಭಿಸುವ ದೊ ? ಅದರಂತೆಯೆ ಗುರುಕುಲವಾಸವನ್ನು ಮಾಡಿ, ಆಮಹಾನುಭಾ ವನ ಸೇವೆಯನ್ನು ಮಾಡುತ ಆತನು ಮಾಡಿದ ಉಪದೇಶವನ್ನು

---

ಜಲದಿಂದನಾದದಸೂತದಂದದಿ ಮೇಘಕುಲದಿಂದ ವಿಕೃತಿಯ
ಪಡೆಯದ || ನಿಲದಗಗನದಂತೆ ನಿಂದಿರ್ದ್ದರಿದರಿಂದ ಮಲಿನವಾಗ
ದು ಪರವಸ್ತು ||೫||

ಬಾಳೆಯಪಟ್ಟೆಯ ತೆರದೀ ಕೋಶಂಗಳು ಮೇಲಮೇಲೆಣಿಸೆದಾ
ರ್ಢ್ಯಗಳು | ಈಲೀಲೆಯಿಂದೊಳಗೆ ಸೂಕ್ಷ್ಮಗಳು ವಿಶಾಲ ಕ
ರ್ಮಕ್ಕೆ ಸಾಧನಗಳು ||೬||

ಅದರೊಳುದಿಂಡಿನಂದದೊಳಾತ್ಮ ತನ್ನಲ್ಲಿ ಪದರವಿಲ್ಲದೆ ತೋ
ರುತಿಹನು || ಇದನನುಭಾವಿಸಾಗಲು ಆತ್ಮತಾನೀಗಲನುಭವ
ಕೆ ಬರಲರ್ಹನಹನು ||೭||

ಶ್ರದ್ಧಾಭಕ್ತಿಗಳಿಂದ ಗ್ರಹಿಸಿ ಬಳಿಕ ಮನನಾದಿಗಳನ್ನು ಮಾಡಿವಿಚಾರ ಮಾಡುವದರ ಮೂಲಕ ಈಸ್ಥೂಲಾದಿ ಪಂಚಕೋಶಗಳನ್ನು ವಿಂಗಡಿಸುತ ಬಂದರೆ ಆಸಂದರ್ಭದಲ್ಲಿ ಆತ್ಮಾನುಭವ ಶೂರರಾದ ಸಾಧುಶಿರೋಮಣಿಗಳಿಗೆ ಅಖಂಡವಾಗಿಯು ತೇಜೋರಾಶಿಯಾಗಿಯು ಅವಿಕಾರಿಯಾಗಿಯು, ವಿಜ್ಞಾನ ಘನನಾಗಿಯೂ ಇರುವ ಪರಾತ್ಮನು ಅನುಭವ ವಿಷಯನಾಗಿರುತ್ತಾನೆಂದಾಶಯವು ॥೭॥

೫ ವ॥ ತಾ॥ ಈಪ್ರಕಾರವಾಗಿ ಕಾಲತ್ರಯಾ ಬಾಧೆಯು, ಸ್ವತಃ ಪ್ರಕಾಶವು ದುಃಖಾಭಾವವು, ಎಂಬರ್ಥವುಳ್ಳ ಸಚ್ಚಿದಾನಂದ ಲಕ್ಷಣವುಳ್ಳ ಆತ್ಮನಿಗು, ಅನೃತತ್ವ, ಜಾಡ್ಯ, ಅನಾತ್ಮತೆ ಇವುಗಳಿಂದೊಡಗೂಡಿದ ಅನ್ನಮಯಾದಿ ಪಾಚಕೋಶಗಳಿಗು, ವಿಶೇಷವಾದ ವಿರುದ್ಧ ಲಕ್ಷಣ ವುಳ್ಳೋಣದರಿಂದಲೆ ಪರಸ್ಪರ ಸಂಬಂಧವಿಲ್ಲವೆಂತಲು ಆದುದರಿಂದಲೆ ಬಂದರ ಗುಣದೋಷಗಳು ಮತ್ತೊಂದಕ್ಕೆ ಇಲ್ಲವೆಂತಲು ವಿಶದಪಡಿಸಿ ಮತ್ತೊಂದು ಪ್ರಕಾರವಿಂದ ಹೇಳುತಲಿಧಾನೆ.

೬ ಪಂಚಕೋಶ ವ್ಯತಿರೇಕ ಪದ್ಧತಿಯು ಮುಗಿದುದು.

೭ ಅಧ್ಯಾರೋಪಾಪವಾದ ಪದ್ಧತಿ ಪ್ರಾರಂಭವು.

೧ ಕಂ ತಾ॥ ಆತ್ಮವಸ್ತುವಲ್ಲದ ಪದಾರ್ಥದಲ್ಲಿ ಅಂದರೆ ಅನಾತ್ಮವಸ್ತುವಿನಲ್ಲಿ ಇದು ಆತ್ಮವಸ್ತುವೆಂಬದಾಗಿಬುದ್ಧಿಪ್ರಕಾಶ ವುಂಟಾದರೆ ಅಂತಪ್ಪ ಬುದ್ಧಿಯನ್ನು ಅಧ್ಯಾಸವೆಂದು ಹೇಳುವರು. ಇದನ್ನೆ

---

೫ ಮೂ॥ ವ॥ ಇಂತೆಂದಾತ್ಮನಿಗೆ ಪಾಚಕೋಶವಿಲಕ್ಷಣ ಪದ್ಧತಿಯಂ ಕೇಳ್ಕಿಗೊಳಿಸಿ, ಇನ್ನೊಂದು ಪ್ರಕಾರವಂ ಪೇಳುತಿರ್ದಪನದೆಂತೆನೆ,

೬ ಪಂಚಕೋಶ ವ್ಯತಿರೇಕ ಪದ್ಧತಿಯು ಮುಗಿದುದು.

೭ ಅಧ್ಯಾರೋಪಾಪವಾದ ಪದ್ಧತಿ ಪ್ರಾರಂಭವು.

೧ ಮೂಲ॥ ಕಂದ॥ ಆವಸ್ತುವಲ್ಲದರ್ಥದೊ !

ಳಾವಸ್ತುತೆಯೈದಿಪೆರೆವಮತಿಯಧ್ಯಾಸಂ

ಆರೋಪವೆಂತಲು ಹೇಳುವರು, ಈ ರೀತಿಯೊಳಿರುವ ಆರೋಪವು ವಿಚಾರ ಪರರಾದ ಕೆಲವು ಮತಾಂತರಸ್ಥರು ನಾಲ್ಕು ಬಗೆಯಾಗಿರುವದೆಂದು ಹೇಳುತಿರುವರು (ಆದರೆ ಶ್ರೀಮದಾಚಾರ್ಯರು ಇತರ ಮತದವರು ಹೇಳುವದನ್ನೆಲ್ಲಾ ವಿಮರ್ಶೆ ಮಾಡಿ ಅವರವರ ಇಷ್ಟದಂತೆಯೆ ಆತ್ಮಖ್ಯಾತಿಯೆಂತಲು, ಸತ್ಖ್ಯಾತಿಯೆಂತಲು, ಅಸತ್ಖ್ಯಾತಿಯೆಂತಲು ಅನ್ಯಥಾಖ್ಯಾತಿಯೆಂತಲು ನಾಲ್ಕು ಪ್ರಕಾರಗಳನ್ನು ಉದಹರಿಸಿ ತರುವಾಯ ಅವುಗಳನ್ನು ಸಪ್ರಮಾಣವಾಗಿಯು, ಸಯುಕ್ತಿಕವಾಗಿಯು, ವ್ಯಕ್ತಪಡಿಸಿ ಬಳಿಕ ಅನಿರ್ವಚನೀಯ ಖ್ಯಾತಿಯೊಂದನ್ನೇ ಅನುಭವ ಪ್ರಮಾಣಗಳಿಂದ ಸ್ಥಾಪಿಸಿ ವಿಶದ ಪಡಿಸಿರುವರು. ಅವುಯಾವವೆಂದರೆ.

೭ ವ॥ ತಾ॥ ಅನ್ಯತಾರೋಪವೆಂಬದಾಗಿಯು, ಇತರಾರೋಪವೆಂಬದಾಗಿಯು, ಇತರೇತರಾರೋಪ ವೆಂಬದಾಗಿಯು, ಯಥಾರ್ಥಾರೋಪವೆಂಬದಾಗಿಯು, ಅಧ್ಯಾಸವು ನಾಲ್ಕು ಬಗೆ ಯಾಗಿರುವುದು. ಈ ಅಧ್ಯಾಸಗಳಿಗೆ ಗೋಚರಗಳು ಅಂದರೆ ವಿಷಯಗಳು ಯಾವವೆಂದರೆ ? ನಾನು ಸಣ್ಣಗಿರುವೆನು, ನಾನು ದಪ್ಪವಾಗಿರುವೆನು, ಎಂದು ಹೇಳುವ ಸಮಯದಲ್ಲಿ ಸ್ಥೂಲ ಶರೀರವು, ಅಂದರೆ ಸಣ್ಣಗಿರುವಿಕೆ ದಪ್ಪವಾಗಿರುವಿಕೆ, ಯೆಂಬ ಧರ್ಮಗಳು ಅನ್ನಮಯ ಕೋಶವಾಗಿರುವ ಸ್ಥೂಲ ಶರೀರದ ಧರ್ಮಗಳಾಗಿರುವವು ಈ ಧರ್ಮಗಳನ್ನು ನಾನು ಎಂಬ ಪದಾರ್ಥದಲ್ಲಿ ಆರೋಪಣೆಯನ್ನು ಮಾಡುತ್ತಾನಾಗಿ ಆರೋಪ ವಿಷಯವು ಸ್ಥೂಲ ಶರೀರವಾಯಿತು. ಇದೇ ಇತರಾರೋಪವು ಇನ್ನು ನಾನು ಕೇಳುತ್ತಿರುವೆನು. ನಾನು ಮುಟ್ಟಿನೋಡುತ್ತೇನೆ. ನಾನು ಜಗಜ್ಜನ್ಯವಾದ

---

ಈ ವಿಧಮಾದಧ್ಯಾಸಂ ।
ಭಾವಿಸೆ ನಾಲ್ಕೆನಿಪುದಲ್ಲಿ ಕೆಲಬರಪಕ್ಷಂ॥

೭ ವ॥ ಮೂ॥ ಅದಾವುವೆನೆ, ಮಿಥ್ಯಾಧ್ಯಾಸವೆಂದು, ಇತರಾಧ್ಯಾಸವೆಂದು, ಇತರೇತರಾಧ್ಯಾಸವೆಂದು, ಯಥಾರ್ಥಾಧ್ಯಾಸವೆಂದು, ಇವಕ್ಕೆ ವಿಷಯಂಗಳಾವವೆನೆ, ಕೃಶೋಹಂ, ಸ್ಥೂಲೋಹಂ

ಪದಾರ್ಥಗಳನ್ನು ನೋಡುತ್ತಿರುವೆನು. ನಾನು ಭೋಜ್ಯಪದಾರ್ಥಗಳನ್ನು ಭೋಜನಮಾಡುತ್ತೇನೆ, ಅಥವಾ ರುಚಿನೋಡುತ್ತೇನೆ. ನಾನು ವಾಸನೆಯುಳ್ಳ ಪದಾರ್ಥಗಳನ್ನು ಮೂಸಿನೋಡಿ ಅವುಗಳಲ್ಲಿರುವ ಸುಗಂಧ ದುರ್ಗಂಧಗಳನ್ನು ವಾಸನೆ ತೆಗದುಕೊಳ್ಳುತ್ತೇನೆ. ಎಂದು ವ್ಯವಹರಿಸುವಲ್ಲಿ ಈ ಸ್ಥೂಲದೇಹದೊಳಗಿರುವ ಜ್ಞಾನೇಂದ್ರಿಯಗಳು ಅದು ಹ್ಯಾಗಂದರೆ, ಕೇಳುವಿಕೆಯು, ಮುಟ್ಟುವಿಕೆಯು, ನೋಡುವಿಕೆಯು, ರುಚಿನೋಡುವಿಕೆಯು, ವಾಸಿಸುವಿಕೆಯು, ಎಂಬ ಈ ಐದು ಧರ್ಮಗಳು ಕ್ರಮವಾಗಿ, ಸ್ಥೂಲಶರೀರವನ್ನಾಶ್ರಯಿಸಿಕೊಂಡಿರುವ ಜ್ಞಾನೇಂದ್ರಿಯಗಳಾದ ಕಿವಿ, ಚರ್ಮ, ಕಣ್ಣು, ನಾಲಿಗೆ, ಮೂಗು, ಎಂಬ ಐದು ಇಂದ್ರಿಯಗಳ ಧರ್ಮಗಳಾಗಿರುವವು. ಹೀಗಿರುವಲ್ಲಿ ಆ ಇಂದ್ರಿಯ ಧರ್ಮಗಳನ್ನು ನಾನು ಎಂಬ ವಸ್ತುವಿನಲ್ಲಿ ಆರೋಪಿಸಿ ವ್ಯವಹರಿಸುವನು. ಆದ್ದರಿಂದಲೆ ಇದು ಇತರಾಧ್ಯಾಸವೆನ್ನಲ್ಪಡುವದು, ನಾನು ಸಂಕಲ್ಪಮಾಡುತ್ತೇನೆ, ನಾನು ನಿಶ್ಚಯಿಸುತ್ತೇನೆ, ನಾನು ಹೀಗೆ ಅವಧರಿಸಿ ಇದ್ದೇನೆ, ನಾನು ಹೀಗೆ ಅಭಿಮಾನಿಸಿ ಕೊಂಡಿರುವೆನು, ಎಂದೀ ಪ್ರಕಾರವಾಗಿ ವ್ಯವಹರಿಸುವಲ್ಲಿ, ಲಿಂಗದೇಹದೊಳಿರುವ ಅಂತರಿಂದ್ರಿಯಗಳಾದ, ಮನಸ್ಸು, ಬುದ್ಧಿ, ಚಿತ್ತ, ಅಹಂಕಾರ, ಇವುಗಳು ಅಧ್ಯಾಸ ವಿಷಯಗಳಾಗಿರುವವು, ಅದು ಹ್ಯಾಗಂದರೆ, ಸಂಕಲ್ಪಮಾಡುವಿಕೆಯು, ನಿಶ್ಚಯಿಸುವಿಕೆಯು, ಅವಧರಿಸುವಿಕೆಯು, ಅಭಿಮಾನಿಸುವಿಕೆಯು ಎಂಬೀ ನಾಲ್ಕು ಧರ್ಮಗಳು ಕ್ರಮವಾಗಿ ಮನಸ್ಸು, ಬುದ್ಧಿ, ಚಿತ್ತ, ಅಹಂಕಾರ, ಇವುಗಳದಾಗಿರುವವು. ಅಂದರೆ ಮನಸ್ಸಿನಿಂದ ಸಂಕಲ್ಪಿಸುವುದೆಂದು, ಬುದ್ಧಿಯಿಂದ ನಿಶ್ಚಯಿಸುವು

---

ಎಂಬಲ್ಲಿ ಶರೀರವು, ಅಹಂಶೃಣೋಮಿ, ಅಹಂಸ್ಪೃಶಾಮಿ, ಅಹಮದ್ಮಿ, ಅಹಂಜಿಘ್ರಾಮಿ, ಎಂಬಲ್ಲಿ ಜ್ಞಾನೇಂದ್ರಿಯಂಗಳು. ಅಹಂಸಂಕಲ್ಪಯಾಮಿ, ಅಹಂನಿಶ್ಚಿನೋಮಿ, ಅಹಮವಧಾರಯಾಮಿ, ಅಹಮಭಿಮನ್ಯೇ, ಎಂಬಲ್ಲಿ, ಅಂತಃಕರಣವು. ಅಹಂಜಾನಾಮಿ, ಎಂಬಲ್ಲಿ, ಚಿತ್ತು ಈ ಚಿತ್ತಿನೊಡನೆ, ಸಂಬಂಧವಾಪ್ರಪಂಚಾಂತ

ದು ಚಿತ್ತದಿಂದ ಅವಧಾರಣ ಮಾಡುವುದು, ಅಹಂಕಾರದಿಂದ ಅಭಿಮಾನಿಸುವುದು ಎಂಬರ್ಥವು. ಮತ್ತೆ ನಾನು ಎಲ್ಲವಂಬಲ್ಲೆನು ಎಂಬದಾಗಿ ವ್ಯವಹರಿಸುವಲ್ಲಿ ಕೇವಲ ಚಿತ್ಸ್ವರೂಪದೊಡನೆ ಕೂಡಿರುವ ಅಹಂಕಾರವು ಆರೋಪಕ್ಕೆ ವಿಷಯವಾಗಿರುವುದು. ಇಲ್ಲಿ ಅಹಂಕಾರದ ಧರ್ಮವನ್ನು ಚಿತ್ಪದಾರ್ಥದಲ್ಲಿಯು, ಚಿದ್ವಸ್ತುವಿನ ಧರ್ಮಗಳನ್ನು ಅಹಂಪದಾರ್ಥದಲ್ಲಿಯು ಆರೋಪಿಸುವದರಿಂದಲೇ ಇದು ಇತರೇತರಾಧ್ಯಾಸವೆನ್ನಲ್ಪಡುವುದು. ಜಗದಂತವಾದ ವ್ಯಾವಹಾರಿಕ ಜೀವರೂಪದಿಂ ವ್ಯವಹರಿಸುತ್ತಲಿಧೆಯಾದಕಾರಣ ತಿಳಿಯಲು ಈ ಚಿತ್ತೆ ಅಹವೆಂಬ ಪದಾರ್ಥಕ್ಕೆ ಅರ್ಥವಾಗಿರುವದರಿಂದ ಇದು ಯಥಾರ್ಥಾರೋಪವೆನಿಸಿಕೊಳ್ಳುವದು. ಇನ್ನು ಕೆಲವು ಮತಾಂತರಗಳಲ್ಲಿ ಈ ಆರೋಪವೆಂಬುವದು ಮೂರು ಪ್ರಕಾರವಾಗಿರುವದು. ಅದೆಂತೆಂದರೆ, ಉಪಾಧಿಇಲ್ಲದ ಅರೋಪವೆಂಬದಾಗಿಯೂ, ವಸ್ತ್ವಂತರ ಧರ್ಮವಾದ ಗುಣಾರೋಪವೆಂಬದಾಗಿಯು, ಮೂರುಬಗೆಯು ಇವಕ್ಕೆ ಅನುಗುಣವಾದ ದೃಷ್ಟಾಂತಗಳು ಯಾವವೆಂದರೆ ? ರಜ್ಜುವನ್ನು ನೋಡಿ ಸರ್ಪಭ್ರಾಂತಿಯು ಬರುವಾಗ ಅಧಿಷ್ಠಾನವಾದ ಹಗ್ಗವೆಂಬ ಜ್ಞಾನವಿಲ್ಲವೆ ಆ ಹಗ್ಗದಲ್ಲಿ ಇದು ಸರ್ಪವೆಂಬ ಬುದ್ಧಿಯುಂಟಾಗುವದರಿಂದ ಇದು ನಿರುಪಾಧಿಕಾಧ್ಯಾಸವೆಂಬದಾಗಿ ಹೇಳುವರು. **************

ಮತ್ತು ಜಲದಲ್ಲಿ ತೋರುವ ಸೂರ್ಯ ಪ್ರತಿಬಿಂಬವನ್ನು ನೋಡಿ ಬಳಿಕ ಜಲದ ಧರ್ಮವಾದ ಕಂಪ, ಕಾಲುಷ್ಯಮುಂತಾದ ಧರ್ಮಗಳನ್ನು ಆ ಪ್ರತಿಬಿಂಬದಲ್ಲಿ ಆರೋಪಿಸುತಾರಾಗಿ ಇದು ವಸ್ತ್ವಂತರ ಧರ್ಮಾಧ್ಯಾಸವೆನ್ನಲ್ಪಡುವದು. ಜಲದೊಳು ಕಾಣಬರುವ ಪ್ರತಿ

---

ವಾಗಿ ವ್ಯಾವಹಾರಿಕದಿಂದಿರ್ಪುದಾಗಿ, ವಿಚಾರಿಸಲೀಚಿತ್ತೆಯಹಂ ಪದಾರ್ಥವಳ್ಪಂ । ಸತ್ಯಾಧ್ಯಾ ಸಮಾಯಿತು. ಇನ್ನು ಕೆಲಬರ ಪಕ್ಷದಲ್ಲಿ ಮೂರುತೆರನಾಗಿರ್ಪುದು. ಅದೆಂತೆನೆ, ನಿರುಪಾಧಿಕಾಧ್ಯಾಸವೆಂದು ತದ್ಧರ್ಮಾಧ್ಯಾಸವೆಂದು,ಸಂಬಂಧ ಮಾತ್ರಾಧ್ಯಾಸವೆಂದು ಇವಕ್ಕೆ ದೃಷ್ಟಾಂತಗಳಾವವೆನೆ ರಜ್ಜು ಸರ್ಪವು,

ಬಿಂಬವೆಂಬ ವಸ್ತುವಿಗಿಂತಲುಜಲವೆಂಬ ವಸ್ತುವು ವಸ್ತ್ವಂತರವಾಗಿ ರುವುದು. ಆವಸ್ತ್ವಂತರವಾದ ಜಲದ ಧರ್ಮವಾಗಿರುವ ಚಾಂಚಲ್ಯ ಕಾಲುಷ್ಯ ಮುಂತಾದ ಧರ್ಮಗಳು ಆರೋಪಿಸಲ್ಪಡುತ್ತೆಯಾಗಿ ವಸ್ತ್ವಂತರ ಧರ್ಮಾಧ್ಯಾಸವೆಂಬದು ಯಥಾರ್ಥವಾಗಿರುವದು. ಇನ್ನು ತನ್ನ ಹೆಂಡತಿ ಮಕ್ಕಳು ಮುಂತಾದವರಿಗೆ ಸಂತೋಷವಾಗಲಿ, ವ್ಯಥೆಯಾಗಲಿ ಸಂಭವಿಸಿದ ಕಾಲದಲ್ಲಿ ನನಗೆ ಸಂತೋಷವಾಯಿತು. ನನಗೇ ವ್ಯಥೆಯುಂಟಾಯಿತು. ಎಂಬದಾಗಿಯು ಪತ್ನೀಪುತ್ರಾದಿಗಳಲ್ಲಿರುವ ಹರ್ಷ ವಿಷಾದಾದಿ ಧರ್ಮಗಳನ್ನ ತನ್ನಲ್ಲಿ ಆರೋಪಿಸುತ್ತಾನಾಗಿ ಇದು ಸಂಬಂಧಿಯಧ್ಯಾಸವೆಂದು ಹೇಳಲ್ಪಡುತ್ತದೆ. ಇನ್ನು ಕೆಲಬರ ಮತದಲ್ಲಿ ಗುಣಸಂಬಂಧಾರ್ಥಕವಾದ ಉಪಪದ ಪೂರ್ವಕವಾಗಿಯು, ಅಬದ್ಧಾರ್ಥಕವಾದ ಉಪಪದ ಪೂರ್ವಕವಾಗಿಯು, ಯಥಾರ್ಥವಾದ ಉಪಪದ ಪೂರ್ವಕವಾಯು, ಅಧ್ಯಾಸವು ಮೂರು ಪ್ರಕಾರವಾಗಿರುವುದು. ಇವುಗಳಿಗೆ ಲಕ್ಷ್ಯಸ್ಥಾನವು ಯಾವದೆಂದರೆ,-ಯಾವನಾದರೊಬ್ಬ ಬ್ರಾಹ್ಮಣೋತ್ತಮನನ್ನು ನೋಡಿ ಈ ಬ್ರಾಹ್ಮಣನು ಸಿಹ್ಮಕ್ಕೆ ಸಮಾನನಾಗಿರುವನು ಎಂಬದಾಗಿಅಥವಾಸಿಹ್ಮವು ಎಂಬದಾಗಿ ಯಾಗಲಿ ಹೇಳುವಲ್ಲಿ ಆ ಬ್ರಾಹ್ಮಣನಲ್ಲಿರುವ ವಿದ್ಯಾ, ತೇಜಸ್ಸು, ಪರಾಕ್ರಮ, ಮುಂತಾದ ಗುಣಗಳನ್ನು ಹಿಡಿದು ಬ್ರಾಹ್ಮಣನಲ್ಲಿ ಸಿಹ್ಮತ್ವವನ್ನು ಆರೋಪಿಸುವರು. ಇದು ಗುಣಸಂಬಂಧವಾದ ಆರೋಪಣವು. ಬ್ರಾಹ್ಮಣನು ಸ್ವತಸ್ಸಿದ್ಧವಾದ ಅಂದರೆ ನಿಜವಾದ ಸಿಹ್ಮವಲ್ಲವು ಎಂಬುವದು ಸ್ಪಷ್ಟವಾಗಿರುವದು. ಇನ್ನು ನಾನು ಮನುಷ್ಯನು ಎಂಬದಾಗಿ ಹೇಳುವಲ್ಲಿ ಸುಷುಪ್ತಿಕಾಲದಲ್ಲಿಯು, ಮೂ

---

ಜಲಪ್ರತಿಬಿಂಬವು, ಆತ್ಮಕುಟುಂಬವು, ಇನ್ನುಕೆಲಬರ ಪಕ್ಷದಲ್ಲಿ, ಗೌಣ, ಮಿಥ್ಯಾ, ಮುಖ್ಯಗಳೆಂಬ ಪದಗಳಿಂದ ಅಧ್ಯಾಸಂ, ತ್ರಿಪ್ರಕಾರವಾಗಿರ್ಪುದು. ಅದೆಂತೆನೆ, ದೇವದತ್ತನೆ ಸಿಹ್ಮವೆಂಬಲ್ಲಿ ದೇವದತ್ತ ನಿಷ್ಠಪರಾಕ್ರಮಮಂ ಕುರಿತು ಸಿಂಹಾರೋಪಂಬಂದುದು, ಮನುಷ್ಯನೆನಾನೆಂಬಲ್ಲಿ, ಸುಪ್ತಿ, ಮೂ

ರ್ಭಕಾಲದಲ್ಲಿಯು, ಮರಣ ಸಮಯದಲ್ಲಿಯು, ಶರೀರವು ಮಾತ್ರ ಬಿದ್ದು ಇರುವುದು. ಆ ಸಂದರ್ಭದಲ್ಲಿ ಶರೀರದೊಳು ನಾನು ಎಂಬ ವ್ಯವಹಾರ ವುಂಟಾಗುವದಿಲ್ಲವು. ಶರೀರವೆ ನಾನು ಎಂಬ ಪದಾರ್ಥ ವಾಗಿದ್ದಲ್ಲಿ ಮೇಲೆ ಹೇಳಿದ ಸಮಯಗಳಲ್ಲಿಯು ನಾನು ಎಂಬ ವ್ಯವ ಹಾರ ಉಂಟಾಗಬೇಕಾಗಿತ್ತು. ಆದ್ದರಿಂದ ಅನ್ಯತವಾಗಿರುವ ಮನು ಷ್ಯತ್ವವನ್ನು ನಾನು ಎಂಬ ಬೇರೆ ಪದಾರ್ಥದಲ್ಲಿ ಆರೋಪಿಸುತ್ತಾನಾ ಗಿ ಇದು ಅಬದ್ಧಾರ್ಥಕವಾದ ಉಪಪದ ಪೂರ್ವಕವಾಗಿರುವ ಅಧ್ಯಾ ಸವೆನ್ನಲ್ಪಡುವದು. ಇವೆಲ್ಲವು ಮಿಥ್ಯಾಶಬ್ದದಿಂದ ವ್ಯವಹರಿಸಲ್ಪ ಡುವವು. ಇನ್ನು ಪರಶಿವನೆ ನಾನು ಎಂಬದಾಗಿ ಹೇಳುವಲ್ಲಿ ಜಾಡ್ಯಾ ದಿ ದೋಷಗಳಿಂದೊಡಗೂಡಿದ ಸ್ಥೂಲಾದಿ ಶರೀರಗಳಿಂದ ಕೂಡಿರು ವ ಸ್ಥೂಲಾದಿ ಶರೀರಗಳೆ ಉಪಾಧಿಯಾಗಿಯುಳ್ಳ ಪ್ರತ್ಯಗಾತ್ಮ ಚೈತ ನ್ಯಕ್ಕು ನಿರುಪಾಧಿಕವಾದ ಸತ್ಯಜ್ಞಾನಾದಂದ ಲಕ್ಷಣವುಳ್ಳ ಪರಮಾತ್ಮ ನಿಗೂ ಈ ದೇಶಯಲ್ಲಿಯೇ ಅಭೇದವೆಂಬುವದು ಸಮನಿಸದೆ ಇದ್ದಾ ಗ್ಯೂ ಇಹಲೋಕ ಪರಲೋಕ ಸಂಬಂಧವಾದ ಸುಖಗಳಲ್ಲಿ ಅನಿತ್ಯ ತಾದಿ ಬುದ್ಧಿಯಿಂದ ಉಂಟಾದ ನಿರ್ಮಲ ವೈರಾಗ್ಯದಿಂದ ಕ್ರಮವಾ ಗಿ ಸದ್ಗುರುವಿನ ಸೇವಾದಿಗಳ ಮೂಲಕ ಬ್ರಹ್ಮ ವಿದ್ಯಾಭ್ಯಾಸವನ್ನು ಮಾಡಿ ಶ್ರವಣ ಮನನ ನಿಧಿಧ್ಯಾಸನಾದಿಗಳಿಂದ ಆವಿರ್ಭವಿಸಿದ ಅ ಮೋಘವಾದ ಬ್ರಹ್ಮಜ್ಞಾನದಿಂದ ನಾನು ಎಂಬ ಪದಾರ್ಥವು ಆನಂದ ಘನವಾಗಿರುವ ಅಖಂಡ ಚಿದ್ವಸ್ತುವು. ಈ ನಾನು ಸ್ಥೂಲ, ಸೂ ಕ್ಷ್ಮ, ಕಾರಣ ಶರೀರಗಳಿಗಿಂತಲೂ ಪ್ರತ್ಯೇಕವಾಗಿ ಅವುಗಳ ಸಂಬಂಧ ಲೇಶವೂ ಇಲ್ಲದೆ ಸ್ವತಃ ಪ್ರಕಾಶಮಾನನಾಗಿರುವೆನು. ನಾನು ಎಂಬ

---

ರ್ಭ, ಮರಣಂಗಳಲ್ಲಿ, ತನ್ನ ಶರೀರಂಬಿದ್ದಿರ್ದದಾವು ದೊಂ ದಂತಿಳಿಯದೆ ಎದ್ದು ತಾನೆಯಾಡುತಿರ್ದತಾನೆ ಮನುಷ್ಯನೆಂ ಬಲ್ಲಿ, ವಿಚಾರಬಾಧಿತಮಿಥ್ಯೆಯಿಂದು ಪೂರ್ವಾಚಾರ್ಯರು ಲಕ್ಷ ಣಮಂ ಪೇಳಿದರಾಗಿ, ವ್ಯವಹಾರ ಕಾಲದಿ ತೋರುತಿರ್ದದ ದಿಂ ಮಿಥ್ಯಾರೋಪಂಬಂದುದು.

ಪದಾರ್ಥಕ್ಕಿಂತಲೂ ಭಿನ್ನವಾದ ವಸ್ತುವೆಂಬುವದು ಪಾರಮಾರ್ಥಿಕ ವಾಗಿ ಇಲ್ಲವೆ ಇಲ್ಲ. ಎಂದೀಪ್ರಕಾರವಾಗಿ ಪ್ರತ್ಯಗಾತ್ಮ ಪರಮಾತ್ಮ ರಿಗೆ ಅಭೇದವೆಂಬುದು ಪರಮಾರ್ಥವಾದುದರಿಂದ ಇದು ಮುಖ್ಯಾ ರೋಪ ವೆನ್ನಲ್ಪಡುವದು.

೩ ಜಂಪೆ॥ ತಾ॥ ಯಾವದಾದರೊಂದು ಸ್ಥಳದಲ್ಲಿ ಬಂದಾನೊಂ ದು ಮೋಟು ಮರವನ್ನು ಕಂಡು ಇವ ಕಳ್ಳನು ಎಂಬದಾಗಿ ಭ್ರಾಂತಿ ಜ್ಞಾನ ವುಂಟಾಗುವದು. ಹೀಗೆಯೆ ಒಂದು ಹಗ್ಗವನ್ನು ನೋಡಿದಾ ಗ ಇದು ಹಾವು ಎಂಬದಾಗಿ ಭ್ರಾಂತಿಜ್ಞಾನ ಉಂಟಾಗುವದು. ಮೋ ಟುಮರವು ಕಳ್ಳನಾಗುವದುಂಟೆ? ಹಗ್ಗವು ಹಾವಾಗುವದು ನಿಜವೆ? ಮತ್ತು ಇದು ಯಥಾರ್ಥವಾಗಿ ಬಂದಿರುವುದೆ? ಇಲ್ಲ. ‖ ೧ ‖ ಆದರೆ ಮೋಟು ಮರವು ಮತ್ತು ಹಗ್ಗವು ಇವೆರಡು ಯಥಾರ್ಥವಾಗಿ ಇಲ್ಲದೆ ಹೋದರೆ ಭ್ರಾಂತಿ ಜನ್ಯವಾಗಿ ಮೋಟು ಮರವನ್ನು ಬಿಟ್ಟು ಕಳ್ಳನ ನ್ನು ಹಗ್ಗವನ್ನು ಬಿಟ್ಟು ಬಿಟ್ಟು ಹಾವನ್ನು ನೋಡುವದಕ್ಕೆ ಆಗು ವದುಂಟೆ? ಇಲ್ಲವು. ‖೨‖ ಈ ಪ್ರಕಾರವಾಗಿಯೇ ಸತ್ವಪ್ರಧಾನವಾ ದ ಬುದ್ಧಿಯ ಬಲದಿಂದ ಚೆನ್ನಾಗಿ ವಿಚಾರಮಾಡಿ ನೋಡಿದ್ದ ಆದರೆ, ಚಿದಾನಂದ ಘನಸ್ವರೂಪವಾದ ಬ್ರಹ್ಮವೆಂಬ ಅಧಿಷ್ಠಾನ ಪದಾರ್ಥದ ಲ್ಲಿ ಈ ಪ್ರಪಂಚವೆಂಬುವದು ಆ ಅಧಿಷ್ಠಾನವಾಗಿರುವ ಬ್ರಹ್ಮಾಜ್ಞಾನ ದಿಂದ ಈ ಪ್ರಪಂಚದಭ್ರಮೆಯು ಉಂಟಾಗುವದು. ಬ್ರಹ್ಮವೆಂಬ ಅಧಿಷ್ಠಾನ ವಸ್ತುವು ಇಲ್ಲದೆ ಹೋದರೆ ಒಂದು ಕಾಲಕ್ಕು ಪ್ರಪಂಚ ಭ್ರಾಂತಿಯುಉಂಟಾಗುವದಿಲ್ಲವು. ಈಮೇರಿಗೆ ಉಪಮಾನೋಪ ಮೇ

೩ ಮೂಲ॥ ಜಂಪೆ॥ ದ್ರುಮದಲ್ಲಿ ಚೋರರಜ್ಜುವಿನಲ್ಲಿ ಸರ್ಪಸಂ।
ಭವಮೇಂವಿವೇಕದಿಂ ಬಂದುದೆನಿತ್ಯಂ॥೧॥
ಅಲ್ಲದಿರಲಾಯಾಪದಾರ್ಥಂಗಳಾಗುವವೆ! ಇಲ್ಲದಿರುವವಿವುತೋ
ರ್ಪವೆಯುಮಂಬಿಟ್ಟು ॥೨॥
ಎಂತೆಂತುವಸ್ತುವಿನೊಳಿಹುದೀ ಪ್ರಪಂಚ। ದೃಷ್ಟಾಂತರಾಯು
ದ ಬಲದಿಸತ್ವದಿಂ ತಿಳಿಯೆ ॥೩॥

ಯು ಪದಾರ್ಥಗಳಲ್ಲಿ ಸಮನ್ವಯುವನ್ನು ತಿಳಿದುಕೊಳ್ಳತಕ್ಕದ್ದು‖೩‖ ಈ ಜಗತ್ತೆಂಬುವದು ಪರಮಾರ್ಥವಾಗಿ ಇಲ್ಲದಿರುವ ದಾದುದರಿಂದಲೆ ಪರಮಾರ್ಥವಾದ ಬ್ರಹ್ಮಜ್ಞಾನದಿಂದ,ಮೊದಲು ಅವಿದ್ಯಾ ಬಲದಿಂದ ಉಂಟಾಗಿದ್ದ ಅಪಾರಮಾರ್ಥಿಕವಾದ ಪ್ರಪಂಚ ಜ್ಞಾನವು ನಿವೃತ್ತಿಯಾಗುವದು. ಹೀಗೆ ಈ ಅಜ್ಞಾನವು ನಿವೃತ್ತಿಸಲು ಸತ್ಯಜ್ಞಾನಾನಂದಮಯುವಾದ ಬ್ರಹ್ಮ ಪದಾರ್ಥ ವೊಂದೇ ಉಳಿಯುವದು. ‖೪‖ ಆವಿಯೊಳಿಲ್ಲದೆ ಮತ್ತು ಮಧ್ಯಕಾಲದಲ್ಲಿ ಇಲ್ಲದೆ ಇನ್ನು ಅಂತ್ಯದೊಳು ಇಲ್ಲದಿರುವ ಈ ಪ್ರಪಂಚ ರೂಪವಾದ ವಿಕಾರವು ಭ್ರಾಂತಿ ದೃಷ್ಟಿಯಿಂದ ತೋರುತಲಿರುವದು. ಆ ಭ್ರಾಂತಿ ಯೆಂಬುದು ಇಲ್ಲದೆ ಹೋದರೆ ಆತ್ಮಸ್ವರೂಪ ವೆಂಬುವದು ಯಾವವಿಧವಾದ ವಿಕಲ್ಪವೂ ಇಲ್ಲದೆ, ಶುದ್ಧವಾಗಿರುವದು. ಅಂತಪ್ಪ ಸಚ್ಚಿದಾನಂದ ಸ್ವರೂಪವಾದ ನಿರ್ವಿಕಲ್ಪವಾಗಿರುವ ಆತ್ಮನೇ ನಾನು ಎಂಬದಾಗಿ ತಿಳಿದರೆ ನೀನು ಈ ಜನನ ಮರಣ ಪ್ರವಾಹ ರೂಪವಾದ ಸಂಸಾರ ಬಂಧದಿಂದ ಮುಕ್ತನಾಗಿ ಕೃತಕೃತ್ಯ ನಾಗುವಿ ‖೫‖

೪ ವ ‖ ತಾ ‖ ಈ ಪ್ರಕಾರವಾಗಿ ಅಧ್ಯಾರೋಪ ಪ್ರಕಾರವನ್ನು ಆರೋಪ ನಿಮಿತ್ತವಾದ ಅಧಿಷ್ಠಾನ, ಅಜ್ಞಾತೆ, ದೋಷ ಮುಂತಾದವುಗಳನ್ನು ಪ್ರಕಾಶ ಪಡಿಸುವದರ ಮೂಲಕ ವ್ಯಕ್ತಪಡಿಸಿ, ಹಾಗೆಯೇ ಆ ಆರೋಪವು ನಿವೃತ್ತಿ ಯಾಗುವ ಮಾರ್ಗವನ್ನು ಯುಕ್ತಿ

---

ಇಲ್ಲ ದಿಹುದಿಲ್ಲವಾಗಿರುವದಿರುತಿಹುದಿಲ್ಲವಾಗಿರುವದಿರುತಿಹುದು ಕಡೆಯುಲ್ಲವಿದ್ಯೆಯು । ಬಾಧೆಯುವಶವರ್ತಿನಿಯು ‖೪‖
ಅನುಪಪತ್ತಿಯು ದೆಶೆಯೊಳಾಂಯಿನಾವಿಕಾರ । ಮಾತ್ಮನುನಿರ್ವಿಕಲ್ಪನಾನೆನೆನೀಕೃತಾರ್ಥ ‖೫‖

೪ ಮೂಲ‖ ವಚನ‖ ಇತೆಂದಧ್ಯಾರೋಪಾಪವಾದ ಪದ್ಧತಿಯುಂ, ಶ್ರುತಂಗೊಳಿಸಿ, ಇನ್ನೊಂದು ಪ್ರಕಾರಮಂ ಪೇಳುತಿರ್ದಪನದೆಂತೆನೆ.

೨ ಇಂತು ಅಧ್ಯಾರೋಪಾ ಪವಾದ ಪದ್ಧತಿಯು ಮುಗಿದುದು.

ಪ್ರಮಾಣಗಳನ್ನು ಉದಹರಿಸುವದರ ಮೂಲಕ ವ್ಯಕ್ತಗೊಳಿಸಿ ಇನ್ನೊಂದು ರೀತಿಯಿಂದವುದಹರಿಸುತ ಲಿದಾನೆ.

೭ ಇಂತು ಅಧ್ಯಾರೋಪಾಪವಾದ ಪದ್ಧತಿಯು ಮುಗಿದುದು.

---

## ೮ ಜ್ಞಾನಸ್ವರೂಪ ವಿಚಾರ ಪದ್ಧತಿ ಪ್ರಾರಂಭವು.

೧ ಸೀಸಪದ್ಯ॥ ತಾ॥ ಪೃಥ್ವಿಯು, ಜಲವು, ತೇಜಸ್ಸು, ವಾಯುವು, ಆಕಾಶವು, ಎಂಬ ಪಂಚಭೂತಗಳು, ಮತ್ತು ಪ್ರಾಣ, ಅಪಾನ, ಉದಾನ, ಸಮಾನ, ವ್ಯಾನಗಳೆಂಬ ಪಂಚಪ್ರಾಣಗಳು, ಶ್ರೋತ್ರ, ತ್ವಕ್ಕು, ನೇತ್ರ, ಜಿಹ್ವ, ಘ್ರಾಣಗಳೆಂಬ ಜ್ಞಾನೇಂದ್ರಿಯ ಪಂಚಕವು. ವಾಕ್ಕು, ಪಾಣಿ, ಪಾದ, ಪಾಯು, ಗುಹ್ಯಗಳೆಂಬ ಕರ್ಮೇಂದ್ರಿಯ ಪಂಚಕವು, ಮನಸ್ಸು, ಬುದ್ಧಿ, ಚಿತ್ತ, ಅಹಂಕಾರಗಳೆಂಬ ನಾಲ್ಕು ಅಂತಃಕರಣಗಳು ಸ್ಥೂಲಶರೀರವು ಸಹ ಶೇರಿ ಇರಲು ಇದಕ್ಕೆ ಅಧಿದೇವತೆಯು ವಿಷ್ಣುವೆಂದರಿವುದು. ಇದಕ್ಕೆ ಅಕಾರವೆ ಬೀಜಾಕ್ಷರ. ಸತ್ವವೇಗುಣ. ನೇತ್ರವೇಸ್ಥಾನ. ಹೃದಯ ಕಮಲದ ಎಸಳುಗಳೊಳು ಕ್ರಮವಾಗಿ ಸಂಚಾರಮಾಡುವ ನಿಮಿತ್ತದಿಂದ, ಅಂಗನೆಯು, ಅನ್ನವು, ಪಾನವು, ಮುಂತಾದ ಚಿತ್ರವಿಚಿತ್ರವಾಗಿರುವ ಭೋಗಸಮುದಾಯುವನ್ನು ಜಾಗ್ರದವಸ್ಥ ಕಾಲದೊಳು ಪ್ರತಿಬಿಂಬಭಾವವನ್ನು ಹೊಂದಿ ವಿಶ್ವನೆಂಬಹೆಸರಿನಿಂದ ಸ್ಥೂಲದೇಹವನ್ನಾಶ್ರಯಿಸಿ ಇನ್ನು ತದಭಿಮಾನಿಯಾಗಿಯೂ ಇರುವ ಜೀವನು, ಸಾಗೆಯೆ

---

## ೮ ಜ್ಞಾನಸ್ವರೂಪ ವಿಚಾರ ಪದ್ಧತಿ ಪ್ರಾರಂಭವು.

---

೧ ಮೂ॥ ಸೀಸಪದ್ಯ॥ ಪಂಚಭೂತಗಳುಂ, ಪ್ರಾಣಪಂಚಕಮುಂ
ದಶೇಂದ್ರಿಯಮುಂ, ಮನಶ್ಚಿತ್ತ, ಬುದ್ಧ್ಯಹಂಕಾರಮುಂ,
ಸ್ಥೂಲಮಾದ ದೇಹದಿ ಕೂಡಲಧಿದೇವತೆಯೆ ! ವಿಷ್ಣುವಾಕ್ಷ
ರಂ । ಗುಣವೆ ಸಾತ್ವಿಕಂ, ಲೋಚನಂ ಸ್ಥಾನಂ, ಹೃತ್ಪದ್ಮ

ಸ್ಥೂಲದೇಹ ಸಮಷ್ಟಿಗಭಿಮಾನಿಯಾಗಿ ಬಿಂಬಭೂತನಾಗಿಯೂ ಇರುವ ವಿರಾಟ್ ಸಂಜ್ಞಕನಾದ ಈಶ್ವರನು, ಈ ಇಬ್ಬರೂ ಸೇರಿ ಅನುಭವ ಮಾಡುತಲಿರುವದು ಸಮಂಜಸವಾಗಿರುವುದು ಇಂತಪ್ಪ ಜಾಗ್ರದವಸ್ಥೆಯೊಳು ಸ್ಥೂಲಶರೀರವನ್ನಾಶ್ರಯಿಸಿರುವ ನೇತ್ರ ಸ್ಥಾನದಲ್ಲಿರುತ ಇತರ ಸಮಸ್ತ ಇಂದ್ರಿಯಗಳ ಸಾಧನೆಗಳಿಂದ ಕೂಡಿರುವ ಅರಿವೆಂಬ ಪದಾರ್ಥವು ತಂಗಾಳಿಯಿಂದ ಚಾಂಚಲ್ಯವನ್ನು ಹೊಂದುತಲಿರುವ ಮಾಮರದ ಚಿಗುರಿನ ಮೇಲೆಬಿದ್ದು ಥಳಥಳಿಸುತಿರುವ ಚಂದ್ರಕಿರಣದಂತೆ ಸಂಶೋಭಿಸುತಲಿರುವುದು. ಇಂತು ವಿರಾಜಮಾನವಾದ ಅರಿವನ್ನು ನೀನು ಚಾಂಚಲ್ಯವನ್ನು ಬಿಟ್ಟು ಅದೇ ನಾನೆಂಬದಾಗಿ ಅನವರತವೂ ಭಾವಿಸುತಲಿರುವುದು.

೨ ವೃತ್ತ॥ತಾ॥ಪೃಥಿವಿಯು,ಅಪ್ಪು,ತೇಜಸ್ಸು, ವಾಯುವು,ಆಕಾಶವು,ಎಂಬ ಐದು ಭೂತಗಳು.ಇನ್ನು ಚಿತ್ತ;ಬುದ್ಧಿಗಳೆರಡುವಿಳು ತತ್ವಗಳನ್ನು ಬಿಟ್ಟು ಉಳಿದ ಹದಿನೇಳು ತತ್ವಗಳ ಸಮುದಾಯದಿಂದೊಡಗೂಡಿರುವ ಲಿಂಗದೇಹದಲ್ಲಿಉಕಾರವೆಂಬಬೀಜಾಕ್ಷರದಿಂದ ಸಂಧಿಸಿ, ರಜೋಗುಣವನ್ನಳವಟ್ಟು ಚತುರ್ಮುಖ ಬ್ರಹ್ಮನನ್ನು ಅಧಿದೇವ

---

ದಗಳತಿಯಿಂ, ದೇಶಾಂತಾದಿವಿಷಯ, ರಾಜಿಯವಿಶ್ವಂ, ವಿರಾಟ್ಪುರುಷಂಗೂಡಿಭೋಗಿಪುದೊಪ್ಪುಗುಂ, ಜಾಗರಣವೆನಿಸುವ ನಾಮದಿ ಧಾಮವಾಗೆಲೆಯೊಳಖಿಳ ಕರಣಸಾಮಗ್ರಿಯಿಂ, ದಿಪ್ಪುದರಿಪುದಾವ ನಿಲಕಂಪಿತ ಪಲ್ಲವಪ್ರಣಿಹಿ, ತೇಂದುಕಿರಣದಂತಿರ್ಪುದನೆನೀಂಸ್ಥಿರದಿವರಿಸು॥

೨ ಮಾ॥ ವೃತ್ತ॥ ಭೂತಗಳೈದುಚಿತ್ತಮತಿಗಳ್ಪೊರಗಾಗಿರೆ ವಿಕ್ಕತತ್ವಸಂ । ಘಾತದಿಸೂಕ್ಷ್ಮದೇಹದೊಳುಕಾರರಜೋಗುಣಧಾತೃದೈವಕಂ । ರಾತಿನಿವೇಶಹೃತ್ಕಮಲಕೇಸರಚಾರಗಳಿಂದೆವಾಸನಾ । ಜಾತಸಮಸ್ತಗೋಚರಮನುಣ್ಣುವದೆ ಮನಮೆಂಬವೃತ್ತಿಯಿಂ॥

ತೆಯಾಗಿ ಹೊಂದಿ ಕಂಠವನ್ನು ಸ್ಥಾನವನ್ನಾಗಿ ಮಾಡಿಕೊಂಡು ಹೃದಯಕಮಲದ ಕೇಸರಗಳೊಳು ಅನವರತವೂ ಜೀವಸಂಚಾರ ಕ್ರಮದಿಂದ ಜಾಗ್ರದವಸ್ಥೆಯೊಳಾವಿರ್ಭವಿಸಿ ಇಂದ್ರಿಯಗಳಿಗೆ ಗೋಚರಗಳಾದ ಸುಖದುಃಖ ಪರಂಪರೆಗಳನ್ನು ಮನೋವೃತ್ತಿ ಪ್ರವೃತ್ತಿಗನುಗುಣವಾಗಿ ಅನುಭವಿಸುತ.

೩ ವ॥ ತಾ॥ ವ್ಯಷ್ಟಿಲಿಂಗ ಶರೀರಾಭಿನಿಯಾಗಿ ತೈಜಸನೆಂಬ ನಾಮಧೇಯವನ್ನು ಪಡೆದು ಇರುವ ಜೀವನು, ಸಮಷ್ಟಿಲಿಂಗ ಶರೀರಾಭಿಮಾನಿಯಾದ ಸೂತ್ರಾತ್ಮಕನೆಂಬ ಹೆಸರುಳ್ಳ ಈಶ್ವರನು ಸಹ ಮನೋವೃತ್ತಿಯಿಂದ ಅನುಭವಿಸುತಲಿರುವದೆ ಸ್ವಪ್ನಾವಸ್ಥೆಯೆನಿಸಿಕೊಳ್ಳುವದು. ಅಂತಪ್ಪ ಸ್ವಪ್ನಾವಸ್ಥೆಯೊಳು ಅರಿವೆಂಬದೆಂತಿರುವದೆಂದರೆ,-ಎರಡು ಕಡೆಗಳಲ್ಲಿಯೂ ತುಂಬಿ ಗುಂಪಾಗಿ ಬೆಳದ ಮರಗಳ ಎಲೆಗಳಿಂದ ಆಚ್ಛಾದಿತವಾಗಿರುವಲ್ಲಿ ಗಾಳಿಯುಬರಲು ಆ ಗಾಳಿಯಿಂದವಿಶೇಷವಾಗಿ ಚಾಂಚಲ್ಯವನ್ನು ಪಡೆವುತ ಮಧ್ಯಭಾಗದೊಳಿರುವ ಸರೋವರದ ಜಲದಂತಿರುವುದು. ಹೀಗಿರುವ ಆ ಅರಿವೇ ನಾನು ಎಂಬದಾಗಿ ನೀನು ಸೂಕ್ಷ್ಮವಾದ ಬುದ್ಧಿಯಿಂದ ತಿಳದುಕೊಳ್ಳತಕ್ಕದ್ದು ಕೃತಾರ್ಥತೆಗೆ ಮುಖ್ಯಕಾರಣ ವಾಗಿರುವದೆಂದು ತಿಳಿದಿಕೋ.

೪ ಏಕತಾಳ॥ ತಾ॥ ಹೊರಗೆ ತಮ್ಮ ತಮ್ಮ ಇಚ್ಛಾನುಸಾರವಾಗಿ ಹರಡಿಕೊಂಡು ವಿಸ್ತಾರವಾಗಿ ಓಡಿಯಾಡುತ್ತಾ ಇರುವ ಮರಿಗಳನೆಲ್ಲ ತನ್ನ ರೆಕ್ಕೆಯಗರಿಗಳಿಂದ ಹೊರಗೆ ಕಾಣಬರದಂತೆ ಅಡಗಿಸಿಕೊಂಡು ಇರುತಿರುವ ಹೆಣ್ಣುಕೋಳಿಯಹಾಗೆ. ॥೧॥ ಈ ಹಿಂದೆ ಉದಹರಿ

---

೩ ಮೂ॥ ವ॥ ತೈಜಸಜೀವನು, ಸೂತ್ರಾತ್ಮ ಸಂಜ್ಞಕೇಶ್ವರನು ಸ್ವಪ್ನಾವಸ್ಥೆಯನಿಪುದದರಲ್ಲರಿವು, ತಟತರುಪಲಾಶಾ, ವೃದ್ಧವಾತೂಲಕ್ಷಪಿತ ಸರೋದಕದಂ ತಿರ್ಪುದದರಿಂ ನೀನು ಸುಬುದ್ಧಿಯಿಂವರಿಸು.

೪ ಮೂ॥ ಏಕತಾಳ॥ ಪರೆದುಪೋಯುತಿರ್ಪಮರಿಗಳನೆಲ್ಲವ। ಗರಿಯೊಳಡಗಿಸಿದಚರಣಾಸ್ತ್ರಿಯಂತೆ ॥೧॥

ಸಿದೆ ಇಪ್ಪತ್ತು ನಾಲ್ಕು ತತ್ವಗಳನ್ನು ಅಡಗಿಸಿ ಅಂದರೆ ? ಹೊರಗೆ ಪ್ರಚಾರಗೊಂಡು ತಮ್ಮ ತಮ್ಮ ವಿಷಯಗಳನ್ನು ಆಶ್ರಯಿಸಿ ಗಲಿಬಿಲಿಯಾಗಿರುವಂಥವುಗಳನ್ನೆಲ್ಲಾ ತನ್ನಲ್ಲಿ ಅಡಗಿಸಿಕೊಳ್ಳತಕ್ಕ ಸಾಮರ್ಥ್ಯವುಂಟಾಗಿ ಕಾರಣರೂಪವಾಗಿರುವ ಅಜ್ಞಾನವೆಂಬ ದೇಹದಲ್ಲಿ. ||೧|| ತಮೋಗುಣವನ್ನಳವಟ್ಟು ರುದ್ರನನ್ನು ಅಧಿದೇವತೆಯಾಗಿ ಹೊಂದಿ ಐದನೆಯ ವರ್ಗವಾಗಿ ತುಟಿಗಳ ಸಹಾಯದಿಂದ ಉಚ್ಚರಿಸಲ್ಪಡುವ ಪವರ್ಗದ ಪಂಚಮವರ್ಣವಾದ ಮಕಾರವೇ ಬೀಜಾಕ್ಷರವನ್ನಾಗಿ ಹೊಂದಿ ಹೃದಯಾರವಿಂದವೇ ಸ್ಥಾನವಾಗಿರುವದರಿಂದ. ||೨|| ಆ ಕಮಲದಳದ ಸಂಚಾರಾನುಕ್ರಮವಾಗಿಆ ಕಮಲದ ಕರ್ಣಿಕಾಮಧ್ಯಭಾಗದೊಳು ಇರುತ ಪ್ರಾಜ್ಞನೆಂಬ ಹೆಸರನ್ನು ಪಡೆದಿರುವ ಜೀವನು, ಸ್ವಾಮಿಯಾಗಿ ಅಂತರ್ಯಾಮಿಯೆಂದು ಹೆಸರನ್ನು ಪಡೆದಿರುವ ಈಶ್ವರನು ಸಹ ಕೇರಿಕೊಂಡು ಅಪರಿಮಿತವಾದ ಆನಂದವನ್ನು ||೪|| ಅನುಭವಿಸುತಲಿರುವುದೇ ಮಯಾವೃತ್ತಿಯ ವೈಭವದಿಂದ ಸುಷುಪ್ತ್ಯವಸ್ಥೆಯೆಂಬದಾಗಿ ಪ್ರಾಜ್ಞಶಿರೋಮಣಿಗಳು ಪೇಳುತಲಿರುವರು. ಅಂದರೆ ಆ ಸುಷುಪ್ತ್ಯವಸ್ಥೆಯ ಇಯತ್ತೆಯನ್ನು ಬಲ್ಲ ಕೋವಿದರು ಪೇಳುವರೆಂದಾಶಯವು. ... ||೫||

---

ತತ್ವಂಗಳೆಲ್ಲವ ತನ್ನೊಳಿಂಬಿಡುವ । ಮಹತ್ವಮುಳ್ಳಕಾರಣ
ವಾದದೇಹದಲ್ಲಿ ||೧||

ತಮವೆಗುಣಂ, ರುದ್ರನೆದೈವಮೌಷ್ಠ್ಯಪಂಚಮವೆ ವರ್ಣಂಹೃ
ತ್ತೆ ಸ್ಥಾನಮಾಗಿರಲು ||೨||

ಗತಿಯಿಂಹೃತ್ಕಂಜಕರ್ಣಿಕಮಧ್ಯದ । ಪ್ರಾಜ್ಞನು, ಪತಿಯಾ
ದಂತರ್ಯಾಮಿಯುಪರಮಾನಂದವನು ||೪||

ಉಣ್ಣುವದೆ ಮಾಯೋಪಾಧಿಯಿಂ । ಸುಷುಪ್ತಿಯೆನ್ನುವದಾಬು
ದವರಿದವರು ||೫||

೫ ಕಂದ॥ ತಾ ॥ ಅಂತಪ್ಪ ಕಾರಣ ಶರೀರದೊಳಗೆ ಆವರಣಾದಿ ದೋಷ ಲೇಶವಿಲ್ಲದೆ ನಿರ್ಮಲವಾಗಿಯು ಇರುವ ಚಂದ್ರಕಾಂತ ಶಿಲೆಯ ಮೇಲೆ ಶರತ್ಕಾಲದ ಪೂರ್ಣಚಂದ್ರನ ಚಂದ್ರಿಕೆಯು ಬೀಳಲು ಆ ಸಂದರ್ಭದೊಳು ಆ ಸ್ಥಳದೊಳುಂಟಾಗಿರುವ ಥಾಳಥಳ್ಯದಂತೆಸೆವುತ ತೇಜೋರಾಶಿಯಾಗಿರುವ ಅರಿವು ಯಾವದುಂಟೋ ಆ ಅಮೋಘವಾದ ಅರಿವನ್ನು ನೀನು ನಿನ್ನ ಸ್ವಾನುಭವಬಲದಿಂದ ನಾನು ಎಂಬದಾಗಿ ದೃಢವಾಗಿ ತಿಳಿಯತಕ್ಕದ್ದು,

೬ ಜಂಪೆ॥ ತಾ॥ ಈ ಮೇಲೆ ಉದಹರಿಸಲ್ಪಟ್ಟ ಅರಿವುಜಾಗ್ರತ್ತು ಮತ್ತು ಸ್ವಪ್ನ, ಈ ಅವಸ್ಥೆಗಳೊಳಗೆ ಇರುತ್ತಿರುವಂತೆ ತೋರುತ್ತಿದ್ದು ಮಹಾಸುಷುಪ್ತಿಯವಸ್ಥೆಯಲ್ಲಿ ಅಂದರೆ ಗಾಢನಿದ್ರೆಯೊಳು ಇಲ್ಲದಿರುವಂತೆಯು ತೋರುತಲಿಧೆ. ॥೧॥ ಆಸುಷುಪ್ತಿಯೊಳು ಈ ಅರಿವು ಇಳದೆ ಹೋದ ಪಕ್ಷದಲ್ಲಿ ಸುಷುಪ್ತ್ಯವಸ್ಥೆಯನ್ನು ಅನುಭವಿಸುವ ಮನುಷ್ಯನು ಪುನಃಜಾಗ್ರದ ವಸ್ಥೆಯನ್ನು ಹೊಂದಲು ಆ ಸಂದರ್ಭದಲ್ಲಿ ಯಾವನಾದರೊಬ್ಬ ಅವನಂಕುರಿತು ಏನೈಯ್ಯಾ ? ಇದುವರಿಗು ನೀನು ಯೇನುಮಾಡುತಲಿದ್ದೆ ? ಮತ್ತು ಏನನುಬಲ್ಲೆ? ಎಂಬದಾಗಿ ಪ್ರಶ್ನೆಮಾಡಿದರೆ ಆಗಲವನು ನಾನು ಇದುವರಿಗು ಸುಖವಾಗಿ ನಿದ್ರೆಮಾಡುತಲಿದ್ದೆ ಮತ್ತೆ ಯಾವದನ್ನೂ ಅರಿಯೆ ಎಂಬದಾಗಿ ಉತ್ತರಕೊಡುವನು ಆದರೆ ಸುಷುಪ್ತ್ಯವಸ್ಥೆಯೊಳು ಸುಖಾ

---

೫ ಮೂ॥ ಕಂ॥ ಇರುತಿಹುದಾಬಳಿಯ ಲಿಜ ।
ಝರ್ಝರದೋಷತ್ಯಕ್ತಚಂದ್ರಕಾಂತೋತ್ಪಲದೋಳ್ ॥
ಬೆರಸಿದಚಂದ್ರಿಕೆಯಂದದ ।
ಲರಿವದನನುಭೂತಿಮಾತ್ರದಿಂನೀವರಿಸೈ ॥

೬ ಮೂ॥ ಜಂಪೆ॥ ಇರುತಿಹುದಿವಿಕ್ಕಜಾಗರಣದಲಿನಿದ್ರೆಯಲ್ಲಿ ಅ
ವಿಲ್ಲವೆಂಬದೊತ್ತ್ರಿಕುಸುಪ್ತಿಯಲಿ ॥೧॥
ಆದರೆಚ್ಚತ್ತುನಾನಾನಂದದಿಂದಿದ್ದೆ,ಯೇದೆಸೆಯುಕಾಣೆನೆಂಬೆಣಿಕೆ
ತತ್ಪರದಿ ॥೨॥

ನುಭವವನ್ನು ಮಾಡುವ ಅಥವಾ ತಿಳಿವ ಅರಿವೆಂಬ ಪದಾರ್ಥವು ಇಲ್ಲದೆ ಹೋದರೆ ಜಾಗ್ರದವಸ್ಥೆಯೊಳು ಸ್ಮೃತಿಯುಂಟಾಗಲು ನಿಮಿತ್ತವೇನು ? ಅನುಭವವಿಲ್ಲದೆ ಸ್ಮೃತಿಯೆಂಬುವದು ಯಾವ ಮತರೀತಿಯಾಗಿಯೂ ಹುಟ್ಟುವದೇ ಇಲ್ಲ. ಮತ್ತುಹಾಗೆಯೇ ಹುಟ್ಟುವದೆಂದು ಹೇಳಿದರೆ ಸರ್ವರ ಅನುಭವಕ್ಕು ವಿರೋಧವಾಗಿರುವದು. ಹ್ಯಾಗಂದರೆ, ಯಾವನಾದರೊಬ್ಬನು ಯಾವದಾದರೊಂದು ಪದಾರ್ಥವನ್ನು ಯಾವಬಗೆಯಿಂದಲು ಎಂದಿಗೂ, ತಿಳಿಯದಿದ್ದರೆಅವನುಆ ಪದಾರ್ಥವನ್ನು ಒಂದು ಕಾಲಕ್ಕೂ, ಸ್ಮರಿಸಲಾರನು ಈ ಅರ್ಥವು ಸರ್ವಾನುಭವಸಿದ್ಧವಾಗಿರುವದು ॥೧॥ ಮತ್ತು ಆಸುಷುಪ್ತ್ಯವಸ್ಥೆಯಲ್ಲಿ ಅರಿವಾದ ತಾನು ಇಲ್ಲದೆ ಹೋದರೆ ಈಹಿಂದೆ ಹೇಳಿದ ಸುಖವನ್ನು ತಿಳಿದು ಹೇಳುವವನು ಯಾರು ? ಅಂತಃಕರಣವಾದ ಅಹಂಕಾರವು ಇಲ್ಲದೆ ಹೋದಬಳಿಕ ತಾನು ಇಲ್ಲದೆ ಹೋದರೆ ಈ ಅರಿವು ಇನ್ನು ಅಹಂಕಾರ ಇವೆರಡು ಇಲ್ಲದೆಯೇ ಸುಖವೆಂಬುವದು ತೋರಿದಂತಾಗುವದು ಹೀಗೆ ತೋರುವಿಕೆಯೆಂಬುವದು ಅಪ್ರಸಿದ್ಧವು. ಹಿಂದೆ ಹೇಳಿದಂತೆ ಅನುಭವವಿಲ್ಲದೆ ಸ್ಮೃತಿ ಯುಂಟಾಗುವದಿಲ್ಲ ವಾದುದರಿಂದಲು, ಅರಿವಿಲ್ಲದೆ ಅನುಭವ ವುಂಟಾಗುವದಿಲ್ಲವಾದ ಕಾರಣದಿಂದಲು, ಆತ್ಮನು ತಮಸ್ಸಾಕ್ಷಿಯಾಗಿಯೂ, ಸರ್ವಸಾಕ್ಷಿಯಾಗಿಯೂ, ಇರುವನೆಂದು ಮೊರೆ ಇಡುವ ಶ್ರುತಿ ಪ್ರಮಾಣ್ಯದಿಂದಲೂ, ಆ ಮಹಾಸುಷುಪ್ತಿಯಲ್ಲಿಯೂ ಅರಿವೆಂಬುದು ಇರುವದೆಂದು ನಿಸ್ಸಂದೇಹವಾಗಿ ತಿಳಿಯತಕ್ಕದ್ದು. ॥೩॥ ಆದಕಾರಣ ಸಮಸ್ತ ದೇಹಧಾರಿಗಳ ಅನುಭವ ಮಾರ್ಗಕ್ಕೆ ಸಿದ್ಧವಾಗಿರುವ ನಿರ್ಮಲವಾದ ಅರಿವು ಎಂಬಪದಾರ್ಥವು ಯಾವದುಂಟೋ ? ಅದೆತ್ರಿಕಾಲಾಬಾಧಿತವಾದ ಸತ್ಯಸ್ವ

---

ಇಲ್ಲದೆಪೋಗೆತನಗೆಲ್ಲಿ ಬಂದುದುಕರಣ, ವಿಲ್ಲದಿರಲಿಲ್ಲದವೋ ಲಲ್ಲಿ
ತೋರಿದುದು ॥೩॥
ಅದರಿಂದಖಿಲರನುಭವದ ಪದ್ಧತಿಗೆ ಸಿದ್ಧ, ವದುನಿತ್ಯವದುಸ
ತ್ಯವದುಸುಖಾತ್ಮಕವು ॥೪॥

ರೂಪವಾದದ್ದು. ಅದೆಸ್ವತಃ ಪ್ರಕಾಶಮಾನವಾದ ಜ್ಞಾನಸ್ವರೂಪವಾದದ್ದು. ಅದೆದುಃಖಾಭಾವರೂಪವಾಗಿರುವ ಆನಂದರೂಪವಾದದ್ದು. ॥೪॥ ಈ ಅರಿವೇಹಿಂದೆ ಹೇಳಲ್ಪಟ್ಟ ಅರಿವಿಗಿಂತಲೂ ಅಭಿನ್ನವಾದದ್ದು. ಆಚಿತ್ಸ್ವರೂಪವೆ ನಾನು ಎಂಬದಾಗಿ ತಿಳಿದರೆ ಆಗ ಅವಿದ್ಯಾಮತ್ತು ಅದರಕಾರ್ಯ, ಇವುಗಳಿಂದುಂಟಾದ ಬಂಧವೆಂಬುವದುನಿನಗೆ ಸುತರಾಂಇರುವದೆ ಇಲ್ಲ. ಆಗಲೇ ನೀನು ಕೃತಕೃತ್ಯನು, ಶ್ರೀ ವಿರಾಟ್ ಸ್ವರೂಪನಾದ ಪರಮೇಶ್ವರನು ಎಂಬದಾಗಿ ತಿಳಿದುಕೋ ॥೫॥

೭ ವ॥ ತಾ॥ ಈ ಪ್ರಕಾರವಾಗಿ ಜಾಗ್ರತ್, ಸ್ವಪ್ನ, ಸುಷುಪ್ತಿಗಳೆಂಬ ಮೂರವಸ್ಥೆಗಳೊಳಗೂ ತಪ್ಪದೆ ಕೂಡಿರುವ ಅರಿವೆಂಬಪದಾರ್ಥದ ಪದ್ಧತಿಯಂ ಸವಿಸ್ತಾರವಾಗಿ ತಿಳಿಯ ಪಡಿಸಿ ಮತ್ತೊಂದು ಬಗೆಯಿಂದ ಪೇಳುತಲಿದ್ದಾನೆ, ಅಂದೆತೆಂದರೆ.

೮ ಇಂತು ಜ್ಞಾನಸ್ವರೂಪ ಮಾರ್ಗವು ಮುಗಿದುದು.

---

ಆಯರಿವೆನಾನೆನುತ್ತವಧರಿಸೆನಿನಗಂತ, ರಾಯುವಿನ್ನಿರಿದುವೈರಾಜ್ಯಪತಿನೀನೆ ॥೬॥

೭ ವ॥ ಮೂ॥ ಇಂತೆಂದ ವಸ್ಥಾತ್ರಯಾವ ಚಿದ್ಘನ್ನನಿಜಜ್ಞಾನ ಪದ್ಧತಿಯಂ ಶ್ರವಿಪಂತೆಮಾಡಿ ಇನ್ನೊಂದು ಪ್ರಕಾರದಿಂ ಪೇಳುತಿರ್ದಪನದೆಂತೆನೆ.

೮ ಇಂತು ಜ್ಞಾನಸ್ವರೂಪ ವಿಚಾರ ಪದ್ಧತಿಯು ಮುಗಿದುದು.

## ೯ ಸದ್ಗ್ರಹವಿಚಾರ ಪದ್ಧತಿಪ್ರಾರಂಭವು.

೧ ಅಟತಾಳ॥ ತಾ॥ ಲೋಕದೊಳು ಮಾಘಫಾಲ್ಗುಣ ಮಾಸಗಳೆಲ್ಲಿ ಮೇಘಮಾಲೆಯೆಂಬುವದು ಒಂದಾದರೂ ಇರುವದೇ ಇಲ್ಲ. ತರುವಾಯು ಅಂದರೆ ಈ ಮಾಘಫಾಲ್ಗುಣ ಮಾಸಗಳು ಕಳೆದು ಹೋದಬಳಿಕ ಚೈತ್ರವೈಶಾಖ ಮಾಸಗಳಲ್ಲಿ, ಅಪರಿಮಿತವಾದ ಸುವಾಸನೆಯಿಂದೊಡಗೂಡಿದ ಉದಕವೆ ಮುಖವಾಗಿವುಳ್ಳ ಮೇಘಮಂಡಲದ ಸರಣಿಯು ಆವಿರ್ಭವಿಸುತ ಬರುತಲಿಹುದು ॥೧॥ ಬಳಿಕ ಅಂದರೆ ಜ್ಯೇಷ್ಠ ಆಷಾಢ ಮಾಸಗಳಾದಗ್ರೀಷ್ಮರ್ತು ಕಾಲದಲ್ಲಿಯು, ಶ್ರಾವಣಭಾದ್ರಪದಗಳಾದ ವರ್ಷರ್ತು ಕಾಲದಲ್ಲಿಯು, ಅಪಾರವಾದ ಸಾಮರ್ಥ್ಯವನ್ನು ಹೊಂದಿದಂಥವುಗಳಾಗಿ, ಮತ್ತು ಅಂಧಕಾರಕ್ಕೆ ವಿಶೇಷವಾದ ಬಂಧುಗಳಾಗಿಯೂ ಇದ್ದುಕೊಂಡು ಈಮೇಘಗಳು ಅಧಿಕವಾಗಿವ್ಯಾಪಿಸುತಲಿರುವವು ॥೨॥ ತರುವಾಯು ಶರದೃತು ಕಾಲವಾದ ಆಶ್ವೀಜ ಕಾರ್ತಿಕ ಮಾಸಗಳಲ್ಲಿ ಈ ಮೇಘಗಳು ಪೂರ್ವದಲ್ಲಿಯೆ ನಿಶ್ಶೇಷವಾಗಿ ವರ್ಷಿಸಿರುತವೆಯಾದ ಕಾರಣ ಕ್ರಮಕ್ರಮವಾಗಿ ಶಿಥಿಲತೆಯನ್ನು ಹೊಂದುತ ಬರುವವು. ಹಾಗೆಹಿಮಂತರ್ತುವಾದ ಮಾರ್ಗಶಿರ ಪುಷ್ಯ ಮಾಸಗಳಲ್ಲಿ ಹಿಮದ ಪ್ರಾಬಲ್ಯದಿಂದ ತೋರದೆ ಇದ್ದಾಗ್ಯೂ ಅಂದರೆ ಮೇಘಾಕಾರದಿಂದ ಕಾಣಬರದೆ ಇದ್ದಾಗ್ಯೂ ॥೩॥ ಈ ಮೋಡಗಳ ವಿಕಾರಗಳು ಬಗೆಬಗೆಯಾಗಿ ಆಕಾಶದೊಳಗೆ ಉಂಟಾಗುತಲಿರಲ್ಕಾ

---

## ೯ ಸದ್ಗ್ರಹ ವಿಚಾರ ಪದ್ಧತಿ ಪ್ರಾರಂಭವು.

೧ ಮೂ॥ ಅಟತಾಳ.ಮಾಘಫಾಲ್ಗುಣಗಳಲಿ ಮೇಘದ ಮಾಲೆಯು
ಲ್ಲಾ ಮೇಲೆಯಾಮೇಘಸುರಭಿಯೊಳುಂಟಹುದು ರಸಮುಖ
ವೆನಿಸುತ॥೧॥
ಬಳಿಕಘರ್ಮ ಪ್ರಾವೃಡಾದಿಮಾಸರಗಳಾಕಾಲದಿ, ಬಲವನೊಳ
ಗೊಂಡಿಹುದು ಕತ್ತಲೆಬಳಗವಾಗಿ ॥೨॥
ಶಾರದಲಿ ಶಿಥಿಲತ್ವಮಂತವೆ ಸಾರುವುದು ಹೈಮಸದಲಿ, ತೋರ
ಲಾಗದು, ತೋರಿರಲು ತಾಂತೋರದಿರಲು ॥೩॥

ಗಿ, ಆಕಾಶವನ್ನು ಮೇಘವಿಕಾರ ಧರ್ಮಗಳು ವಿಕಾರಪಡಿಸಲಾರವು. ಅದೆಂತೆಂದರೆ. ಮೋಡಗಳು ಆಕಾಶದೊಳು ಕವಿಯುತಿರಲಾಗಿ ಆಸಂದರ್ಭದೊಳು ಮೇಘಗಳಲ್ಲಿರುವ ಕಪ್ಪು ಆಕಾಶವನ್ನು ಕಪ್ಪಗೆ ಮಾಡಲಾರದು. ಹೀಗೆಯೆ ಮೋಡಗಳೊಳು ಮಿಂಚೊಉಂಟಾಗಲು, ಆ ಮಿಂಚಿನಲ್ಲಿರುವ ಹೊಂಬಣ್ಣದಿಂದ ಆಕಾಶವು ಪೊಂಬಣ್ಣಮನೈದದು ಇದರಂತೆಯೇ ಮೋಡಗಳು ಮಳೆಗರೆಯಲು ಆಮಳೆಯಿಂದ ಆಕಾಶವು ನೆನೆಯದು. ಅಂದರೆ ಮೇಘವಿಕಾರ ಧರ್ಮಗಳಾದ ಕಪ್ಪು, ಮಿಂಚಿನ ಹೊಳೆವು, ಮಳೆಯಿಂದೆ ನೆನೆಯುವಿಕೆ ಎಂಬುವಗಳಿಂದ ಆಕಾಶ ಹ್ಯಾಗೆ ವಿಕಾರವಂ ಪಡೆಯುವದಿಲ್ಲವೊ ಅದರಂತೆಯೆ ಸಚ್ಚಿದಾನಂದ ಘನಸ್ವರೂಪವಾಗಿರುವ ಅರಿವೆಂಬಪದಾರ್ಥವು ಸ್ಥೂಲ, ಸೂಕ್ಷ್ಮ ಕಾರಣಗಳೆಂಬ ಶರೀರತ್ರಯದಲ್ಲಿಯೂ ಅಧಿಷ್ಠಾನ ರೂಪದಿಂದಿರುತಿದ್ದರೂ ಈ ದೇಹತ್ರಯದೊಳಿರುವ ಮಾಲಿನ್ಯಾದಿ ದೋಷಗಳ ಲೇಶವನ್ನೂ ಹೊಂದುವದಿಲ್ಲವು. ‖೪‖ ಮತ್ತು ಕಾರಣ ಭೂತವಾಗಿರುವ ಪ್ರಕೃತಿಯಾಗಲಿ, ಇಲ್ಲವೆ ಕಾರ್ಯ ಭೂತವಾಗಿರುವ ಮಾಯಾವಿದ್ಯಾದಿಗಳಾಗಲಿ ಈ ಹಿಂದೆಹೇಳಿದ ನಿರ್ಮಲಾತ್ಮನಲ್ಲಿ ಕಲಿಯುವದಕ್ಕೆ ಆಗಲಿ, ಇಲ್ಲವೆ ಆ ಆತ್ಮಸ್ವರೂಪವನ್ನು ಆಚ್ಛಾದನೆ ಮಾಡುವದಕ್ಕೆ ಆಗಲಿ, ಅಥವಾ, ಈ ಆತ್ಮನನ್ನು ವಿಕಾರಪಡಿಸುವದಕ್ಕೆ ಆಗಲಿ ಇದಕ್ಕೆಸರ್ವಥಾಸಾಮರ್ಥ್ಯವುಂಟಾಗಲಾರದು ಯಾತಕ್ಕೆಂದರೆ ಈ ಕಾರ್ಯರೂಪದಿಂದ ಭಿನ್ನವಾಗಿರುವ ಮಾಯಾವಿದ್ಯೆಗಳಿಗಾಗಲಿ, ಇಲ್ಲವೆ ಮೂಲಕಾರಣವಾಗಿರುವ ಮೂಲಪ್ರಕೃತಿಗೆ ಆಗಲಿಸ್ವತಃ ಸತ್ವವೆಂಬುವದೆ ಇಲ್ಲದಿರುವ ಕಾರಣ ಇದು ಶಕ್ತವಾಗ ಲರಿಯದೆಂದರಿಯತಕ್ಕದ್ದು ‖೫‖

---

ಇದುನಭದೊಳಿದರಿಂದ ಗಗನಕೆಪುದಿದುದೆನು ವೈಕೃತ, ಮಿದೆರಪಾಂಗಿಂದಾತ್ಮನಪ್ಪನು ಸದವಬೋಧಂ ‖೪‖

ಮಾಯೆಯಾತನ ಬೆರಸಲಾಗದು ಮರಸಲಾಗದಳಿಸಲು, ಕಾಯಬಲವಾನದು ವಿಕೃತಿಸುಸ್ಥಾಯಮಾಗಿ ‖೫‖

೧ ಗೀತ॥ ತಾ ॥ ಆಕೃತಿಯು ಮತ್ತು ಹೆಸರು ಈ ಎರಡು ಮಾಯಾಸಂಬಂಧವಾದ ವಸ್ತುಗಳೆನಿಸಿ ಕೊಂಡಿರುವವು. ಈ ನಾಮರೂಪಗಳಿಗೆ ಅಧಿಷ್ಠಾನವಾದ ಅಂದರೆ ಆಶ್ರಯವಾದ ವಸ್ತುವಿನ ಸದ್ರೂಪವು ಯಾವದುಂಟೊ ಅದೆ ಬ್ರಹ್ಮಪದಾರ್ಥದ ಸ್ವರೂಪವಾಗಿರುವದು ಈ ರೀತಿಯಾಗಿಯೆ ಸಕಲವಾದ ಬ್ರಹ್ಮಾನುಭವ ಪರಾಯಣರಾಗಿರುವ ಯೋಗಿಶಿರೋಮಣಿಗಳು ಹೇಳುತಲಿರುವರು. ಅಂತಪ್ಪಸಚ್ಚಿದಾನಂದ ಸ್ವರೂಪವಾಗಿರುವ ಬ್ರಹ್ಮವೆ ನಾನು ಎಂಬದಾಗಿ ನೀನು ತಿಳಿದರೆ ಆಗ ಪಡೆಯತಕ್ಕ ಪ್ರಯೋಜನವನ್ನು ಹೊಂದಿದವನಾಗುತ್ತೀಯೆ.

೨ ವ॥ ತಾ॥ ಈ ಹಿಂದೆ ಉದಹರಿಸಿದ ಸತ್ಸ್ವರೂಪವಾದ ವಸ್ತುವೆ ಮೂರು ಪ್ರಕಾರವಾಗಿರುವದು. ಅದೆಂತೆಂದರೆ ವ್ಯಾವಹಾರಿಕನಾಗಿ ವಿಶ್ವನೆಂಬ ಹೆಸರನ್ನು ಪಡೆದಿರುವ ಜೀವನ ಜಾಗ್ರದವಸ್ಥಾಕಾಲದೊಳು ಮಾತ್ರಯಥಾರ್ಥ ಸ್ವರೂಪವಾಗಿರುವದಾಗಿಯು, ಪ್ರಾತಿಭಾಸಿಕವಾಗಿ ತೈಜಸನೆಂಬ ಹೆಸರನ್ನು ಪಡೆದಿರುವ ಜೀವನ ಸ್ವಪ್ನಾವಸ್ಥಾಕಾಲದಲ್ಲಿ ವಿಷಯವಾಗಿ ಯಥಾರ್ಥ ಸ್ವರೂಪವಾಗಿರುವದಾಗಿಯು, ಪಾರಮಾರ್ಥಿಕನಾಗಿ ಪ್ರಾಜ್ಞನೆಂಬ ಹೆಸರನ್ನು ಪಡೆದಿರುವ ಜೀವನಿಗೆ ಸುಷುಪ್ತ್ಯವಸ್ಥಾಕಾಲದಲ್ಲಿ ಯಥಾರ್ಥ ವಾಗಿರುವದಾಗಿಯೂ ಮೂರು ಪ್ರಕಾರವೆಂದರಿಯತಕ್ಕದ್ದು.

---

೧　ಮೂಲ॥ ಗೀತ ॥ ರೂಪನಾಮಂಗಳೆರಡು ಮಾಯಾ ಪದಾರ್ಥವೆನಿಪ ವಾಹಾವಿನಲ್ಲಿ, ಸಂಜನಿಪ ಸತ್ವಮಾವುದದು ಬ್ರಹ್ಮತತ್ವವೆಂದೇ ವಿವೇಕಿಜನರಿಗಂಗೀಕೃತವದ ನಾನೆನೆನೀಂ ಕೃತಾರ್ಥನಂ ॥

೨　ಮೂ॥ ವ॥ ಆಸದ್ವಸ್ತುವೆ ತ್ರಿಪ್ರಕಾರವಾಗಿರ್ಪುದು, ವ್ಯಾವಹಾರಿಕ ಸತ್ತೆಯೆಂದು, ಪ್ರಾತಿಭಾಸಿಕ ಸತ್ತೆಯೆಂದು ಪಾರಮಾರ್ಥಿಕ ಸತ್ತೆಯಂದು॥

೪ ಜಂಪೆ॥ ತಾ॥ ಪೂರ್ವದಿವಸದಲ್ಲಿ ಯಾವಪದಾರ್ಥಗಳನ್ನು ಯಾವಬಗೆಯಾದ ಆಕೃತಿ ಮುಂತಾದ್ದರಿಂದ ಕೂಡಿರುವಂಥವುಗಳನ್ನಾಗಿ ಕಾಣುವೆವೊ ? ಆಯಾಯ ಪದಾರ್ಥಗಳು ಮಾರನೆಯ ದಿವಸದಲ್ಲಿ ನೋಡಿದಾಗ್ಯೂ ಬೇರೆವಿಕಾರಗಳನ್ನು ಹೊಂದದೆ ಇರುವಂಥವುಗಳಾಗಿಯೂ, ಅಥವಾಕದಾಚಿತ್ ಅತ್ಯಲ್ಪಭೇದವನ್ನು ಮಾತ್ರ ಹೊಂದಿದವುಗಳಾಗಿಯೂ ಪ್ರತ್ಯಕ್ಷವಾಗಿ ಕಾಣಬರುವವು. ಈ ರೀತಿಯಾಗಿರುವಿಕೆಯೆ ಮೊದಲು ಉದಹರಿಸಿದ ವ್ಯಾವಹಾರಿಕ ಜೀವನ ಸತ್ತಾಸ್ವರೂಪವೆಂಬದಾಗಿ ತಿಳಿಯುತಕ್ಕದ್ದು ॥೧॥ ಒಂದೇದಿವಸದ ರಾತ್ರಿಕಾಲದಲ್ಲಿ ಮಲಗಿನಿದ್ರೆಹೋಗುವಾಗ ಸ್ವಪ್ನವುಂಟಾಗಲು ಆಸ್ವಪ್ನಾವಸ್ಥೆಯೊಳಗೆ ಮೊದಲು ಯಾವದಾದರೊಂದು ಪದಾರ್ಥವನ್ನು ಕಾಣಲು ಪುನಃಸ್ವಲ್ಪ ಸಮಯ ಕಳೆಯಲು ಮೊದಲು ಕಾಣಲ್ಪಟ್ಟದ್ದಪದಾರ್ಥವೆ ಕಾಣದೆ ಹೋಗುವದು ಈರೀತಿಯೊಳಿರುವದು ಯಾವದುಂಟೊ ? ಅದೇ ಪ್ರಾತಿಭಾಸಿಕನಾದ ಜೀವನ ಸತ್ತಾಸ್ವರೂಪವೆಂಬದಾಗಿ ತಿಳಿಯುತಕ್ಕದ್ದು ॥೨॥ ಒಂದು ವೇಳೆಯಲ್ಲಿ ತೋರುತ್ತಲು ಮತ್ತೊಂದು ಸಮಯದಲ್ಲಿ ತೋರದೆ ಇರುವದಾಗಿಯೂ, ಈ ಪ್ರಕಾರ ವ್ಯತ್ಯಾಸವನ್ನು ಲೇಶವಾದರು ಹೊಂದದೆ ಸರ್ವತ್ರವ್ಯಾಪಿಸಿಸ್ವತಃ ಭಾಸಮಾನ ವಾಗಿರುತ ನಿತ್ಯಜ್ಞಾನಸ್ವರೂಪವಾಗಿರುವ ಅರಿವುಯಾವದುಂಟೊ ಅದೇ ಅನವರತ ಶಾಸ್ತ್ರಾಧ್ಯಯನ, ಅಖಂಡವಾದ ಅನುಭವ ಮುಂತಾವುಗಳಿಂದ ಸಾಧ್ಯವಾಗಿರುವ ಪಾರಮಾರ್ಥಿಕವಾದ ಜೀವನ ಮೂರನೆಯ ಸತ್ತಾಸ್ವರೂಪವೆಂಬದಾಗಿ, ತಿಳಿಯುತಕ್ಕದ್ದು.

---

೪ ಮೂ॥ ಜಂಪೆ॥ ಮೊದಲು ಕಾಣಿಸದಂತೆ ಮೋಸವಿಲ್ಲದೆ ತಿರುಗಿ
ಇದಿರಿಟ್ಟು ಕಾಣೆಕಾಂಬುದೆ ಪ್ರಥಮಿಕವು ॥೧॥
ತೋರಿಯುಂಡೇ ಕಾಲದೊಳಗೆ ಮತ್ತದಕಾಣೆ, ತೋರಪಡಮರೆ ಲೋಕದೊಳಗೆ ದ್ವಿತೀಯಂ ॥೨॥
ತೋರದಡಗದೆ ಸಕಲದೊಳು ತೋರ್ಪದೆಜ್ಞಾನ, ಚಾರುನೇತ್ರದಿ ಶಾಸ್ತ್ರಸಾಧ್ಯಾತೃತೀಯಂ ॥೩॥

ಈ ಅರ್ಥವೇ ವೇದಶಾಸ್ತ್ರಗಳಿಗೆ ಮುಖ್ಯವಾಗಿಯು ಅಬಾಧಿತವಾಗಿಯು ಇರುವ ತಾತ್ಪರ್ಯವಾಗಿರುವದು ॥೩॥

೫ ವ॥ ತಾ॥ ಅಬದ್ಧವಾದ ಪದಾರ್ಥಕ್ಕೆ ಎರಡನೆಯದಾದ ಪದಾರ್ಥವು ಯಾವದುಂಟೋ ಅದೇ ತ್ರಿಕಾಲಾಬಾಧಿತವಾದ ಸತ್ಪದಾರ್ಥವೆಂಬದಾಗಿ ಪೂರ್ವದಲ್ಲಿ ಹೇಳಲ್ಪಟ್ಟಿತು. ಅಂದರೆ ಅಧಿಷ್ಠೇಯ ವಸ್ತುವಿಗಿಂತಲೂ ಭಿನ್ನವಾಗಿರುವ ಅಧಿಷ್ಠಾನಭೂತವಾದ ಪದಾರ್ಥವೆ ಪಾರಮಾರ್ಥಿಕ ಸತ್ಪದಾರ್ಥವೆಂಬದಾಗಿ ಉದಹರಿಸಲ್ಪಟ್ಟಿತು. ಹಾಗಾಗುವ ಪಕ್ಷದಲ್ಲಿ ಪ್ರಥಮದೊಳು ದೃಶ್ಯವೆಂಬ ಪದಾರ್ಥವು ಗೋಚರಿಸಿ ತರುವಾಯ ಅದನ್ನು ನಿರಾಸಮಾಡುವದರ ಮೂಲಕ ಸತ್ಪದಾರ್ಥವು ತೋರಿತಾಗಿ ಬಾಧ್ಯವಾಗಿಯೂ ದೃಶ್ಯವಾಗಿಯು ಇರುವ ಪದಾರ್ಥಕ್ಕೆ ಬಾಧೆ ಸಂಭವಿಸಿದ ಕಾಲದಲ್ಲಿ ನೀವು ಹೇಳುವ ಸತ್ಪದಾರ್ಥವೆಂಬುವದು ಯಾವಸ್ಥಲದಲ್ಲಿರುವದು ? ಎಂಬದಾಗಿ ಪ್ರಶ್ನೆಬಂದಲ್ಲಿ ಈ ಮುಂದೆ ಉಪನ್ಯಸಿಸುವ ಮೇರಿಗೆ ತಿಳಿಯತಕ್ಕದ್ದು. ಅದೆಂತೆಂದರೆ, ಪಂಚ ಮಹಾಭೂತಗಳಲ್ಲಿ ಒಂದಾಗಿರುವ ಪೃಥಿವಿಯೆಂಬ ಮಹಾಭೂತದಲ್ಲಿರುವ ಕಾಠಿಣ್ಯವೆಂಬ ಧರ್ಮವು ಕಾಲಾಗ್ನಿಯಿಂದ ಕ್ಷಯವಂ ಪಡೆಯುತ್ತಿರಲಾಗಿ ತರುವಾಯ ಅಪ್ಪು ಎಂಬ ಮಹಾಭೂತವೊಂದು ಉಳಿಯುವದು. ಬಳಿಕ ಆ ಅಪ್ಪೆಂಬ ಮಹಾಭೂತದಲ್ಲಿ ದ್ರವತ್ವ ಅಂದರೆ ಸ್ರವಿಸುವಿಕೆಯೆಂಬ ಗುಣವು ಪೂರ್ವದಂತೆ ಕಾಣದೆ ಹೋಗಲು ಆಮೇಲೆ ತೇಜಸ್ಸೆಂಬ ಮಹಾಭೂತವು ತೋರುವದು. ಹೀಗೆಯೆ ಅ ತೇಜಸ್ಸೆಂಬ ಮಹಾಭೂತದಲ್ಲಿ ಪ್ರಕಾಶವೆಂಬ ಧರ್ಮವು ಮೊದಲಿನಂತೆ ನಾಶವಂ ಪಡೆಯಲು ವಾಯುವೆಂಬ ಮಹಾಭೂತ ಬಂದೇ ಕಾಣಬರುತಲಿರುವುದು. ವಾಯುವೆಂಬ ಮಹಾಭೂತದಲ್ಲಿ ಬೀಸು

---

೫ ಮೂ॥ ವ॥ ಅನ್ಯತಕಿತರವಸ್ತು ಸತ್ಪದಾರ್ಥವೆಂದು, ಸುದೇಯಾಗಿ ಯಾವದ್ರವ್ಯದಿಂ ತೋರಿತೊ ಬಳಿಕಾದ್ರವ್ಯದ ವಿಲಯಾವಸ್ಥೆಯಲ್ಲಿ, ಈ ಸತ್ಯಾರ್ಥವೆಲ್ಲಿದ್ದುದು ಹಾಗಾದಕೆಕೇಳು, ಪೃಥ್ವಿಯೊಂದರಲ್ಲಿ ಕಾಠಿಣ್ಯಂಪಿಂಗಲಾಗಿ ಜಲವೊಂದೇ

ವಿಕೆಯೆಂಬ ಧರ್ಮವು ಪೂರ್ವದಲ್ಲಿ ಹೇಳಿದಂತೆ ವಿನಾಶವಂ ಪೊಂದುತಿರ ಲಾಗಿ ಅಕಾಶವೆಂಬ ಮಹಾ ಭೂತವೊಂದು ತೋರಿ ಬರುತಲಿರುವದು. ಅನಂತರದಲ್ಲಿ ಈ ಆಕಾಶವೆಂಬ ಮಹಾಭೂತಕ್ಕೆ ವಿಶೇಷಗುಣವಾಗಿ ರುವ ಶಬ್ದವೆಂಬುವದು ಪೂರ್ವದೊಳುದಹರಿಸಿದಂತೆಯೇ ನಾಶವನ್ನು ಹೊಂದುತಿರಲು | ಆ ಸಮಯದಲ್ಲಿ ಸತ್ವ ರಜಸ್ತಮಗಳೆಂಬ ಗುಣತ್ರ ಯವು ನಿಲ್ಲುವುದು. ಈ ಗುಣತ್ರಯದ ವೈಷಮ್ಯಾವಸ್ಥೆಯು ಪ್ರ ಪಂಚದ ಸೃಷ್ಟಿಯನ್ನು ಕುರಿತು ಒಂದು ಕಾರಣವಾಗಿರುವದು. ಈ ಗುಣತ್ರಯಕ್ಕೇನೆ ಮತ್ತೊಂದು ಬಗೆಯಾದ ವಿಷಮಾವಸ್ಥೆಯು ಸ್ಥಿತಿಯನ್ನು ಕುರಿತು ಕಾರಣವಾಗಿರುವದು. ಹಾಗೆಯೆ ಇನ್ನೊಂದು ವಿಧವಾದ ವ್ಯತ್ಯಾಸಾವಸ್ಥೆಯು ನಾಶವನ್ನು ಕುರಿತು ನಿಮಿತ್ತವಾಗಿ ರುವುದು. ಆದ್ದರಿಂದ ಆ ಗುಣತ್ರಯದಲ್ಲಿರುವ ಉಂಟುಮಾಡುವರೂ ಪವು, ಪಾಲಿಪರೂಪವು, ನಾಶಮಾಡುವ ರೂಪವು ಎಂಬ ಈ ಮೂರು ಕಾರ್ಯಗಳು ವಿಲಯವಂ ಪಡೆಯಲಾಗಿ ಮಾಯಾಶಕ್ತಿಯೊಂದೇ ನಿಲ್ಲು ವುದು. ಬಳಿಕ ಸದಸದ್ವಿಲಕ್ಷಣವಾದ ಆ ಮೂಲ ಪ್ರಕೃತಿಯು ಆತ್ಮ ಪದಾರ್ಥದೊಳುಲೀನ ವಾಗುತ್ತಿರಲಾಗಿ ಆನಂದ ಘನಸ್ವರೂಪವಾದ ಸದ್ಬ್ರಹ್ಮಪದಾರ್ಥ ಒಂದೇ ಉಳಿಯುವುದು. ಆದರೆ ಮಾಯೆಯು ಸಶಕ್ತಿಕವಾಗಿ ಲೀನವಾಗಲು ಬ್ರಹ್ಮಪದಾರ್ಥಕ್ಕೆ ಪ್ರಕಾಶವೇ ಇಲ್ಲ ವೆಂಬದಾಗಿ ನಿನ್ನ ಬುದ್ಧಿಯಲ್ಲಿ ಸಂಶಯತೋರಿತು. ಈ ಸಂಶಯ ನಿ ವೃತ್ತಿಗೆ ಉಪಾಯವೇನೆಂದರೆ, ಪೃಥ್ವಿಯು ಇದೆ ಯೆಂಬ ಸಮಯದ ಲ್ಲಿ ಆ ಪೃಥಿವಿಯೊಳಿರುವ ಕಾಠಿಣ್ಯವೆಂಬ ಗುಣವು ಹೋಗುತ್ತಿರಲಾ

---

ತೋರ್ಪುದು. ಜಲವೊಂದರಲ್ಲಿ ದ್ರವತ್ವಂಕೆಡೆ ಕಿಡಿಯಲಾಗಿ ಅಗ್ನಿಯೊಂದೇ ತೋರ್ಪುದು ಗಗನವೊಂದರಲ್ಲಿ ಶಬ್ದಂವಿಲ ಯಂ ಪೊಂದಲಾಗಿ ಗುಣತ್ರಯಂಗಳೆನಿಲುವವು. ಗುಣತ್ರ ಯಂಗಳಲ್ಲಿಯುತ್ಪತ್ತಿಸ್ಥಿತಿ ಸಂಹಾರ ಕೃತ್ಯಂಗಳಿಲ್ಲದಲ್ಲಿ ಮಾ ಯೆಯೊಂದೇ ನಿಮಲ್ಲುದು. ಅನಿಗೂಢವಾದ ಕಾರ್ಯಗಮ್ಯವಾ ದ ಮಾಯಾ ಶಕ್ತಿಯಡಗಲಾಗಿ ಸದ್ರೂಪಕ್ಕಭಿವ್ಯಕ್ತಿಯಿರ

ಗಿ ಆಸಂದರ್ಭದೊಳು ಸದ್ರೂಪವಾದ ತಾನು ಕಠಿನತ್ವವೆಂಬ ತನ್ನ ಗುಣದ ಸಂಗಡ ತಾನು ಹೋಗದೆ ಇರುವದು. ಈ ಭೂಮಿನಾಶಕಾಲದಲ್ಲಿ ಉಳಿದಿರುವ ಉದಕದೊಳು ಇರುತಲಿರುವದು ಈ ಪ್ರಕಾರವಾಗಿಯೆ ಉದಕವು ಇಧೆಯುಂಬುವ ಸಮಯದಲ್ಲಿರುವ ಸ್ರವಿಸುವಿಕೆಯೆಂಬ ಗುಣವು ನಾಶವಾಗುತ್ತಿರಲಾಗಿ ಸದ್ರೂಪವಾಗಿರುವ ಉದಕದಲ್ಲಿ ಜಲವು ತನ್ನ ಗುಣವಾದ ದ್ರವತ್ವಗುಣದ ಸಂಗಡ ವಿನಾಶವಂ ಪಡೆಯದೆ ಆ ಉದಕಾಂತ್ಯದಲ್ಲಿ ಇರುವತೇಜಸ್ತತ್ವದಲ್ಲಿ ಇರುತಲಿರುವುದು. ಈ ಬಗೆಯನ್ನು ಪೃಥಿವಿಜಲಂಗಳ ವ್ಯತಿರೇಕ ಕ್ರಮದಿಂದ ಹ್ಯಾಗೇ ಅರಿತೆವ್ರೊ ಅದೇರೀತಿಯಿಂದಲೆ ತೇಜಸ್ತತ್ವ, ವಾಯುತತ್ವ, ಗಗನತತ್ವ, ಗುಣತತ್ವ, ಮಾಯಾಶಕ್ತಿ, ಇವುಗಳನ್ನು ವ್ಯತಿರೇಕ ಕ್ರಮದಿಂದಲೆ ವಿಚಾರಮಾಡಿತಿಳಿಯಲಾಗಿ ಇವುಗಳ ಸಂಗಡ ತಾನು ಹೋಗದೆ ತೇಜೋವಾಯುಗಗನ ಗುಣಮಾಯಾಶಕ್ತಿಗಳೆಂಬ ಇವುಗಳಿಗೆ ಅಧಿಷ್ಠಾನವಾಗಿ ವಳಗೆ ಬಲವಾಗಿ ಇರುವದರಿಂದ ಭೂಮಿಯದೆ ಎಂಬಕಾಲದಲ್ಲಿ ಉದಕದಲ್ಲಿಯು ಇರ್ದುದಾಗಿ ಭೂಮಿಗು ಉದಕಕ್ಕು ಗುಣಗಳ ಭೇದವಿದ್ದಾಗ್ಯೂ ಅದರೊಳಗಿರುವ ಸದ್ರೂಪವಾದ ತನಗೆ ಎರಡೆಂಬುದಿಲ್ಲವಾಗಿ ಭೂಮಿಮತ್ತು, ಉದಕ ಎಂಬ ಎರಡುಪದಾರ್ಥಗಳನ್ನು ಹೊಂದಿದ ಸದ್ರೂಪವಾದ ತನ್ನ ಭೂನಿಮಿತ್ತಕವಾದ ಎರಡರಲ್ಲಿಯು ಕೂಡಭೇದವೆಂಬುದಿಲ್ಲವಾಗಿಯು, ನೂಲ ಎಳೆಗಳ ಆಕಾರ

---

ದೆಂಬುದು ನಿನ್ನ ಮತಿಯೊಳ್ಪೊಳೆದುದು. ಇದಕ್ಕೆ ನಿವೃತ್ತಿಯಾವುದೆನೆ? ಭೂಮಿಯಡೆ ಯಂಬಾಗ ಭೂನಿಷ್ಠಕಾಠಿಣ್ಯಂ ಪೋಗಲಾಗಿ ತಾನದರೊಡನೆ ಪೋಗದೆ ಜಲಾಂತಶಿಷ್ಟಸತ್ವದಲ್ಲಿರ್ದುದು. ಇದೆ ಪ್ರಕಾರದಿಂದಗ್ನಿ, ವಾಯು, ಗಗನ, ಗುಣ, ಮಾಯಾಶಕ್ತಿಗಳಂ ನೋಡಲಾಗಿ ತಾನವರೊಳ್ಪೋಗದೆ ತದಂತ ಸತ್ವವಾಗಿರ್ಪುದರಿಂ ಭೂಮ್ಯಂತಸ್ಥತ್ವಕಾಲದಲ್ಲಿ ಜಲದಲ್ಲಿಯು ಯಿರ್ದುದಾಗಿ, ಭೂಮಿಜಲಂಗಳಿಗೆ ಗುಣಭೇದಂಗಳಿರ್ದ್ದರು ತಾನವರೊಳಿರ್ಪುದಕ್ಕೆ ಭೇದವಿಲ್ಲವಾಗಿ ಭೂಮಿಜಲೋಭ

ವಾಗಿರುವ ಬಟ್ಟೆಗೆ ಒಳಹೊಕ್ಕು ಎಳೆಗಳನ್ನು ಮಾತ್ರ ನೋಡುವ ಕಾಲದಲ್ಲಿ ತಂತು ಪಟಗಳು ಬೇರೆಬೇರೆಯೆಂಬದಾಗಿ ಉಪಕ್ರಮಿಸುವ ದೋಷವು ಈ ಬ್ರಹ್ಮಪದಾರ್ಥದಲ್ಲಿ ಯಾವ ಬಗೆಯಿಂದಲೂ ವರ್ತಿಸಲಾರದು. ಯಾತಕ್ಕೆಂದರೆ ಪೃಥ್ವಿಯ ಅಂಶಗಳಾದ ಧೂಳಿಗಳಲ್ಲಿಯೂ ಹಾಗೆಯೆ ಉದಕಾಂಶಗಳಾದ ತುಂತುರುಗಳಲ್ಲಿಯೂ. ಸತ್ವಸ್ವರೂಪಕ್ಕೆ ಭೇದವು ಕೂಡುವದಿಲ್ಲವಾಗಿ, ಕ್ಷೀರವೆ ಹುಳಿಹಣ್ಣು ಮುಂತಾದ ಹುಳಿಯೊಡನೆ ಕೂಡಿಸಿದ್ದರಿಂದ ಮೊಸರಾದುದು ಆತೆಂಬ ಕಾಲಕೃತವಾದ ಪರಿಪಾಕದೋಷವು ಈ ಸತ್ಸ್ವರೂಪವಾಗಿರುವ ಬ್ರಹ್ಮಪದಾರ್ಥದಲ್ಲಿ ಸಂಭವಿಸುವದಿಲ್ಲವು. ಅದು ಯಾತಕ್ಕೆಂದರೆ ? ಭೂರೂಪವಾಗಿರುವ ಅನ್ನಕ್ಕೆ ಶರೀರದಲ್ಲಿ ಧಾತುರೂಪತ್ವ ಸಿಕ್ಕಿದಾಗಲು, ಜಲಕ್ಕೆ ಹಣ್ಣಿನಲ್ಲಿ ಹುಳಿಯು ಸೀಯು ಎಂಬುದೇ ಮೊದಲಾದ ರಸಭಾವವನ್ನು ಹೊಂದಿದ ಕಾಲದಲ್ಲಿಯು ಚರ್ಮವಿದೆ ಮಾಂಸವಿದೆಯೆಂದುನ್ನು, ಕಬ್ಬಿನ ಹಾಲು ಇಧೆ. ಮಾವಿನ ಹಣ್ಣಿನ ರಸವಿಧೆ ಎಂದುನ್ನು ಎಲೈ ! ಸೌಮ್ಯನೆ! ಈ ನಾನಾ ಬಗೆಯಿಂದೀಗ ನಾಮರೂಪಾತ್ಮಕವಾಗಿ ಕಾಣಬರುವ ಪ್ರಪಂಚ ಸೃಷ್ಟಿಗಿಂತಲೂ ಮೊದಲು ಅಬಾಧಿತವಾದ ಸದ್ಬ್ರಹ್ಮಸ್ವರೂಪವಾಗಿಯೆ ಇತ್ತು,, ಎಂಬರ್ಥವುಳ್ಳ ಛಾಂದೋಗ್ಯೋಪನಿಷದ್ವಾಕ್ಯದಂತೆ ಇರುವ ಅನಾದಿಯಾಗಿ ಸದ್ರೂಪವಾದ ಬ್ರ

---

ಯು ದ್ರವ್ಯಂಗಳಾಶ್ರಯಿಸಿದ ತನ್ನ ನೈಮಿತ್ತಿಕಾದ್ವಿತ್ವದೋಳ್ ಭೇದವಿಲ್ಲವಾಗಿ, ತಂತುವೆ ಸ್ವರೂಪವಾದ ತಂತು ಮಾತ್ರನಿರೀಕ್ಷಣ ಪೃಥಕ್ತ್ವಮಂ ಪೇಳುವಾರಂಭದೋಷವಿಲ್ಲಿ ವರ್ತಿಸದು. ಏಕೆನೆ ? ಭೂಮ್ಯಂಶಮಾದ ರೇಣುಗಳಲ್ಲಿಯು, ಜಲಾಂಶಮಾದ ತುಷಾರಗಳಲ್ಲಿಯು, ಸತ್ತೆಗೆ ಪೃಥಕ್ತ್ವಂ ಘಟಿಸದಾಗಿ, ಹಾಲೆ, ಹುಣಸೆ, ಹಣ್ಣು ಮೊದಲಾದ ಹುಳಿಯ ಬೆರಕೆಯಿಂ ಮೊಸರಾದುದೆಂಬ ದೋಷವಿಲ್ಲಿ ವರ್ತಿಸದು. ಏಕೆನೆ ? ಭೂಮಿಗೆ ಧಾತುತ್ವ ಮಳವಟ್ಟಾಗಲು, ಜಲಕ್ಕೆ ಫಲರಸತ್ವಮೈದಿದಾಗಲು, ಮಾಂಸವದೆ, ಯಿಂದು, ಕಬ್ಬಿನಹಾಲದೆ, ಮಾವಿ

ಹ್ಮಕ್ಕೆ ವಿಕಾರವೆಂಬುವದು ಕೂಡುವದೇ ಇಲ್ಲವು. ನೆಸುಗತ್ತಲೆಯ ಸಂಬಂಧದಿಂದ ಹಗ್ಗದಲ್ಲಿ ಹಾವನ್ನು ಹುಟ್ಟಿಸುವ ಕಾಚಕಾಮಲಾದಿ ದೋಷವೂ, ಈ ಸದ್ರೂಪವಾಗಿರುವ ಬ್ರಹ್ಮಪದಾರ್ಥಕ್ಕೆ ಸಂಬಂಧಿಸುವದಿಲ್ಲವು.

ಅದೆಂತೆಂದರೆ, ಅಜ್ಞಾನಸಂಬಂಧದಿಂದ ಸಂಭವಿಸುವದೆಂದು ಹೇಳಿದರೆ ಆಗ ಪೃಥಿವಿ ಮತ್ತು ಜಲ ಇವುಗಳಲ್ಲಿ ವ್ಯಾಪಕವಾಗಿ ಸದ್ರೂಪವಾಗಿರುವ ಬ್ರಹ್ಮಪದಾರ್ಥಕ್ಕೆ ಬೇರೊಂದು ಅಸದ್ರೂಪತ್ವವು ಪ್ರಾಪ್ತವಾಗಿರುವದರಿಂದ ಕಲ್ಪಿತವಾಗಿ ತೋರುವ ಹಾವಿನಿಂದ ಭೀತಿ ಮುಂತಾದದ್ದು ಪ್ರಾಪ್ತವಾಗುವಂತೆ ಭೂಮಿಯಲ್ಲಿ ಕಂಪನವು ಉದಕದಲ್ಲಿ ಘಟ್ಟಿಯಾಗಿರೋಣವು, ಈ ಮುಂತಾದ್ದನ್ನು ಉಂಟುಮಾಡಲಿಲ್ಲವು. ಆದಕಾರಣದಿಂದಲೇ ಸದ್ರೂಪವೇ ಭೂತಭವಿಷ್ಯದ್ವರ್ತಮಾನಗಳೆಂಬ ಕಾಲತ್ರಯದಲ್ಲಿಯೂ ಪ್ರಕಾಶಿಸುತ ಮಾಯಾವಿಕಾರ ರಹಿತವಾಗಿ ಅಖಂಡಸ್ವರೂಪವಾಗಿಯೂ ಇರುವದು. ಅದೇ ಪರಬ್ರಹ್ಮವೆಂದರಿಯುವದು. (ಮತ್ತು ಲೋಕದಲ್ಲಿ ಯಾವದಾದರೊಂದು ಬಟ್ಟೆಯೊಳಗೆ ಕಪ್ಪು ಕೆಂಪು ಮುಂತಾದ ರೂಪಗಳು ನಿಮಿತ್ತಭೇದದಿಂದ ನಾಶವಾಗಲು ಆ ರೂಪಕ್ಕೆ ಆಶ್ರಯವಾದ ವಸ್ತ್ರವು ನಾಶವಾಗುವದಿಲ್ಲವು. ಇನ್ನು ಒಂದು ಬಲಿತ ಮಾವಿನಕಾಯನ್ನು ತಂದು ಹುಲ್ಲಿನಲ್ಲಿ ಮಾಗಹಾಕುವ ಸಮಯದೊಳಗೆ ಕಪ್ಪಾದ ರೂಪವು, ಹುಳಿಯಾದ ರಸವು, ಮಗರು ಇಲ್ಲವೆ ನಸರು ಇಂಥವಾಸನೆಯು, ಮುಟ್ಟಿದರೆ ಗಟ್ಟಿಯಾಗಿರುವುದು. ಈ ಗುಣಗಳಿರುವವು. ಆ ಕಾಯಿಮಾಗಿ ಹಣ್ಣಾದತರುವಾಯ ಮೊದಲಿದ್ದ ಕಪ್ಪುರೂಪವು ಹೋಗಿ ಅರಸಿನ ಬಣ್ಣವು, ಸೀಯಾದ

---

ನ ಹಣ್ಣಿನರ ಸವಿದೆ, ಎಂದು ಸತ್ತಿಗೆ ವಿಕಾರಂ ಘಟಿಸದಾಗಿ, ಶಿಥಿಲಾಂಧಕಾರ ಸಹಾಯದಿಂ ರಜ್ಜುವಿನಲ್ಲಿ ಸರ್ಪಮಂ ಘಟ್ಟಿಸಿದ ವಿವರ್ತದೋಷಮಿಲ್ಲಿ ವರ್ತಿಸದು. ಏಕೆನೆ? ಅಜ್ಞಾನಯೋಗದಿಂದಲಾದರು, ಭೂಮಿಜಲಂಗಳಲ್ಲಿರುವಸತ್ತಿಗೆ ಸದ್ಭಿನ್ನತ್ವಒಂದು ಇಲ್ಲದೆ ತೋರಿದ ಸರ್ಪನಿಂ ಭಯಂ ಬಂದಂತೆ ಭೂಮಿ

ರಸವು, ಸುವಾಸನೆಯು, ಮುಟ್ಟಿದರೆ ಮೆತ್ತಗಿರುವಿಕೆಯು, ಎಂಬ ಬೇರೆ ಗುಣಗಳು ಉಂಟಾಗುವವು. ಆದರೆ ಹೊಸದಾಗಿ ಗುಣಗಳುಂಟಾಗುವ ಸಂದರ್ಭದಲ್ಲಿ ಪೂರ್ವಗುಣಗಳು ನಾಶವಾಗಿ ಹೋಗುವವು. ಆ ಪೂರ್ವಗುಣಗಳಾದ ರೂಪಾದಿಗಳು ವಿಲಯವಂ ಪಡೆಯುವಾಗ ಅವುಗಳಿಗೆ ಅಧಿಷ್ಠಾನ ಅಂದರೆ, ಆಶ್ರಯವಾಗಿದ್ದ ಕಾಯಿಯು ನಾಶವಾಗಿ ಹೋಗುವದಿಲ್ಲವು. ಅಥವಾ ಒಂದು ಗಡಿಗೆಯಲ್ಲಿರುವ ಗುಂಡಾಗಿರುವಿಕೆ ಮುಂತಾದ ಧರ್ಮವು ನಷ್ಟವಾದ ಮಾತ್ರದಿಂದಲೆ ಅವರ್ತುಲತ್ವಾದಿಗಳಿಗೆ ಆಶ್ರಯವಾದ ಮಣ್ಣು ನಾಶವನ್ನು ಪಡೆಯುವದಿಲ್ಲ. ಹೀಗೆಯೇ ಪ್ರಪಂಚದ ನಾಮರೂಪಕ್ರಿಯೆ ಮುಂತಾದವುಗಳು ವಿಲಯಂ ಪಡೆಯುವ ಸಂದರ್ಭದಲ್ಲಿ ಇವುಗಳಿಗೆಲ್ಲಾ ಅಧಿಷ್ಠಾನವಾಗಿರುವ ಬ್ರಹ್ಮಪದಾರ್ಥವು ನಾಶವಾಗುವದಿಲ್ಲ. ಈ ರೀತಿಯಾಗಿ ಮಾಡುವ ಪ್ರಶ್ನೆಯು ಯುಕ್ತಿ ಸಹವಾಗಿಲ್ಲವು. ಯಾವಸ್ಥಳದಲ್ಲಿಯಾವ ಪದಾರ್ಥವು ಪರಮಾರ್ಥವಾಗಿ ಸುತರಾಂ ಆ ಪದಾರ್ಥಕ್ಕಿಂತಲೂ ಭಿನ್ನವಾಗದೆ ಇರುವ ಸ್ವರೂಪಭೂತವಾದ ರೂಪವುಂಟೋ ? ಅಂಥ ರೂಪವು ನಾಶವಾಗುವ ಕಾಲದಲ್ಲಿ ಆ ಪದಾರ್ಥವೂ ನಷ್ಟವಾಗ ಬಹುದು ಅಂದರೆ ಆವೆಡೆಯೊಳು ಆಶ್ರಯಾಶ್ರಯಿ ಭಾವವುಂಟೋ ಅಲ್ಲಿ ಆಶ್ರಯಿಯ ನಾಶಸಮಯದಲ್ಲಿ ಆಶ್ರಯವು ನಷ್ಟವಾಗುವದಿಲ್ಲ. ಸ್ವರೂಪಭೂತವಾಗಿ ಎಲ್ಲಿ ಇರುವುದೋ ಅಲ್ಲಿ ಸ್ವರೂಪಭೂತವಾದ ಗುಣವು ನಾಶವಾಗುವಲ್ಲಿ ಆವಸ್ತುವೂ ನಾಶವಾಗ ಬೇಕಾಗುವದು.) ಪ್ರಕೃತದಲ್ಲಿ ಆ ಬ್ರಹ್ಮಪದಾರ್ಥಕ್ಕೆ ಗುರಿತು ಏನಂದರೆ ? ವಿಚಾರದಿಂದ ಪ್ರತಿವೊಂದು ಪದಾರ್ಥವನ್ನು ಇದು ನಿತ್ಯವಲ್ಲವೆಂದು ಕ್ರಮವಾಗಿ ತಿರಸ್ಕರಿಸುತ ಬರಲು ಕಡೆಗೆ ಇಲ್ಲವೆಂಬತಿರಸ್ಕಾರಕ್ಕೆ ಗೋಚರವಾಗದೆ ಅಬಾಧಿತವಾ

---

ಯಲ್ಲಿ ಚಲನಮಂ ಜಲದಲ್ಲಿ ಕಾಠಿಣ್ಯಮಂ ಪುಟ್ಟಿಸದಾಗಿ ಸದ್ರೂಪವೆಸತ ತೋದಿತ ನಿರ್ವಿಕಾರ, ನಿರ್ಭೇದ, ನಿರಂಶವಾದ, ಪರಬ್ರಹ್ಮ ವೆಂದರಿವುದು, ಇದಕ್ಕೆ ಗುರಿತೇನು ? ಹೀಗೆ ವಿನಾಶವಂ ಕುರಿತು ಕಳೆಯಲ್ ಪಡುವ ಪ್ರಪಂಚಜಾಲದಲ್ಲಿ ಕಳೆಯಲ್

ಗಿ ನಿಲ್ಲುವ, ಸತ್ವ, ಚಿತ್ವ, ಆನಂದಗಳೆ ಈ ಸದ್ರೂಪ ಪದಾರ್ಥವಾಗಿರುವದು, ಆದರೆ ಈ ಧರ್ಮಗಳು ನಾಶವಾಗುವಾಗ ಅವುಗಳಿಗೆ ಆಶ್ರಯವಾದ ಸದ್ರೂಪಬ್ರಹ್ಮವು ನಷ್ಟವಾಗಲೆಂದು ಕೇಳಲಿಕ್ಕೆ ಆಗುವದಿಲ್ಲ. ಯಾತಕಂದರೆ? ಸಚ್ಚಿದಾನಂದಗಳು ಬ್ರಹ್ಮಪದಾರ್ಥಕ್ಕಿಂತಲು ಭಿನ್ನವಾದ ವುಗಳಲ್ಲ. ಅದು ಹ್ಯಾಂಗಂದರೆ ? ಪ್ರಕಾಶಮಾನವಾದ ದೀಪದಲ್ಲಿ ಥಾಳಥಳ್ಯವು, ಬಿಸಿಯು, ಹ್ಯಾಗೆ ದೀಪವನ್ನು ಬಿಟ್ಟು ಬೇರೆಯಾಗಿಲ್ಲವೊ ಅದರಂತೆಯೆಂಬದಾಗಿ ಅರಿಯಬೇಕು. ಆ ದೀಪದ ಗುಣಗಳಾದ ಉಷ್ಣತ್ವಮುಂತಾದವುಗಳು ನಾಶವಾಗಬೇಕಾದರೆ ದೀಪವೇ ನಾಶವಾಗಬೇಕು. ಹಾಗೆ ಪ್ರಕೃತದಲ್ಲಿಯೂ ದೀಪಸ್ಥಾನೀಯವಾದ ಬ್ರಹ್ಮವು ನಾಶವಾದರೆ ಸತ್ಯಜ್ಞಾನಾನಂದಗಳು ನಾಶವಾಗುವವಲ್ಲದೆ ಇಲ್ಲದಿದ್ದರೆ ನಾಶವಾಗುವದಿಲ್ಲ. ಬ್ರಹ್ಮಪದಾರ್ಥವು ನಾಶವಾಗತಕ್ಕದ್ದಲ್ಲವೆಂದು ವೇದ, ಶಾಸ್ತ್ರ, ಅನುಮಾನ, ಮುಂತಾದ ಅನೇಕ ಪ್ರಮಾಣಗಳಿಂದ ಸಿದ್ಧವಾಗಿರುವದು. ಆದುದರಿಂದಲೆ ಇಂತಪ್ಪ ಸದ್ಬ್ರಹ್ಮ ಪ್ರಕಾಶಕತ್ವವು ಶಾಸ್ತ್ರಕ್ಕೆ ಅಸಾಧಾರಣವಾದ ಲಕ್ಷಣವೆಂಬದಾಗಿ ಏರ್ಪಟ್ಟಿರುವುದು. ಈ ಅರ್ಥವು ವೇದಶಾಸ್ತ್ರ ಪ್ರಾಮಾಣ್ಯಾವಲಂಬಿಗಳಾಗಿಯು, ಆಸ್ತಿಕ ಶಿರೋಮಣಿಗಳಾಗಿಯು, ಅನುಭವ ವಿಶಾರದರಾಗಿಯೂ ಇರುವ ಸಕಲರಿಗೂ ಸಮ್ಮತವಾಗಿರುವದು.

೬ ಕಂದ॥ ತಾ॥ ಎಲೈ ಮನಸ್ಸೆಂಬ ಪ್ರಭುವೆ ? ನೀನು ಚನ್ನಾಗಿ ವಿಚಾರ ಮಾಡುವದರ ಮೂಲಕ ಸದ್ರೂಪ ಪದಾರ್ಥಾನುಭವವನ್ನು ಮಾಡಿ ಆ ಅಬಾಧಿತವಾದ ಸತ್ಪತಾರ್ಥವೇ ಈ ಕಾಣಬರುವ ಸಮಸ್ತ ಪ್ರಪಂಚಕ್ಕು ಅಧಿಷ್ಠಾನ ಭೂತವಾಗಿರುವದು. ಅಂದರೆ ಆಧಾರವಾಗಿರುವದು. ಎಂಬದಾಗಿ ಸಂದೇಹವಿಲ್ಲದೆ ತಿಳಿದುಕೊ, ಅಂತಪ್ಪ ಸ

---

ಪಡದೆ ನಿಂತಚಿದಾನಂದಗಳೆ ಈ ಸದ್ರೂಪಾಭಿವ್ಯಕ್ತಿಯೆಂಬುದೇ ಶಾಸ್ತ್ರಾಚಾರ್ಯ ಸಮ್ಮತವಾಗಿರ್ಪುದು.

೬ ಮೂ॥ ಕಂದ॥ ನೀನೆಲೆಮಾನಸ ನೃಪನೆನಿ।
ಧಾನಿಸಿವಿಶ್ವಕದೆಯಧಿಷ್ಠಾನಪದಂ॥

ತ್ಪದಾರ್ಥವು ಯಾತಕ್ಕೆ ಪ್ರತ್ಯಕ್ಷವಾಗಿ ಸ್ಥೂಲಾಕಾರವಾಗಿ ತೋರಿ ಬರುವದಿಲ್ಲವೆಂಬದಾಗಿ ಸಂಶವು ವುಂಟಾದರೆ ಆಗ ಈ ಪ್ರತ್ಯಕ್ಷವಾಗಿ ರುವ ನೀನು ಎಂಬ ಪದಾರ್ಥವು ಏನು ? ಚನ್ನಾಗಿ ವಿಚಾರಿಸು ಎಂಬ ನುಡಿಯು ಆ ಸಂಶಯವೆಂಬ ಮಹಾ ಪರ್ವತಕ್ಕೆ ವಜ್ರಾಯುಧವೆಂಬ ದಾಗಿ ಅರಿತುಕೋ, ಅಂದರೆ ನೀನು ಎಂಬ ಪದಾರ್ಥವನ್ನು ಚನ್ನಾಗಿ ಒಳಹೊಕ್ಕು ವಿಚಾರಮಾಡುತ ಬರಲು ಅನಿತ್ಯವಾಗಿಯು, ಜಡವಾ ಗಿಯು ಇರುವ ವಸ್ತುಗಳೆಲ್ಲಾ ಕ್ರಮವಾಗಿ ನಿಷಿದ್ಧಗಳಾಗಿ ಕಡೆಗೆ ಸತ್ಪದಾರ್ಥವೇ ಅಭಿವ್ಯಕ್ತವಾಗುವದೆಂಬಾಶಯವು.

೭ ವಚನ ॥ ತಾ ॥ ಈ ಪ್ರಕಾರವಾಗಿ ಸತ್ಸ್ವರೂಪ ಮಾರ್ಗವ ನ್ನು ನಿಸ್ಸಂಶಯವಾಗಿ ವಿಶದಪಡಿಸಿ ಮತ್ತೊಂದು ಬಗೆಯಿಂದ ವಿವರಿ ಸುತಲಿದ್ದಾನೆ, ಅದೆಂತೆಂದಡೆ ?

೯ ಇಂತು ಸದ್ರೂಪ ವಿಚಾರಪದ್ಧತಿಯು ಮುಗಿದುದು.

## ೧೦ ಚಿದ್ರೂಪ ವಿಚಾರಪದ್ಧತಿ ಪ್ರಾರಂಭವು.

೧ ಜಂಪೆ॥ ತಾ॥ ಸ್ವತಃ ಪ್ರಕಾಶಮಾನವಾದ ಅಂದರೆ ಪರಪ್ರಕಾ ಶ್ಯವಲ್ಲದ ಯಾವ ಚಿತ್ಸ್ವರೂಪಕ್ಕೆ ಗುಣತ್ರಯಾಶ್ರಯವಾದ ಮಾ ಯೆಯು ಆವೃತಿಯೆಂಬುವದಿಲ್ಲವೊ ? ಮತ್ತು ನಾನಾಪ್ರಕಾರವಾಗಿ ಕಾಣಬರುವ ಈ ಚರಾಚರಾತ್ಮಕವಾದ ಪ್ರಪಂಚವು ಯಾವಚಿತ್ಸ್ವ

---

ಯೇಸಿದತೋರಿಸೆನಲ್ಕೆ।
ನೀನಾರೆಂಬುಕ್ತಿಯದಕ್ಕೆ ವಜ್ರಪ್ರಾಯಂ॥

೭ ಮೂ॥ ವಚನ॥ ಇಂತೆಂದು ಸದಾತ್ಮವಪದ್ಧತಿಯಂ ಶ್ರವಣಗೈ
ಸಿ ಇನ್ನೊಂದುಪ್ರಕಾರಮಂ ಪೇಳುತಿರ್ದಪನದೆಂತೆನೆ.
೯ ಇಂತು ಸದ್ರೂಪ ವಿಚಾರಪದ್ಧತಿಯು ಮುಗಿದುದು.

೧೦ ಚಿದ್ರೂಪ ವಿಚಾರಪದ್ಧತಿ ಪ್ರಾರಂಭವು.

೧ ಮೂ॥ ಜಂಪೆ॥ ಯಾವವಸ್ತುವಿಗೆಮಾಯಾವರಣವಿಲ್ಲಜಗ। ಮಾ
ವಸ್ತುವಿನಿಂದಭಾವಿತವೆನಿಸಿತು ॥೧॥

ರೂಪದಿಂದಲೇ ತಿಳಿಯಲ್ಪಡುವಂಥಾದ್ದಾಯಿತೋ? ಅಂದರೆ ಸರ್ವವ್ಯವಹಾರ ವಿಷಯವಾಯಿತೋ ||೧|| ಈ ಅಮೋಘವಾದ ಚಿಚ್ಚೈತನ್ಯದ ಬಲದಿಂದ ಅಲ್ಲದೆ ಘಟಪಟಾದಿ ಸಕಲಪ್ರಪಂಚವು ಅನೇಕವಿಧದಿಂದ ವ್ಯವಹಾರಕ್ಕೆ ವಿಷಯವಾಗಲರಿಯದು. ||೨|| ಈ ಪ್ರಪಂಚಕ್ಕೆ ಸ್ವತಃ ಸತ್ವವೆಂಬುವದು ಇಲ್ಲವು. ಮತ್ತೇನೆಂದರೆ, ಚಿತ್ಸ್ವರೂಪದೊಳಿರುವ ಸತ್ವವೇ ಈ ಪ್ರಪಂಚದಲ್ಲಿ ತೋರುವದು. ಆದುದರಿಂದಲೇ ಇದು ವ್ಯವಹಾರ ವಿಷಯವಾಗುವುದು. ಇನ್ನು ಅವಿದ್ಯಾದ್ಯುಪಾಧಿಯಿಂದಾವೃತವಾದ ಆತ್ಮಸ್ವರೂಪದ ಕಾಮನಕ್ಕೇ ಸಕಲವೂ ಪ್ರಿಯವಾಗಿರುವುದು ಎಂಬರ್ಥವುಳ್ಳ ಶ್ರುತಿಯ ಪ್ರಾಮಾಣ್ಯಾನುಗುಣವಾಗಿ ಇದವಿಮಿಗರ್ಥವಾಗಿರುವ ಈ ದೃಶ್ಯಜಾತವೂ ಪ್ರತ್ಯಕ್ಷ ವಿಷಯವಾಗತಕ್ಕದ್ದಾಗಿಯು, ಆತ್ಮಾನುಭವೈಕಾರ್ಹವಾಗಿಯು ಇರುವದು. ||೩|| ಎಲೈ ಮನೋನೃಪನೆ ರಜೋಗುಣದಿಂದೊಡಗೂಡಿರುವ ನೀನೇ ಕಬ್ಬಿಣದ ಮುದ್ದೆಯು, ನಿನ್ನೊಳಗೆ ವ್ಯಾಪಕವಾಗಿರುವ ಜ್ಞಾನವೇ ಅಗ್ನಿಯೆನ್ನಲ್ಪಡುವದು. ಅಂತಪ್ಪ ಜ್ಞಾನವೆಂಬ ಅಗ್ನಿಯುಮಹತ್ತರವಾದ ಪ್ರಕಾಶವನ್ನಾಶ್ರಯಿಸಿಕೊಂಡು.||೪|| ಚಕ್ಷುರಾದಿ ಜ್ಞಾನೇಂದ್ರಿಯಗಳು ಪಾಣಿಪಾದಾದಿ ಕರ್ಮೇಂದ್ರಿಯಗಳು, ಸ್ಥೂಲಸೂಕ್ಷ್ಮ ಶರೀರಗಳು, ಸುಳಿದಾಡುತಲಿರುವವು, ಆದುದರಿಂದಲೇ ಆ ವಿಜ್ಞಾನವೆಂಬ ಪದಾರ್ಥವೆ ಸರ್ವಾಧಿಪತ್ಯವನ್ನಳವಟ್ಟಿರುವದು. ಅದೆ ಸತ್ಪದಾರ್ಥವೆನ್ನಲ್ಪಡುವದು.

---

ಅದರಚೈತನ್ಯದಿಂದಲ್ಲದೆ ವ್ಯವಹಾರ । ಪದವೈದದಖಿಲಪ್ರಪಂ
ಚವೆಂಶಾಂತಂ ||೨||

ಅದರಬಲವದರಭೋಗದ ಬೀಡದರಮೊಗಂ । ಯಿದಮಿಗರ್ಥವ
ತಾಳದೀನಿಖಿಲದೃಶ್ಯಂ ||೩||

ನೀನಯಃಪಿಂಡಾವಿಜ್ಞಾನವಲ್ಲಿರುವವೈ । ಶ್ವಾನರನದರಮಹಾಭಾ
ನಮಂಪಿಡಿದು ||೪||

ಇಂದ್ರಿಯಶರೀರಂಗಳೆಡೆಯಾಡುತಿಹವದೆ । ಇಂಪ್ರಸದಾತ್ಮಕ
ಮಹೀನತಾದ್ರಸ್ಥಂ ||೫||

ಅದೇ ವ್ಯಾವಹಾರಿಕವಾದ ಶರೀರವುಳ್ಳಂಥಾದ್ದು. ಅದೇ ಯಾವಾಗಲು ಯಾವ ವಿಧದಿಂದಲಾದರೂ ವಿಕಾರವನ್ನು ಪಡೆಯದೆ ನಿತ್ಯವಾಗಿರತಕ್ಕದ್ದು. ॥೫॥

೨ ಕಂದ॥ ತಾ॥ ಎಲೈ ಮನೋನೃಪನೆ ಲಾಲಿಸು, ನಾನುಕ್ಷೀರಸಾಧನವಾಗಿರುವೆನು, ಅಂದರೆ ಹಾಲಿನ ದೃಷ್ಟಾಂತ ಸ್ಥಾನವಾಗಿರುವೆನು, ಆಕ್ಷೀರದೊಳು ಸರ್ವತ್ರವ್ಯಾಪಕವಾಗಿ ಸವಿಯಾದ ತುಪ್ಪದೋಪಾದಿಯಲ್ಲಿ ಜ್ಞಾನವೆಂಬ ಪದಾರ್ಥವು ನನ್ನಲ್ಲಿ ಚೆನ್ನಾಗಿ ವ್ಯಾಪಿಸಿಕೊಂಡಿರುವದು, ಆದುದರಿಂದ ಆಜ್ಞಾನವು ಘೃತಸಾಧನವಾಗಿರುವುದು, ಅವ್ಯಾಪಕವಾದ ಜ್ಞಾನವೆನಾನೆಂಬದಾಗಿ ಭಾವನೆಯು ದೃಢವಾಗಲು ಆಗಲೆ ಈ ಜನನ ಮರಣ ಪ್ರವಾಹರೂಪವಾದ ಸಂಸಾರವೆಂಬ ಸಮುದ್ರವು ಒಂದುಹಸುವಿನ ಹೆಜ್ಜೆಯಲ್ಲಿ ನಿಂತಿರುವ ನೀರಿನಂತೆ ನಿನಗೆ ದಾಟಲಿಕ್ಕೆ ಅತಿಸುಲಭವಾಗುವುದು. ಅಂದರೆ ಯಾವಾಗಲಾದರೆ ಇಂಥ ಭಾವನೆಯು ನಿಲೆಗೊಳ್ಳುವದೊ ಆಗಲೇ ನೀನು ಕೃತಕೃತ್ಯನಾದೆಯೆಂದರಿಯತ್ತಕ್ಕದ್ದು.

೩ ವಚನ॥ ತಾ॥ ಸುಲಭವಾಗಿಯು, ವಿಸ್ತಾರವಾಗಿಯು ಹೇಳದೆ ಸಂಕೇತ ಪೂರ್ವಕವಾಗಿ ಈ ಮೇರೆ ಹೇಳಿದರೆ ಅವಗಾಹನಕ್ಕೆ ಬರುದಿಲ್ಲವೆಂದು ಕೇಳಿಕೊಳ್ಳಲು, ಪುನಃ ದೃಷ್ಟಾಂತ ಪೂರ್ವಕವಾಗಿ ವಿವರಿಸುತ್ತಿದ್ದಾನೆ.

೪ ತ್ರಿಪುಡೆ॥ ತಾ ॥ ಸ್ವತಸಿದ್ಧವಾಗಿ ಬೆಳ್ಳಗಿರುವ ಒಗೆದ ಬಟ್ಟೆಯು, ಧೌತವೆನಿಸಿಕೊಳ್ಳುವದು. ಅದೆ ಬಟ್ಟೆಯೆ ಗಂಜಿಯಿಂದ ಎ

---

೨ ಮೂ॥ ಕಂದ॥ ಕ್ಷೀರಸ್ಥಾನವೆನಾನಹೆ !
ನೀರಸವೇಘೃತಪ್ರದೇಶವೆಂದದನರಿಪದನೆ ॥
ನಾರಲ್ನಾನೆಂದೀಸಂ ।
ಸಾರಾಂಬುಧಿನಿನಗೆಗೋಷ್ಪದಾಂಭೋಮಾತ್ರಂ॥

೩ ಮೂಲ॥ ವ॥ ಇಂತೆಂದು ಸಂಕ್ಷೇಪದಿಂದಿಪ್ಪರಿಂದಲೆ ವಿಬೋಧಂಬಾರದೆನಲು॥

೪ ಮೂ॥ ತ್ರಿ॥ ಶ್ವೇತವಾಗಿಹಶುದ್ಧಪಟವೆ। ಧೌತವೆನಿಪುದುಥೌ

ಡೆಯಿಲ್ಲದೆ ಕೂಡಿಕೊಂಡಿರುವ ಸಮಯದಲ್ಲಿ ಘಟಿತವೆಂಬದಾಗಿ ಪ್ರಖ್ಯಾತಿಯಂ ಪೊಂದಿರುವದು ||೧|| ಲೋಕದಲ್ಲಿ ಎಲ್ಲಿಯಾದರು ಒಂದಾನೊಂದು ಚಿತ್ರವನ್ನು ಬರೆಯುವ ಸಮಯದಲ್ಲಿ ಬಣ್ಣಗಳು ಪೂರ್ವದಲ್ಲಿಯೆ ಇರುವಂಥವುಗಳಾದಾಗ್ಯೂ ಅಥವಾ ಚಿತ್ರಕ್ಕೆ ಮೊದಲು ಕೇವಲ ನೀಲಿಯೊಂದನ್ನು ಹಾಕಿರುವಾಗ ರಂಜಿತವೆನಿಸಿಕೊಳ್ಳುವದು. ತರುವಾಯ ಬಣ್ಣವನ್ನೆಲ್ಲಾ ಪೂರ್ತಿಯಾಗಿ ಹಾಕಿದಮೇಲೆ ಅದೇಪಟವೆ ಲಾಂಛನ ವಿಶೇಷಗಳಿಂದ ಹೊಸದೆನ್ನಿಸಿಕೊಳ್ಳುವದು. ||೨|| ರಚನಾವಿನ್ಯಾಸಗಳಿಂದ ಪೂರ್ತಿಯಾದ ಚಿತ್ರಪಟವು ಹ್ಯಾಂಗೆ ಚತುರಶ್ರದಿಂದ ಅಂದವಾಗಿರುವುದೊ! ಆಚಿತ್ರಪಟದಂತೆಯೆ ಸ್ವತಸ್ಸಿದ್ಧವಾದ ಚಿತ್ಸ್ವರೂಪವೂ ಕೂಡ ಭೂಮ್ಯಾಕಾಶಾದಿ ಸೃಷ್ಟಿರಚನಾವಿನ್ಯಾಸಗಳಿಂದ ಚತುರಶ್ರಭಾವವನ್ನೈದಿ ಅಂದವಾಗಿರುವುದು ||೩|| ಸತ್ವಾದಿ ಗುಣತ್ರಯಾತ್ಮಕವಾಗಿ ಸ್ವಚ್ಛವಾಗಿ ರುವದರಿಂದಲೆ ಮಾಯೆಯು ಕನ್ನಡಿಯಂತೆ ಬಿಂಬಗ್ರಹಣ ಸಾಮರ್ಥ್ಯವನ್ನು ಹೊಂದಿರುವುದು ಆದಕಾರಣ ಪ್ರತಿಬಿಂಬಕ್ಕೆ ಹೇತುಭೂತವಾಗಿರುವ ಮಾಯೆಯಲ್ಲಿ ಪ್ರತಿಬಿಂಬಸಿರುವ ಅವ್ಯಾಕೃತಾತ್ಮನು ಯಾರೊ ಆತನೇ ಕಾರಣಶರೀರಗಳ ಸಮಷ್ಟಿಯಲ್ಲಿಯು ಮನೋಹರವಾಗಿ ಪ್ರಕಾಸಿಸಿರುತ್ತಿರುವನು. ||೪|| ಸ್ಥೂಲಶರೀರಗಳಸಮಷ್ಟಿಯಲ್ಲಿಯು ಪ್ರಕಾಸಿಸುತ್ತಾ ವಿರಲಾಗಿ ತೋರುತ್ತಿರುವ ಈಶ್ವರ ತ್ರಯವು ಅನುಕೂಲಿಸಿಬುದ್ಧ

---

ತವೆ ಗಂಜಿಯಿಂತಾ | ನೂತುಕೂಡಿದರೆ ಘಟಿತವೆನಲ್ವಿಖ್ಯಾತ
ವಹುದು ||೧||
ಅದ್ದಿಕೆಯನಾಂತಾಂಗರಂಜಿತಮುಪ್ಪದಾಯಾಚಿತ್ರಪೂರ್ತಿಯ
ಪೊದ್ದಿದಾಗದು ಲಾಂಛಿತತ್ವದಿಪೊಸತೆನಿಪುದು ||೨||
ಹಾಗೆ ಚಿತ್ರಪಟಸ್ಥಿತಿಯು ಚನ್ನಾಗಿರುವುದೊ ನಾಲ್ಕುತೆರದಿಂ
ಹಾಗೆಶುದ್ಧಮೆನಿಸುವ ಚಿತ್ತುಂಭೂಗಗನಕೆ ||೩||
ಬೀಜವಾಗಿಹ ಮಾಯೆಯೊಳು ಪ್ರತಿಬಿಂಬಿಸಿರ್ದಪಾಕೃತಮೆ
ತಾಂ | ರಾಜಿಪುದಾಕಾರಣದಿ ಲಿಂಗದಿರವ್ಯಾಮಾದ ||೪||

ಯೆಂಬ ಅಂತಃಕರಣದಲ್ಲಿ ಪ್ರತಿಬಿಂಬಿಸಿ ಹೊಂದಿಕೊಂಡು ಕಾಣುತ||೫||ಲಿರುವ ಜೀವತ್ರಯವೆಂಬದಾಗಿ ಆರೋಪಿಸಲ್ಪಟ್ಟ ಚಿಚ್ಚೈತನ್ಯವು, ಜೀವತ್ರಯವು ಅನುಭವದಿಂದ ಉಪಮಾನವಾದ ಚಿತ್ರಪಟದರೀತಿಗೆ ಉಪಮೇಯವಾಗುತಲಿಧೆ ||೬|| ಚೈತನ್ಯವನ್ನಾಶ್ರಯಿಸಿರುವ ಸಮಸ್ತ ಪ್ರಾಣಿವರ್ಗಕ್ಕು ಅಚೇತನಗಳಾಗಿರುವ ವೃಕ್ಷಗಳು, ಲತೆಗಳು, ಪಾಷಾಣಗಳು, ಮುಂತಾದವುಗಳು, ಚಿತ್ರಸಮುದಾಯಕ್ಕೆ ಭಿನ್ನವಾಗಿ ತೋರದೆ, ಆಧಾರಭೂತವಾದ ಒಗೆದಬಟ್ಟೆಯೊಡನೆ ಹ್ಯಾಗೆ ಭೇದವನ್ನು ಹೊಂದದೆ ತೋರುತಲಿಧೆಯೊ||೭|| ಜೀವರುಗಳ ಕಾರ್ಯವಿಕಾರಗಳು ಎಲ್ಲ ಹೋದಾಗ್ಯೂ ಪ್ರಕಾಶಾಧಿಕ್ಯದಿಂದ ಅಜೀವರುಗಳೊಳಗೆ ಅಧಿಷ್ಠಾನಸ್ವರೂಪವಾದ ಪರಿಪೂರ್ಣನಿರ್ಮಲ ಜ್ಞಾನರೂಪವಾದಚಿತ್ತಿನಲ್ಲಿ ಚೇತನ ರೂಪವಾದ ಜಗತ್ಸರ್ವವು ಚಿದ್ರೂಪವೆ ಹೊರತಾಗಿ ಬೇರೆ ಪದಾರ್ಥವೆಂಬುವದು ಕೂಡುವದೇ ಇಲ್ಲ ||೮|| ಈ ಪ್ರಕಾರವಾಗಿ ಹೇಳಿದ್ದರಿಂದ ಈ ಪರಿದೃಶ್ಯಮಾನವಾದ ಸಮಸ್ತ ಪ್ರಪಂಚವೂ ಬ್ರಹ್ಮವೆ, ಎಂಬ ಅರ್ಥವುಳ್ಳ ಉಪನಿಷದರ್ಥಾನುಸಾರವಾಗಿ ಚರಾಚರವಾಗಿರುವ ಸಮಸ್ತವು ನಿಷ್ಕಲವಾಗಿರುವ ಬ್ರಹ್ಮಸ್ವರೂಪವೆ ಎಂಬ ಅನುಭವವು ಎಲ್ಲಾ ಕಾಲದಲ್ಲಿಯು ಚಲನವಿಲ್ಲದೆ ಇದ್ದರೆ ಆಗಲೀ

---

ಸ್ಥೂಲದಲ್ಲಿ ಸಮಷ್ಟಿಯೆಸೆಯುಲು, ತೋರುವೀಶಾನ ತ್ರಯ
ಮುಮನುಕೂಲವಿಾಬುದ್ಧಿಯೊಳ್ಪ್ರತಿಬಿಂಬಿಸಿಕೂಡಿತೋರ್ಪ ||೫||
ಜೀವರತ್ರಯಮಾವರಿಸಿದ ಚೇತನ ಜೀವತ್ರಯವುಮನುಭಾ
ವದಿಂದುಪಮೇಯಮಪ್ಪವು, ಪಟಬಗೆಗೆ ||೬||
ಚೇತನಾಚೇತನದಚಿತ್ರವ್ರಾತಗಳಿಗೆ ಭೇದವಿಲ್ಲದೆ। ಧೌತಪಟ
ದೊಡನೆಂತು ಭೇದಂತಗಲದಿಹುದೊ ||೭||
ಜೀವಕೃತ್ಯವಿಕಾರವಿರಲಿಕಲಾವಿಶೇಷದಿತವ್ರೊಳಗೆ। ನೆತಿತಾಮ
ಲಚಿತ್ತಿನೊಳಿವಕ್ಕೆ ಭೇದಂಘಟಿಪುದೆ ||೮||
ಎನುತಜೀವನೆ ಪರಮನೆಂತೆಂಬನುಭವಸ್ಥಿರವಾಗೆದುರುಪಾಧಿ
ನಿರಸದಿಂ ನೀನೆಚಿನ್ಮಯದಿವ್ಯರೂಪು ||೯||

ದುಷ್ಟವಾದ ಅಧ್ಯಾಸೋಪಾಧಿಯು ನಿನಗೆಇಲ್ಲದೇ ಇರುವದು. ಎಲೈ ಮನೋರಾಜನೆ ? ಆಗಲಿ ನೀನು ಮನೋಹರವಾಗಿ ಪ್ರಾಚುರ್ಯದಿಂ ದಿರುವಚಿತ್ಸ್ವರೂಪವು ॥೯॥

೫ ವಚನ॥ ತಾ॥ ಕಾಲಪರಿಚ್ಛೇದ, ದೇಶಪರಿಚ್ಛೇದ, ವಸ್ತು ಪರಿಚ್ಛೇದ ರಹಿತವಾದ ಅಂದರೆ ಭೂತಕಾಲದಲ್ಲಿ ಉಂಟು, ಭವಿಷ್ಯತ್ಕಾಲದಲ್ಲಿ ಇಲ್ಲ, ಎಂದೀಪ್ರಕಾರವಾಗಿ ಬ್ರಹ್ಮೇತರ ಪದಾರ್ಥಗಳಿಗೆ ನಿಯಮವುಂಟು. ಅದು ಹ್ಯಾಗಂದರೆ ? ಮಲ್ಲಿಗೆಯಹೂವ್ವು, ಇಲ್ಲವೆ ಮಾವಿನಹಣ್ಣು ಇವುಮುಂತಾದವುಗಳು ಯಾವದಾದರೊಂದು ರುತುವಿನಲ್ಲಿ ಉಂಟು. ಇತರ ರುತುಗಳಲ್ಲಿಇರುವದಿಲ್ಲ. ಬ್ರಹ್ಮಪದಾರ್ಥವಾದರೊ ಭೂತಭವಿಷ್ಯದ್ವರ್ತಮಾನಗಳೆಂಬ ಎಲ್ಲಾಕಾಲಗಳಲ್ಲಿಯು ಅಬಾಧಿತವಾಗಿರುವದು, ದೇಶಪರಿಚ್ಛೇದವಂದರೆ ಈ ದೇಶದಲ್ಲಿ ಉಂಟು. ಈ ದೇಶದಲ್ಲಿ ಇಲ್ಲ,ಎಂದೀಮೇರಿಗೆ ಕೆಲವಸ್ತುಗಳಿಗೆ ನಿಯಮವುಂಟು, ಅದುಹ್ಯಾಗಂದರೆ ರಾಗಿ, ಅವರೆ ಇವುಮುಂತಾದವುಗಳು ಒಂದು ದೇಶದಲ್ಲಿರುವವು ಮತ್ತೊಂದು ದೇಶದಲ್ಲಿ ಇಲ್ಲವು, ಬ್ರಹ್ಮವಸ್ತುವಾದರೆ ಎಲ್ಲಾ ದೇಶಗಳಲ್ಲಿಯೂ ಇರುವದು. ವಸ್ತುಪರಿಚ್ಛೇದವಂದರೆ, ಕೆಲವು ವಸ್ತುಗಳು ಮತ್ತೆಕೆಲವು ವಸ್ತುಗಳಲ್ಲಿ ಉಂಟು ಮತ್ತೆ ಕೆಲವು ವಸ್ತುಗಳಲ್ಲಿರುವದಿಲ್ಲವು ಎಂಬನಿಯಮ ವಿರುವದು. ಅದೆಂತೆಂದರೇ, ಗಂಧಾದಿಗಳು ಪೃಥಿವ್ಯಾದಿಗಳಲ್ಲಿ ಇರುವವು. ಇತರ ವಸ್ತುಗಳಲ್ಲಿ ಇಲ್ಲವು. ಬ್ರಹ್ಮವಾದರೊ ? ಎಲ್ಲಾ ವಸ್ತುಗಳಲ್ಲಿಯೂ ಇರುವದು. ಅಂದರೆ,—ಬ್ರಹ್ಮಪದಾರ್ಥವು ಭೂತಭವಿಷ್ಯದ್ವರ್ತಮಾನಗಳೆಂಬ ಕಾಲತ್ರಯದಲ್ಲಿಯು, ಎಲ್ಲಾವಸ್ತುಗಳಲ್ಲಿಯು, ಎಲ್ಲಾ, ದೇಶಗಳಲ್ಲಿಯೂ ವ್ಯಾಪಕವಾಗಿರುವುದು. ಆದುದರಿಂದಲೆ ಇದುಕಾಲಪರಿಚ್ಛೇದ, ದೇಶಪರಿಚ್ಛೇದ, ವಸ್ತು ಪರಿಚ್ಛೇದಗಳೆಂಬ ಪರಿಚ್ಛೇದತ್ರ

---

೫ ಮೂಲ॥ ವಚನ॥ ಸದಖಂಡವಸ್ತುವಿಂತೇಕಾಯಿತು, ಉಪಾಧಿಯಿಂದಾಯಿತು, ಉಪಾಧಿಯಂದರೇನು? ತನ್ನ ಸಮೀಪಸ್ಥವಾದವಸ್ತುವಂ, ತಾಂಗ್ರಹಿಸಿತನ್ನ ಗುಣಮುದ ರೋಳೆ ಪ್ರ

ಯದಿಂದ ರಹಿತವಾಗಿರುವದು. ಈ ರೀತಿಯಾಗಿ, ಸದ್ರೂಪವಾದ ಪದಾರ್ಥವು ತನ್ನಲ್ಲಿ ಯಾವ ವಿಧದಿಂದಲು ಅಂತರವಿಲ್ಲದೆ ಇದ್ದಾಗ್ಯೂ, ಹೀಗೆ ನಾನಾ ಬಗೆಯಾಗಿ ಆಗಲು ನಿಮಿತ್ತವೇನೆಂಬದಾಗಿ, ಅವಗಾಹ ನಾಪೇಕ್ಷೆಯಿಂದ ಕೇಳಿಕೊಳ್ಳಲು, ದಯಾಳುವಾದ ಶ್ರೀಗುರುವು ಈ ಮುಂದೆ ಉದಹರಿಸುವ ರೀತಿಯಿಂದ ಸಮಾಧಾನವಂ ಹೇಳುತಲಿಧಾನೆ, ಪರಿಚ್ಛೇದ ಶೂನ್ಯವಾದ ಆತ್ಮವಸ್ತುವು ಉಪಾಧಿಯಬಲದಿಂದ ನಾನಾಬಗೆಯಾಗಿ ಆಯಿತೆಂದು ಪೇಳಲು, ನಿರುಪಾಧಿಕವಾದ ವಸ್ತುವಿಗೆ ಉಪಾಧಿಯೆಂಬುವದು ಹ್ಯಾಂಗೆಬಂದುದದು ? ಮತ್ತು ಆಉಪಾಧಿಯೆಂಬುದೇನು ? ಎಂಬದಾಗಿ ಕೇಳ್ವೆಯುಂಟಾಗವದೆಂದು ಕೇಳಲು ಯಾವದಾದರೆ ತನ್ನ ಸಮೀಪದಲ್ಲಿರುವವಸ್ತು ಸ್ವರೂಪವನ್ನು ತಾನು ಗ್ರಹಿಸಿ, ತನ್ನ ಸ್ವರೂಪವನ್ನು ಅದರಲ್ಲಿ ಸಂಕಲನವಾಗುವಂತೆ ಮಾಡಿ ಪ್ರೇಕ್ಷಕನಾದ ವಸ್ತುವನ್ನು ನೋಡುವವರಿಗೆ ಬೇರೊಂದು ವಸ್ತುವಿನಂತೆ ವ್ಯವಹಾರವಿಷಯವನ್ನಾಗಿ ಮಾಡತಕ್ಕದ್ದೋ? ಅದೆ ಉಪಾಧಿಯೆನ್ನಲ್ಪಡುವದು, ಅದೆಂತೆಂದರೆ ? ಜಪಾಪುಷ್ಪ ಅಂದರೆ ದಾಸಿವಾಳವೆಂಬ ಒಂದುಕೆಂಪಾದ ಹುವ್ವು ತನ್ನ ಬಳಿಯಲ್ಲಿ ಸ್ಫಟಿಕದಮಣಿಯು ಇರುತ್ತಿರಲಾಗಿ ಆ ಸಂದರ್ಭದಲ್ಲಿ ತನ್ನಲ್ಲಿರುವ ಲೌಹಿತ್ಯವಂದರೆ ಕೆಂಪುಬಣ್ಣವನ್ನು ಸಮೀಪದೊಳಿರುವ ಆ ಸ್ಫಟಿಕಮಣಿಯಲ್ಲಿ ವ್ಯಾಪಿಸುವಂತೆಮಾಡಿ ಬಳಿಕ ನೋಡುವವರಿಗೆ ಆ ಶುದ್ಧಸ್ಫಟಿಕ ಮಣಿಯನ್ನು ರಕ್ತಮಣಿ ಎಂಬದಾಗಿ ವ್ಯವಹಾರ ವಿಷಯವನ್ನಾಗಿ ಮಾಡುವದು ಆದ್ದರಿಂದಲೆ ಈ ಲೋಹಿತ ಕುಸುಮ ಇಲ್ಲವೆ ಇದರಸಾನ್ನಿಧ್ಯವೆಂಬುವದು ಈ ಸ್ಥಲದಲ್ಲಿ ಉಪಾಧಿಯು ಆ ಉಪಾಧಿ ಎಂಬುವದು ಎಷ್ಟುಬಗೆಯಾಗಿರುವದೆಂದರೆ? ಅವಚ್ಛೇದೋಪಾಧಿ ಎಂಬದಾಗಿ ಅಂದರೆ, ಅಗಲದಿರುವ ಉಪಾಧಿ ಎಂಬದಾಗಿಯು, ಪ್ರತಿಬಿಂಬೋಪಾಧಿಯೆಂಬದಾಗಿಯು, ಅಂದ

---

ದಂತೆ ರೂಪಾಂತರದಿಂದ ವಸ್ತುವಂತೋರಿಸುವದೆ, ಉಪಾಧಿಯೆನಿಸುವದು. ಅದೆಷ್ಟು ಪ್ರಕಾರವಾಗಿಪ್ಪುದು ? ಅವಚ್ಛೇದೋಪಾಧಿಯೆಂದು, ಪ್ರತಿಬಿಂಬೋಪಾಧಿಯೆಂದು, ಅಧ್ಯಾ

ರೆ ಪ್ರತಿಬಿಂಬೋಪಾಧಿ ಯೆಂಬದಾಗಿಯೂ, ಅಂದರೆ ಪ್ರತಿಬಿಂಬಗ್ರಹಣ ಸಾಮರ್ಥ್ಯವುಳ್ಳ ಉಪಾಧಿ ಯೆಂಬದಾಗಿಯು, ಅಧ್ಯಾಸೋಪಾಧಿ ಯೆಂಬದಾಗಿಯೂ ಮೂರು ಪ್ರಕಾರವಾಗಿರುವುದು. ಇವುಗಳಿಗೆ ವಿವರವು ಎಂತೆಂದರೆ, ಪ್ರತ್ಯಗಾತ್ಮನೆನಿಪ ಸಾಕ್ಷಿರೂಪನಾದ ಪರಬ್ರಹ್ಮನಿಗೆ ಗಾಢನಿದ್ರೆಯೆಂಬ ಅಜ್ಞಾನವೆ ಅವಚ್ಛಿನ್ನೋಪಾಧಿಯೆನ್ನಲ್ಪಡುವದು. ಅಂದರೆ ಗಾಢನಿದ್ರೆಯು ಉಂಟಾಗಿರುವ ಸಮಯದಲ್ಲಿ ಸಕಲವಾದ ಇಂದ್ರಿಯಗಳು ಉಪರಮವನ್ನುಹೊಂದಿ,ಕಾರಣಶರೀರರೂಪವಾಗಿರುವ ಅಜ್ಞಾನವೆಂಬುದೊಂದು ಮಾತ್ರವೆ ಅವಶಿಷ್ಟವಾಗಿರುವದು. ಆ ಅಜ್ಞಾನವು ಆತ್ಮನಿಗೆ ಆವರಕವಾಗಿರುವದು. ಅಂದರೆ,-ಆತ್ಮನು ಆ ಅಜ್ಞಾನದಿಂದ ಎಡೆಬಿಡದೆ ವ್ಯಾಪ್ತನಾಗಿರುವನು. ಆದ್ದರಿಂದ ತತ್ಕಾಲೀನವಾದ ಈ ಅಜ್ಞಾನವು ಆತ್ಮನಿಗೆ ಅವಚ್ಛಿನ್ನೋಪಾಧಿ ಯೆಂಬದಾಗಿ ಹೇಳಿಸಿಕೊಳ್ಳಲ್ಪಡುವದು. ಬುದ್ಧಿಯೆಂಬ ಅಂತಃಕರಣದಲ್ಲಿ ಪೂರ್ಣೇಕ್ತನಾದ ಪ್ರತ್ಯಗಾತ್ಮ ನೆನಿಪ ಬ್ರಹ್ಮನು ಹೊಳೆಯೋಣವೆ ಪ್ರತಿಬಿಂಬೋಪಾಧಿ ಯನ್ನಲ್ಪಡುವದು, ಅಂದರೆ,-ಬುದ್ಧಿಯೆಂಬುವದು ಸ್ವಚ್ಛವಾಗಿ ಕನ್ನಡಿಯಂತೆ ಇರುವದರಿಂದಲೇ ಪ್ರತಿಬಿಂಬವನ್ನು ಗ್ರಹಿಸತಕ್ಕ ಶಕ್ತಿಯುಳ್ಳದ್ದಾಗಿರುವದು, ಆದಕಾರಣವೆ ಇದು ಆತ್ಮನ ಪ್ರತಿಬಿಂಬವನ್ನು ಗ್ರಹಿಸುವದಾದಕಾರಣ ಇದು ಆತ್ಮನಿಗೆ ಪ್ರತಿಬಿಂಬೋಪಾಧಿಯೆನ್ನಲ್ಪಡುವದು, ಬುದ್ಧಿಯೆಂಬ ಅಂತಃಕರಣ ಧರ್ಮಗಳಾದ ಸುಖದುಃಖ ಮುಂತಾದವುಗಳನ್ನು ಪ್ರತ್ಯಗಾತ್ಮನಾಗಿ ಸಾಕ್ಷಿರೂಪವಾಗಿರುವ ಆತ್ಮನಲ್ಲಿ ಹೊರಿಸುವಿಕೆಯೆ ಅಧ್ಯಾಸೋಪಾಧಿ ಯೆನ್ನಲ್ಪಡುವದು. ಅಂದರೆ,-ಕಾಮ, ಸಂಕಲ್ಪ, ಸಂದೇಹ, ಶ್ರದ್ಧೆಯು, ಅಶ್ರದ್ಧೆಯು, ಧೃತಿಯು, ಅಧೃತಿಯು, ನಾಚಿಕೆಯು, ಭ

---

ಸೋಪಾಧಿಯೆಂದು, ತ್ರಿಪ್ರಕಾರವಾಗಿರ್ಪುದು. ಹಾಗಂದರೇನು ? ಪ್ರತ್ಯಗಾತ್ಮನಿಗೆ ಸುಷುಪ್ತಿರೂಪಾವಿದ್ಯೆಯೆ ಅವಚ್ಛಿನ್ನೊಪಾಧಿ ಬುದ್ಧಿಯಲ್ಲಾ ಪ್ರತ್ಯಗಾತ್ಮನ ಪ್ರತಿಫಲನವೆ ಪ್ರತಿಬಿಂಬೋಪಾಧಿ, ಬುದ್ಧಿಗತ ಸುಖದುಃಖಗಳನಾ ಪ್ರತ್ಯ

ಯೆಂಬು, ಎಂಬೀ ಧರ್ಮಗಳೆಲ್ಲವೂ ಅಂತಃಕರಣದವುಗಳಾಗಿರುವವು. ಇವುಗಳನೆಲ್ಲಾ ಸಾಕ್ಷಿ ಚೈತನ್ಯವಾದ ಪ್ರತ್ಯಗಾತ್ಮನಲ್ಲಿ ಆರೋಪಿಸುವರು. ಈ ಆರೋಪವಿಷಯವೇ ಅಧ್ಯಾಸೋಪಾಧಿಯನ್ನಾಗಿ ಹೇಳುವರು. ಅವಯವರಹಿತವಾದ ಸದ್ವಸ್ತುವು ಬುದ್ಧಿಯೆಂಬ ಅಂತಃಕರಣದಲ್ಲಿ ಎಂತು ತೋರಿತು ಎಂಬದಾಗಿ ಕೇಳ್ವಿಬಂದರೆ?

೬ ಸಾಂಗತ್ಯ|| ತಾ|| ಪೂರ್ವದಲ್ಲಿ ಉದಹರಿಸಿದಂತೆ ಕನ್ನಡಿಯಹಾಗೆ ನಿರ್ಮಲವಾಗಿರುವ ಪದಾರ್ಥದಲ್ಲಿ ಅಲ್ಲದೆ ಇತರಮಲಿನ ಪದಾರ್ಥದಲ್ಲಿ ಪ್ರತಿಬಿಂಬವೆಂಬುವದು ಉಂಟಾಗುವದಿಲ್ಲವು. ಅದೆಂತೆಂದರೆ,-ತಮೋಗುಣವೇ ಪ್ರಧಾನವಾಗಿಯುಳ್ಳ ಪೃಥಿವಿ ಮುಂತಾದ ತತ್ವಗಳೊಳಗೆ ಸತ್ವಗುಣ ಪ್ರಧಾನಾಂಶವಾಗಿರುವ ಬುದ್ಧಿಯು ನಿರ್ಮಲ ವಸ್ತುವಾಗಿರುವದು. ಆದುದರಿಂದಲೇ ನಿರ್ಮಲವಾಗಿರುವ ಬುದ್ಧಿಯೊಳು ಆತ್ಮವಸ್ತುವು ಪ್ರತಿಬಿಂಬರೂಪದಿಂದ ಪ್ರಕಾಸಿಸಬಹುದು || ೧ || ಇನ್ನು ಚನ್ನಾಗಿ ವಿವರಿಸುವೆನವಗಾಹಿಸು. ಹಾಲಿನಲ್ಲಿಯಾಗಲಿ, ಮೊಸರಿನಲ್ಲಿಯಾಗಲಿ, ಇಲ್ಲವೆ ಬೆಣ್ಣೆಯಲ್ಲಿ ಯಾದಾಗ್ಯೂ, ಮುಖವನ್ನು ಎದುರಿಗೆ ಹಿಡಿದು ತೋರಿದರೆ ಅವುಗಳಲ್ಲಿ ಪ್ರತಿಬಿಂಬವೆಂಬುವದು ಉಂಟಾಗುವದಿಲ್ಲವು. ಅಗ್ನಿಯ ಜ್ವಾಲೆಯಿಂದ ಚನ್ನಾಗಿ ಕರಗಿಸಿದ ತುಪ್ಪದಲ್ಲಿ ಮುಖವನ್ನು ತೋರಲು ಒಡನೆಯೆ ಸ್ಪಷ್ಟವಾಗಿ ಪ್ರತಿಬಿಂಬವು ಕಾಣಲ್ಪಡುವದು. ಇದರಂತೆ ನೈರ್ಮಲ್ಯಸತ್ವವು ಸಾಲದಿರುವಂಥ ರಸಧಾ

---

ಗಾತ್ಮನೊಳಾರೋಪಿಸುವದೆ ಅಧ್ಯಾಸೋಪಾಧಿ, ನಿರ್ವಿಕಲ್ಪವಾದ ವಸ್ತುವಿಲ್ಲೆಂತು ತೋರಿತು?

೬ ಮೂಲ || ಸಾಂಗತ್ಯ || ಪರಿಶುದ್ಧ ವಸ್ತುವಿನೊಳಲ್ಲದಿನ್ನೊಂದ | ರೊಳವು ತೋರದು ಪ್ರತಿಫಲಿಸಿ || ಧರೆಯ ಪ್ರಮುಖತತ್ವಂಗಳೊಳಗಂತಃಕರಣವೆ ಪರಿಕಿಸೆ ಪರಿಶುದ್ಧವಸ್ತು ||೧||
ಹಾಲಲ್ಲಿ ಮೊಸರಲ್ಲಿ ಬೆಣ್ಣೆಯಲೀಕ್ಷಿಸೆ | ಮೇಲೆ ತೋರದು ಪ್ರತಿಬಿಂಬ || ಜ್ವಾಲೆಯಿಂ ಕರಗಿದ ತುಪ್ಪದೊಳ್ತೋರ್ಪಂತೆ | ಸಾಲದ [illegible] ತುಸಸ್ತುಕದಿ ||೨||

ತು, ರಕ್ತಧಾತು, ಮಾಂಸಧಾತು, ಮೇದೋಧಾತು, ಅಸ್ಥಿಧಾತು, ಮಜ್ಜಾಧಾತು, ಶುಕ್ಲಧಾತುಗಳೆಂಬ ಧಾತುಗಳಲ್ಲಿಯು ||೨|| ಕೇವಲವಾದ ಚಿತ್ಪದಾರ್ಥಕ್ಕೆ ಪ್ರತಿಬಿಂಬರೂಪದಿಂ ಪ್ರಕಾಶವು ಸಂಭವಿಸುವದಿಲ್ಲವು, ಅಲೌಕಿಕ ವಿಷಯಗಳಿಂದ ಸಹಿತವಾದ ಇಂದ್ರಿಯಗಳಲ್ಲಿಯು ಆತ್ಮಪ್ರತಿಬಿಂಬಾವಿರ್ಭಾವವು ಸಂಧಿಸುವದಿಲ್ಲವು. ಎಲೈ ಶ್ರೇಷ್ಠವಾದ ಮನಃಪ್ರಭುವೆ? ಅಂತಃಕರಣ ಮಾತ್ರದಲ್ಲಿಯೇ ಆತ್ಮಪ್ರತಿಫಲನ ಪ್ರಕಾಶವೆಂಬದಾಗಿ ಅನುಭವಕುಶಲರಾದ ಯೋಗಿಗಳುಸುರುವರು ||೩|| ಬಲಿತು ಮಣಗಿರುವ ಎಳ್ಳಿನಲ್ಲಿ ಎಣ್ಣೆ ಎಂಬುವದು ಹ್ಯಾಗೆ ಸರ್ವತ್ರ ವ್ಯಾಪಿಸಿರುವದೋ? ಅದರಂತೆಯೇ ಸಮಸ್ತ ಚೇತನವರ್ಗದಲ್ಲಿಯು. ಅಚೇತನವರ್ಗದಲ್ಲಿಯು ಎಲ್ಲಾ ಕಡೆಯಲ್ಲಿಯು ಎಲ್ಲಾ ದೇಶದಲ್ಲಿಯು, ಲೇಶವಾದರೂ ಅಂತರವಿಲ್ಲದೆ ವ್ಯಾಪಿಸಿಕೊಂಡಿರುವದುಯಾವದುಂಟೋ? ಅದೇ ಸದ್ರೂಪವಾಗಿರುವ ಪರಬ್ರಹ್ಮ ವಸ್ತುವಾಗಿರುವುದು. ಹಾಗೆ ವ್ಯಾಪಿಸಿದ್ದಾಗ್ಯೂ ಯೋಗ್ಯವಾದ ಸ್ಥಾನವನ್ನು ಬಿಟ್ಟು ಇತರತ್ರ ತೋರಿಬರುವದಿಲ್ಲವು. ಆದರೆ ವಿಶೇಷವಾದ ತಮೋಗುಣ ಪ್ರಧಾನವಾಗಿರುವೆಡೆಗಳಲ್ಲಿಯು, ರಜೋಗುಣಾಧಿಕ್ಯವಾಗಿರುವ ಸ್ಥಾನಗಳಲ್ಲಿಯು ಈ ಚಿತ್ತಿನಭಿವ್ಯಕ್ತಿಯು ಉಂಟಾಗುವದಿಲ್ಲವು. ಸತ್ವಗುಣ ಪ್ರಧಾನವಾಗಿರುವೆಡೆಗಳಲ್ಲಿ ಮರಗಳಲ್ಲಿ ಚಿಗುರುಗಳು ತೋರುವಂತೆ ಅಭಿವ್ಯಕ್ತವಾಗುವದು. ||೪|| ಆದರೆ ಸತ್ವಪ್ರಧಾನಾಂಶದೊಳು ಆತ್ಮಪದಾರ್ಥಕ್ಕಭಿವ್ಯಕ್ತಿಯುಂಟಾದರೆ ತದಭಿನ್ನವಾಗಿರುವ ಸತ್ತುಚಿತ್ತು ಆನಂದಗಳಿಗೆ

---

ಚಿತ್ತಿಗಭಿವ್ಯಕ್ತಿ ಘಟಿಸದು ವಿಷಯಗ । ಳತ್ತಣಿಂಕರಣಿಸದನಿ
ಲಾ ॥ ವೃತ್ತಿಯೊಳೆಸೆಯ ದಂತಃಕರಣದಿಪ್ಪೊಳೆ । ಯುತ್ತಹು
ದಾತ್ಮಕೋವಿದನೆ ॥೩॥

ಎಲ್ಲಕಡೆಯಲುಂಟೌ ಸತ್ತಿಗಭಿವ್ಯಕ್ತಿ । ಯುಳ್ಳತಮೋರಜೋಗು
ಣವಿ ॥ ಪಲ್ಲವಿಸುವದು ಚಿತ್ತಿಗಭಿವ್ಯಕ್ತಿಮೇ । ಲ್ಲಿತೋರುವ
ಸತ್ವಗುಣವಿ ॥೪॥

ಅಭಿವ್ಯಕ್ತಿಯೆಂಬುವದು ಹ್ಯಾಂಗೆ ಉಂಟಾಗುವದೆಂದರೆ,-ದೃಷ್ಟಾಂತ ಮೂಲಕವಾಗಿ ವಿಶದವಾಡುತ್ತಾನೆ; ಅಗ್ನಿಜ್ವಾಲೆಯಿಂದ ನೀರನ್ನು ಚೆನ್ನಾಗಿ ಕಾಶಿದರೆ ಆ ಕಾದನೀರಿನಲ್ಲಿ ಉಷ್ಣತ್ವ ವೆಂಬೊಂದು ಗುಣವು ವ್ಯಕ್ತವಾಗುವದು, ‖೫‖ ಕಟ್ಟಿಗೆಗಳಲ್ಲಿ ಉಷ್ಣತ್ವವು, ಸುಡುವಿಕೆಯು ಎಂಬ ಎರಡು ಧರ್ಮಗಳು ವ್ಯಕ್ತವಾಗಿ ಕಾಣಬರುವವು. ಎಣ್ಣೆಯಲ್ಲಿ ಅದ್ದಿದ ಬತ್ತಿಯಲ್ಲಿ ಪ್ರಜ್ವಲಿಸುತ್ತಿರುವ ಪ್ರಕಾಶದೊಳು ಪ್ರಕಾಶಿಸುತ್ತಿರುವಿಕೆ ಯೆಂಬ ಸತ್ವವು, ಬಿಸಿಯಾಗಿರುವಿಕೆಯೆಂಬ ಉಷ್ಣತ್ವವು ಸುಡುವಿಕೆಯೆಂಬ ದಾಹಕತ್ವವು, ಎಂಬೀಮೂರುಧರ್ಮಗಳು ಅಂದರೆ,-ಅಗ್ನಿಯು ಸಂಬಂಧವಾದ ಧರ್ಮತ್ರಯವು ಕಾಣಬರುತಲಿರುವದು. ಇದರಂತೆಯೆ ಆತ್ಮನಿಗಿಂತಲು ಅಭಿನ್ನಗಳಾಗಿಯೇ ಸತ್ವವು, ಚಿತ್ವವು,ಆನಂದವು ಇವುಗಳು ಪ್ರಕಾಶವಾನಗಳಾಗಿರುವವು. ‖೬‖ ಆನಂದಮಯಕೋಶನಿಷ್ಠನಾದ ಈಶ್ವರನಿಗೆ ಮಾಯೆಯೆಂಬುವದು ಉಪಾಧಿಸ್ಥಾನವಾಗಿರುವದು, ವಿಜ್ಞಾನ ಮಯಕೋಶನಿಷ್ಠನಾದ ಜೀವನಿಗೆ ಅವಿದ್ಯಾಸ್ವರೂಪವಾದ ಬುದ್ಧಿಯೆ ವುಪಾಧಿಸ್ಥಾನವು.ಈಮಾಯಾಬುದ್ಧಿಗಳೆಂಬ ಉಪಾಧಿಸ್ಥಾನಗಳನ್ನು ಹೊಂದಿರುವ ಈಶ್ವರ ಜೀವರುಗಳಿಗೆ ಕ್ರಮವಾಗಿ ನಿತ್ಯನಾಗಿಯು, ನಿರ್ಮಲನಾಗಿಯು ಯಿರುವ ಬ್ರಹ್ಮನೇ ಈಶ್ವರನಿಗೆ ಕೂಟಸ್ಥನಾಗಿರುವ

ಸತ್ತಿಗೆಚಿತ್ತಿಗಾನಂದಕಭಿವ್ಯಕ್ತಿ । ಯೊತ್ತರಿಪುದಿದೆಂತೆನಲ್ಕೆ ‖ ಜೊತ್ತಿದಬೆಂಕೆಯುಸೂಷ್ಣಪೊಂದೆಜಲ । ದತ್ತತೋರುವುದು ಕಾಸಿದರೆ ‖೫‖

ಸೌದೆಯೊಳುಷ್ಣದಾಹಕಧರ್ಮವೆರಡೆಸ । ಪಾದಿಸಲಹುದುತ್ತೈಲದೆಲಿ ‖ ತೋರಿದವರ್ತಿಯುಲಿಪ್ರಕಾಶೋಷ್ಣದಾಹಕವಾದ ಶಕ್ತಿತ್ರಯುವಿಹುದು ‖೬‖

ಆನಂದವಿಜ್ಞಾನಮಯದೀಶಜೀವರ । ಹೀನಮಾಯಾವೃತ್ತ್ಯುಪಾಧಿ ‖ ಸ್ಥಾನಾಗಾರಬ್ರಹ್ಮಕೂಟಸ್ಥರಿವರರ್ಗಧಿ । ಷ್ಠಾನರುನಿತ್ಯನಿರ್ಮಲರು ‖೭‖

ನು, ಹೀಗೆಯೆ ನಿರ್ಮಲವಾಗಿರುವ ಚಿತ್ಪದಾರ್ಥವೇ ಬುದ್ಧಿಯಲ್ಲಿ ಪ್ರತಿಬಿಂಬಿಸಿದ ಜೀವನಿಗೆ ಆಧಾರಭೂತವಾದ ಕೂಟಸ್ಥಪದಾರ್ಥವಾಗಿರುವದು. ॥೭॥ ಅದು ಹ್ಯಾಗಂದರೆ;—ಮೇಲಾಭ್ರಗದೊಳು ಮೇಘಗಳೊಳಗೆ ವ್ಯಾಪಿಸಿರುವ ಆಕಾಶಕ್ಕು ಯಾವದಾದರೊಂದು ಜಲಾಶಯದೊಳಗೆ ಪ್ರತಿಬಿಂಬಿಸಿರುವ ಆಕಾಶಕ್ಕು, ಅಥವಾ ಮೇಘಾನ್ತರ್ಗತವಾದ ಜಲಬಿಂದುವಿನೊಳಗೆ ವ್ಯಾಪಿಸಿರುವ ಆಕಾಶಕ್ಕು ಹಾಗೆಯೆ ಮಹಾಕಾಶಕ್ಕು ಘಟಮಠಾದಿಗಳೊಳಗೆ ವ್ಯಾಪಕವಾಗಿರುವ ಆಕಾಶಕ್ಕು ಉಪಾಧಿ ಪರಿತ್ಯಾಗದಿಂದ ಏಕರೂಪವಾಗಿರುವದು. ಅಂದರೆ,—ಜಲಾಶಯದಲ್ಲಿ ಪ್ರತಿಫಲಿಸಿದ ಆಕಾಶಕ್ಕೆ ಮಹಾಕಾಶವು ಹ್ಯಾಗೆ ಅಭಿನ್ನವಾಗಿಯು ಮೂಲವಾಗಿಯು ಇರುವದೋ? ಇದರಂತೆ ಮಾಯೋಪಾಧಿಕನಾದ ಆತ್ಮನಿಗೆ ನಿರುಪಾಧಿಕನಾದ ಈಶ್ವರನು ಅಭಿನ್ನನಾಗಿಯು ಬಿಂಬಸ್ಥಾನವಾಗಿಯು ಇರುವನು. ಇದರಂತೆಯೆ, ಘಟಾಂತರ್ಗತವಾದ ಆಕಾಶಕ್ಕೆ ಮಹಾಭೂತಾಕಾಶವು ಹ್ಯಾಂಗೆ ಅಭಿನ್ನವಾಗಿರುವದೋ ಹಾಗೆ ಅವಿದ್ಯೋಪಾಧಿಕನಾದ ಜೀವನಿಗೆ ನಿರುಪಾಧಿಕವಾದ ಚಿತ್ಪದಾರ್ಥವು ಅಭಿನ್ನವಾದ ಬಿಂಬಸ್ಥಾನವಾಗಿರುವದು. ಮಹಾಕಾಶದಿಂದ ಘಟಮಠಾದಿ ಉಪಾಧ್ಯಂತರ್ಗತವಾದ ಆಕಾಶಕ್ಕೆ ಅನೇಕತ್ವವು ಹ್ಯಾಗೆ ಸಂಭವಿಸಿರುವುದೋ ಅದರಂತೆಯೇ ನಿರುಪಾಧಿಕಾ ಖಂಡಾತ್ಮನಿಗೂ ಅವಿದ್ಯಾದ್ಯುಪಾಧಿಗತರಾಗಿರುವ ಜೀವರುಗಳಿಗೂ ಅನೇಕತ್ವ ವುಂಟಾಗಿರುವುದೆಂದು ತಿಳಿಯುವದು. ॥೮॥ ಜೀವೇಶ್ವರರುಗಳಿಗೆ ಚಿದಾತ್ಮೈಕ್ಯವೆಂತು ಸಂಭವಿಸುವದೆಂದರೆ? ಅವಿದ್ಯೆ ಎಂಬಭಿಧಾನವುಳ್ಳ ಅಜ್ಞಾನೋಪಾಧಿಕನಾದ ಜೀವನಿಗೆ ಉಪಾಧಿ ಪರಿತ್ಯಾಗದಿಂದ ಕೂಟಸ್ಥನೊಳು ಐಕ್ಯವು ಸಮನಿಸುವದು, ಹಾಗೆಯೇ ಕೂಟಸ್ಥೋಪಾಧಿ ಬ್ರಹ್ಮತ್ವೋಪಾಧಿಗಳ ಪರಿತ್ಯಾಗದಿಂದ ಸಜಾತೀಯ

---

ಯೆಂತೆನೆ ಮೇಘಗಗನ ಜಲಗಗನಗ ! ಳೆಂತಸ್ಥವಾಗಿಯುಂ
ಪೊರಗೆ । ಸಾಂತತ್ಯವಾದ ಮಹಾಕಾಶ ಕಲಶಾನಂತಂಗಳೆಂತ
ಹುದೇಸೆ ॥೮॥

ವಿಜಾತೀಯ ಸ್ವಗತಭೇದ ಶೂನ್ಯವಾದ ಚಿನ್ಮಾತ್ರಾದ್ವೈತ ಸಿದ್ಧಿಯುಂಟಾಗುವದೆಂದರಿಯುವದು. ಆತ್ಮನಿಗೆ ಸಜಾತೀಯ, ವಿಜಾತೀಯ, ಸ್ವಗತಭೇದಶೂನ್ಯತೆ ಎಂತೆಂದಡೆ? ಲೋಕದಲ್ಲಿ ಯಾವದಾದರೊಂದು ಮಾವಿನಮರವನ್ನು ಕಂಡರೆ, ಆ ಮಾವಿನಮರದ ಜಾತಿಯಲ್ಲಿಯೇ ಹುಟ್ಟಿದ ಮತ್ತೊಂದುಮಾವಿನ ಮರವುಂಟು ಆದ್ದರಿಂದ ಒಂದೇಮಾವಮರದ ಜಾತಿಯಲ್ಲಿ ಎರಡುಮೂರು ಮರಗಳಿರುವದರಿಂದ ಇದಕ್ಕೆ ಸಜಾತೀಯ ಭೇದವುಂಟು. ಹೀಗೆ ಆತ್ಮನಿಗೆ ಸಮಾನವಾಗಿರುವ ಮತ್ತೊಬ್ಬ ಪರಮಾರ್ಥವಾದ ಆತ್ಮನಿದ್ದರೆ ಆಗ ಆತ್ಮನಿಗೂ ಸಜಾತೀಯವಾದ ಭೇದವು ಬರುತ್ತಿತ್ತು, ಅದು ಇಲ್ಲವಾದಕಾರಣ ಆತ್ಮನಿಗೆ ಸಜಾತೀಯ ಭೇದವಿಲ್ಲವೆಂದರಿಯಬೇಕು, ಒಂದು ಮಾವಿನ ಮರದ ಜಾತಿಗಿಂತಲೂ ಬೇರೆಜಾತಿಯಾದ ಹಲಸು, ತೆಂಗು, ಮುಂತಾದ ಮರಗಳಿರುವದರಿಂದ ಪೇಳ್ಕೊಂಡ ಮಾವಿನಮರಕ್ಕೆ ವಿಜಾತೀಯ ಭೇದವು ಬಂದುದು, ಹೀಗೆ ಆತ್ಮನಿಗೆ ಬೇರೊಂದು ವಿಧವಾದ ಪರಮಾರ್ಥಾತ್ಮನು ಇದ್ದಡೆ ಆಗ ಆತ್ಮನಿಗೂ ವಿಜಾತೀಯ ಭೇದವು ಬರಬಹುದಾಗಿತ್ತು ಹಾಗಿಲ್ಲವಾದಕಾರಣ ಆತ್ಮನಿಗೆ ವಿಜಾತೀಯಭೇದವಿಲ್ಲವೆಂಬದಾಗಿ ತಿಳಿಯತಕ್ಕದ್ದು. ಇದರಂತೆಯೆ ಒಂದು ಮಾವಿನಮರದೊಳಗೆ ಮರಕ್ಕಿಂತಲು ಎಲೆಯು ಬೇರೆವಿಧವಾಗಿಯು, ಹುವ್ವು ಮತ್ತೊಂದು ಬಗೆಯಾಗಿಯು, ಹಣ್ಣು ಇನ್ನೊಂದು ರೀತಿಯಾಗಿಯು, ಚಿಗುರು ಬೇರೊಂದು ಪ್ರಕಾರವಾಗಿಯು ಇರುತ್ತದೆ ಯಾದಕಾರಣ ಆ ಮಾಮರಕ್ಕೆ ತನ್ನಲ್ಲಿಯೆ ಭೇದವು ಬಂತಾಗಿ ಸ್ವಗತಭೇದವುಂಟು, ಆತ್ಮನಲ್ಲಿ ಮಾಮರದಂತೆ ಒಂದು ಭಾಗದೊಳೊಂದು ವಿಧವಾಗಿಯೂ, ಇನ್ನೊಂದುಭಾಗದೊಳು ಮತ್ತೊಂದು ಪ್ರಕಾರವಾಗಿಯು ಇದ್ದರೆ, ಆಗ ಆತ್ಮನಿಗೂ ಸ್ವಗತಭೇದವು ಬರುತ್ತಿತ್ತು ಹಾಗೆ ಭೇದವಿಲ್ಲದ ಕಾ

---

ಇವರಿಗವರ್ಣಳೊಳಗೈಕ್ಯ ಪೊಂತಿಹುದುಳಿ । ದವರಿಗೆಂತೈಕ್ಯ
ವಹಾಗುವದು । ವಿವರಿಸೆಂತನಲುಪಾಧಿತ್ಯಾಗದಿಂದೆಸುಂಭವಿಪ್ಪುದ
ದ್ವೈತಸಂಸಿದ್ಧಿ ॥೯॥

ರಣ ಸ್ವಗತಭೇದವೆಂಬುವದು ಇಲ್ಲ. ಈ ಪ್ರಕಾರವಾಗಿರುವ ಸಜಾತೀಯ, ವಿಜಾತೀಯ, ಸ್ವಗತಗಳೆಂಬ ಭೇದತ್ರಯದಿಂದ ವಿರಹಿತವಾದ ಶುದ್ಧಾತ್ಮೈಕ್ಯ ಸಿದ್ಧಿಯಾಗುವದೆಂಬಾಶಯವು ॥೯॥

೨ ವಚನ॥ ತಾ॥ ಈಪ್ರಕಾರವಾಗಿ ಸಂದೇಹಾಸ್ಪದವಿಲ್ಲದಂತೆ ಅನುಗುಣವಾದ ಯುಕ್ತಿ ಪ್ರಮಾಣಗಳಿಂದ ಚಿದ್ರೂಪ ವಿಚಾರಪದ್ಧತಿಯಂ ಕಿವಿಗಳೊಳಗೆ ನಿಲ್ಲುವಹಾಗೆ ಮಾಡಿ ಇನ್ನೊಂದು ಪ್ರಕಾರದಿಂದ ಹೇಳುತಲಿದ್ದಾನೆ, ಅದಂತೆಂದರೆ?

೧೦ ಇಂತು ಚಿತ್ಸ್ವರೂಪ ವಿಚಾರಪದ್ಧತಿಯು ಮುಗಿದುದು.

## ೧೧ ಆನಂದರೂಪ ವಿಚಾರಪದ್ಧತಿ ಪ್ರಾರಂಭವು.

೧ ವೃತ್ತ॥ ತಾ॥ ತಮೋಗುಣ, ರಜೋಗುಣಗಳ ಭಾಗಗಳಲ್ಲಿ ಮೂಢವೃತ್ತಿ, ಘೋರವೃತ್ತಿಗಳಲ್ಲಿಕಾಣಿಸದೆ ಅಧಿಕವಾಗಿ ನಿರ್ಮಲವಾಗಿರುವ ಸತ್ವಗುಣಭಾಗದ ಶಾಂತವೃತ್ತಿಯಲ್ಲಿ ತೋರುವ ಯಾವಆನಂದವುಂಟೋ? ಆ ಯಾನಂದವೇ ದಶೇಂದ್ರಿಯಗಳ ಸಮೂಹದಲ್ಲಿ ಹೊಂದಲ್ಪಟ್ಟ ಆಯಾಯ ಇಂದ್ರಿಯಗಳ ನೈರ್ಮಲ್ಯ ಸ್ವರೂಪದಿಂದಲೇ ಮನಸ್ಸೆಂಬ ಗೃಹವನ್ನು ಹೊಂದಿದರೆ ಸಂತುಷ್ಟವಾದ ಸುಖಾನುಭವಚಾಪಲ್ಯವಳ್ಳ ಬುದ್ಧಿಯಲ್ಲಿ ಪ್ರಕಾಶಿಸುತ್ತಿರುವದು. ಯಾವ

---

೨ ಮೂ॥ ವ॥ ಇಂತೆಂದು ನಿಸ್ಸಂದೇಹ ವಾಗಲು ಸುದರ್ಶಚಿದಾಭವ ಪದ್ಧತಿಯಂ ಕರ್ಣಪ್ರದೇಶ ಸ್ಥಿತಿಯಂಗೈದು ಇನ್ನೊಂದು ಪ್ರಕಾರದಿಂ ಪೇಳುತಿರ್ದಪನದೆಂತೆನೆ.

೧೦ ಇಂತು ಚಿತ್ಸ್ವರೂಪ ವಿಚಾರ ಪದ್ಧತಿಯು ಮುಗಿದುದು.

೧೧ ಆನಂದರೂಪ ವಿಚಾರ ಪದ್ಧತಿ ಪ್ರಾರಂಭವು.

೧ ಮೂಲ॥ ವೃತ್ತ॥ ತಾಮಸರಾಜಸಂಗಳಲಿ ಮೂಢಪಿಘೋರದಿ
ತೋರದ । ಸಮುದ್ಧಾಮದಿಶುದ್ಧಸತ್ವಗುಣಭಾಗದಿ ತೋರ್ತು

ಯಥಾರ್ಥ ಸ್ವರೂಪವಾದ ವಸ್ತುವೋ ? ಅದೇ ಆನಂದಸ್ವರೂಪವೆಂಬದಾಗಿ ತಿಳಿಯಬೇಕು. ಈ ಅರ್ಥವು ಅವಗಾಹನಕ್ಕೆ ಬರುವದು ತುಂಬ ಪ್ರಯಾಸವಾಗಿರುವದರಿಂದ ಬುದ್ಧಿವಂತರು ಸೂಕ್ಷ್ಮವಾದ ದೃಷ್ಟಿಯಿಂದ ತಿಳಿದುಕೊಳ್ಳತಕ್ಕದ್ದು.

೨ ಜಂಪೆ॥ ತಾ॥ ಮನಸ್ಸು ಸಕಲವಾದ ಅಕೃತ್ರಿಮ ವಚನಗಳಿಂದ ಅಂದರೆ ವೇದವಾಕ್ಯಗಳಿಂದೊಡಗೂಡಿ ಯಾವ ಬ್ರಹ್ಮಾನಂದವನ್ನು ಇಷ್ಟೆಂಬದಾಗಿ ಹೇಳಲು ಅಗೋಚರವಾಗಿರುವದರಿಂದಲೇ ಅಶಕ್ತಗಳಾಗಿ ಹಿಂತಿರುಗಿ ಬರುತಲಿರುವವೊ ? ಅದೇ ಬ್ರಹ್ಮಾನಂದವೆಂಬರ್ಥವುಳ್ಳ ವೇದವಚನಾನುಸಾರವಾಗಿ ಹೇಳುತಲಿಥಾನೆ. ಅಂದರೆ,-ಯಾವ ಬ್ರಹ್ಮಾನಂದವು ಮನೋವಾಕ್ಯಗಳಿಗೆಕೂಡ ಅಗೋಚರವಾದದ್ದೊ ? ಮತ್ತೆ ಯಾವ ಬ್ರಹ್ಮಾನಂದವನ್ನು ತಿಳಿಯುವದರಿಂದ ಅನುಭವ ವಿಶಾರದನಾಗಿರುವ ಯೋಗಿ ಸಾರ್ವಭೌಮನು ಜನನ ಮರಣ ಪ್ರವಾಹ ರೂಪವಾಗಿರುವ ಸಂಸಾರವೆಂಬ ಸಾಗರದಿಂದುಂಟಾದ ಮಹಾಭಯವನ್ನು, ॥೧॥ ಲೇಶವಾದರು ಗಣನೆಗೆತಾರದೆ ಭಯಪಡುವದಿಲ್ಲವೋ ? ಲೋಕದಲ್ಲಿರುವ ಸಮಸ್ತರಾದ ಮಹರ್ಷಿಗಳೇ ಮುಂತಾದ ಮಹನೀಯರೆಲ್ಲರು ಯಾವ ಆನಂದವೇ ಸರ್ವೋತ್ತಮ ವಾದದ್ದೆಂದರಿತು ಅದನ್ನು ಅನುಭವಿಸುವದಕ್ಕಾಗಿಯೆ ಮಹಾಪ್ರಯತ್ನಗಳನ್ನು ಮಾಡುತ್ತಾರೆಯೊ ? ಪ್ರಪಂಚದೊಳು ಕಾಣಬರುವ ದುಃಖ ಸಮುದಾಯವೆಲ್ಲವು ಸೇರಿ ಯಾವ ಬ್ರಹ್ಮಾನಂದದಲ್ಲಿ ಬಂದು ಲೇಶವನ್ನಾದರೂ

---

ವುದಾವುದಿಂದ್ರಿಯ ॥ ಸ್ತೋಮದಿಗಮ್ಯವಾದ ವಿಷಯಂಗಳೆ
ನಿರ್ಮಲಭಾವದಿಂದೆ । ಹೃದ್ಧಾಮಮಸ್ಪದೆ ತೃಪ್ತಮತಿಯೋಳ್
ಪೊಳೆಯುತ್ತಿಹುದಾವವಾಸ್ತವಂ ॥

೨ ಮೂಲ ॥ ಜಂಪೆ ॥ ಮನದೊಡನೆವಚನಗಳ್ಮರಳುತಿಹುದಾವದೆ
ಸೆ । ಯನುಪಿಡಿದುತದವಬೋಧಾಢ್ಯಂಭಯವನು ॥೧॥
ಹೊಂದನೆಂಬುದರಿಂದ ಭೂರಿಪ್ರಯತ್ನವೆಯುಂದದಿಂದಾಯ್ತಾ
ವುದಾಗದುವಿವರ್ತಂ ॥೨॥

ನ್ಯೂನ ಮಾಡಲಾರವೋ? ॥೨॥ ಯಾವ ಬ್ರಹ್ಮಾನಂದವೆ ಸರ್ವೋತ್ತಮ ವಾದದ್ದೆಂಬದಾಗಿ ಶಾಸ್ತ್ರಗಳಿಂದಲೂ, ಅನುಭವಿಗಳಿಂದಲು ತಿಳಿಯು ಬರುವದರಿಂದಲೇ ಅಂತಪ್ಪ ಬ್ರಹ್ಮಾನಂದವನ್ನು ಹೊಂದಲುಜ್ಜಗಿಸುವ ಮಹಾತ್ಮರೆಲ್ಲರು ತದಿತರವಾದ ಸಮಸ್ತ ಲೌಕಿಕ ಭೋಗ್ಯವಸ್ತುಗಳ ಸಮುದಾಯುವನ್ನು ಹುಲ್ಲುಕಡ್ಡಿಗಿಂತಲೂ ನೀಚವಾದದ್ದನ್ನಾಗಿ ಎಣಿಸುವರು. ॥೩॥ ಪ್ರಪಂಚದೊಳಗೆ ಅತ್ಯಲ್ಪವಾಗಿಯು, ತುಚ್ಛವಾಗಿಯು, ಕ್ಷಣಿಕವಾಗಿಯು, ಐಂದ್ರಿಯಕವಾಗಿಯೂ, ಇರುವ ವಿಷಯ ಸುಖಕ್ಕಾಗಿ ಚರಾಚರಾತ್ಮಕವಾದ ಪ್ರಪಂಚಸೃಷ್ಟಿಕರ್ತನಾದ ಚತುರಾನನು ಮೊದಲ್ಗೊಂಡು ಸಣ್ಣ ಇರುವೆಯುವರಿಗೆ ಇರುವ ಪ್ರಾಣಿವರ್ಗವೆಲ್ಲವೂ ಅಜ್ಞಾನದಿಂದ ಮೋಹಿತವಾಗಿರುವದೊ ॥೪॥ ಅಂತಪ್ಪ ತುಚ್ಛತೆಗೆ ಅನಾಸ್ಪದವಾಗಿಯು, ಅಬಾಧಿತವಾಗಿಯು, ಐಂದ್ರಿಕವಲ್ಲದೆಯು, ಅವಿಕಾರಿಯಾಗಿಯು, ಇನ್ನು ಇತರ ಯಾವದೋಷಗಳಿಗೂ ವಿಷಯುವಾಗದೆಯೂ ಇರುವ ವಸ್ತುವೇ ಅಥವಾ ಆನಂದವೆ ನಾನು ಎಂಬದಾಗಿ ದೃಢವಾಗಿಭಾವಿಸಿ ನಿತ್ಯಸುಖವನ್ನು ಅನುಭವಿಸು.॥೫॥

೩ ವಚನ॥ ತಾ॥ ಎಲೈ ! ಬುದ್ಧಿಯೆಂಬ ಪ್ರಧಾನಿಯೆ ಕೇಳು ? ಯಾವ ವಿಧವಾದ ದೋಷಗಳಿಂದಲು ಕೂಡದೆ ಇರತಕ್ಕ ಆನಂದವೆಂಬದಾಗಿ, ಹೇಳಲ್ಪಟ್ಟಿತು. ಹಾಗಂದರೇ ನೆಂಬದಾಗಿ, ಕೇಳಿದರೆ ವಿಶದವಾಗುವಂತೆ ವಿವರಿಸುವೆನು, ಚನ್ನಾಗಿ ಕೇಳು.

---

ಅದರವೆಚ್ಚಕೆನಿಖಿಲವವುವಲ್ಲದೆನಿಖಿಲವದರತ್ತಣಿಂಗಣ್ಯವಾಗಿ
ರುತಿರುವುದೆ ॥೩॥
ಎಲ್ಲಿಯುದೀಷತ್ಸಮುಲ್ಲಸಿತಮುಂಟದರೊಳೆಲ್ಲರುಂಮೋಹಿಸಿದರಿ
ತರಾನಪೇಕ್ಷಂ ॥೪॥
ಅದುದೋಷಶಬಲವಾಗದ ಪೊಲಾಗಮುದಿಂದೆ ಕೋವಿದರಿಂದರಿ
ದು ನಾನದುವೆಂದುಸುಖಿಸು॥೫॥

೩ ಮೂಲ॥ ವಚನ॥ ಎಲೆಧೀಸಚಿವನೆ, ಅದುದೋಷಶಬಲವಾಗದವೊ ಲೆಂದರೇನು? ಹಾಗಾದರೆ ಕೇಳತಕ್ಕದ್ದು.

೪ ಸಾಂಗತ್ಯ॥ ತಾ॥ ಪುರುಷನು ರಮಣೀಯವಾದ ಪ್ರಾಯವ ನ್ನು ಹೊಂದಿತೇಜಸ್ವಿಗಳಾದ, ಮುಖಾದ್ಯವಯವಗಳಿಂದ ಶೋಭಿಸುತ ಬಲಿಷ್ಠನಾಗಿ, ನವಮನ್ಮಥನಂತೆ ಸೆವುತಿರುವಾಗಲುದಯದ್ಯೌವನಳಾಗಿ, ಮುಖಕಲಮದಿಂವಿರಾಜಮಾನಳಾಗಿ, ಸರ್ವಾಂಗಸುಂದರಿಯಾದ ತರುಣಿಯುನ್ನು ಕಾಣಲು ಆಸಮಯದಲ್ಲಿ ಪುರುಷನ ಮನಸ್ಸಿನೊಳು ಸ್ಫುರಿಸುವ ಅಂದರೆ ಉಬ್ಬಿಹೊಳೆವ ಸಂತೋಷವೆಂಬುವದು ಯಾವದುಂಟೊ ? ಅದೆ ವಿಷಯಾನಂದ ವೆನ್ನಲ್ಪಡುವದು. ॥೧॥ ದೇಹದೊಳು ಯಾವದೊಂದು ವಿಧವಾದ ರೋಗಾದಿ ಉಪಾಧಿಗಳು ಇಲ್ಲದೆ ಮತ್ತು ಮನಸ್ಸಿನಲ್ಲಿ ಯಾವದಾದರೊಂದು ವಿಷಯವಾದ ಚಿಂತೆಯು ಇಲ್ಲ. ಸಮಸ್ತವಾದ ಧಾತುಸಾಮ್ಯವನ್ನು ಹೊಂದಿರಾತ್ರಿಕಾಲದೊಳು ಮಲಗಿರುವ ಸಮಯದೊಳು ಗಾಢನಿದ್ರೆಯುಂಟಾಗಲು ಆಗ "ಸುಷುಪ್ತಿ ಕಾಲದೊಳು ಸಕಲೇಂದ್ರಿಯಗಳು ಉಪರಮವನ್ನು ಹೊಂದುತಿರಲಾಗಿ, ಅಜ್ಞಾನದಿಂದ ವ್ಯಾಪ್ತನಾಗಿರುವ ಪ್ರತ್ಯಗಾತ್ಮನು ಪರಮಾತ್ಮನನ್ನು ಹೊಂದಿಸುಖಾನು ಭವವನ್ನು ಮಾಡುವನು ,, ಎಂಬರ್ಥವುಳ್ಳ ಉಪನಿಷದ್ವಾಕ್ಯಾನುಸಾರವಾಗಿ ಸ್ವಾತ್ಮಾನುಭವಕಾಲದೊಳಿರುವ ಆನಂದವು ಯಾವದುಂಟೊ ? ಅದೆ ಬ್ರಹ್ಮಾನಂದವೆನ್ನಲ್ಪಡುವದು. ಆದರೆ ಮೇಲೆ ದೇಹದಲ್ಲಿ ಧಾತುಸಾಮ್ಯವು ಮನದೊಳಗೆ ಚಿಂತೆಯಿಲ್ಲವೆಯು ಇರಬೇಕೆಂಬದಾಗಿ, ಹೇಳಲು ನಿಮಿತ್ತವೇನಂದರೆ? ರೋಗಾದ್ಯುಪಾಧಿಯಿಂದ ಕೂಡಿ ಧಾತುಸಾಮ್ಯವಿಲ್ಲದಿದ್ದರೆ ಚಿತ್ತದೊಳೇನಾದರು ಚಿಂತೆಯಿದ್ದಾಗ್ಯೂ, ಮಲಗಿಕೊಂಡಿರುವ ಕಾಲದಲ್ಲಿ ಸ್ವಪ್ನಾವಸ್ಥೆಯಿರುವದಲ್ಲದೆ ಗಾಢನಿದ್ರೆಯುಂಟಾಗಿ ಆತ್ಮಾನಂದ ವುಂಟಾಗುವದಿಲ್ಲವು. ಆದುದರಿಂದಲೆ ಚಿಂತಾಭಾವವು, ಧಾತು

೪ ಮೂ॥ ಸಾಂಗತ್ಯ॥ ಹರೆಯಾದಿ ಸಕಲಾವಯವ ಶೋಭಿತನಾಗಿ ನಿರ್ಜನ ಬೀನಾಗಿರುವಾಗ । ತರುಣಿಯುಲಾಭವಾದರೆ ಚಿತ್ತದಲಿ ವಿಸ್ಫುರಿಸುವದೆ ವಿಷಯಾನಂದ ॥೧॥
ದೇಹದೊಳಗೆ ರೋಗವಿಲ್ಲದೆ ಮನದಿ ವ್ಯಾಮೋಹವಿಲ್ಲದೆ

ಸಾಮ್ಯವು ಇರಬೇಕೆಂಬದಾಗಿ, ಹೇಳಲ್ಪಟ್ಟಿತು. ಇದಲ್ಲದೆ ಸುಷುಪ್ತಿಕಾಲಿಕವಾದ ಆನಂದವೆ ಬ್ರಹ್ಮಾನಂದವಾದರೆ ಅಂಥಾ ಆನಂದವು ಯಾಕೆ ತೋರುವದಿಲ್ಲವೆಂಬದಾಗಿ, ಕೇಳ್ವೆ! ಬಂದರೆ ಆಸಮಯದಲ್ಲಿ ಪ್ರತ್ಯಗಾತ್ಮನು ಅಜ್ಞಾನರೂಪವಾಗಿರುವ ಕಾರಣ ಶರೀರದಿಂದ ಆಚ್ಛಾದಿತನಾಗಿರುವದರಿಂದ ಆನಂದ ವಿಸ್ಫೂರ್ತಿಯು ಉಂಟಾಗುವದಿಲ್ಲವು. ವಿಚಾರಾನುಭವಗಳಿಂದ ಸ್ವರೂಪ ಜ್ಞಾನವುಂಟಾಗಲು ಆಗ ಕಾರಣ ಶರೀರವಾದ ಅಜ್ಞಾನದ ಸಂಬಂಧವು ತಪ್ಪಿಹೋಗುವದಾಗಿ ಆನಂದ ವಿಸ್ಫೂರ್ತಿಯು ನಿತ್ಯವಾಗಿ ಉಂಟಾಗುವದು. ಅದಕ್ಕಾಗಿಯೆ ಮಹನೀಯರೆಲ್ಲರು ಮಹಾಪ್ರಯತ್ನವನ್ನ ಮಾಡಬೇಕಾಗಿರುವದು. ಪ್ರಸಂಗ ಸಂಗತಿಯಿಂದ ಈ ಅರ್ಥವು ಉದಹರಿಸಲ್ಪಟ್ಟಿತು. ಈಮೇಲೆ ಹೇಳಿದ ಆನಂದವೆಬ್ರಹ್ಮಾನಂದ ವೆಂಬದಾಗಿ,ಶಾಸ್ತ್ರಪಾರಂಗತರಾಗಿಯು, ಅನುಭವ ಚತುರರಾಗಿಯು, ಇರುವ ಆರ್ಯರು ಹೇಳುವರು ‖ ೧ ‖ ಪೂರ್ವದೊಳುದಹರಿಸಿದ ಮಹಾಸುಷುಪ್ತಿಯೊಳಿರುವ ಸಮಯದಲ್ಲಿ, ಇತರ ವಿಧವಾದ ಯಾವದಾದರೊಂದು ತೊಂದರೆಯಿಂದ ಎಚ್ಚರವನ್ನು ಹೊಂದದೆನಿರುಪಾಧಿಕವಾಗಿ ತನ್ನಷ್ಟಕ್ಕೆತಾನೆ ಎಚ್ಚರಗೊಂಡ ಉತ್ತರಕ್ಷಣದಲ್ಲಿಯೆ ಪ್ರತ್ಯಗಾತ್ಮನು ಮನೋವೃತ್ತಿಯಿಂದೊಡಗೂಡಿ ಆಗಿನ ವಿಸ್ಫೂರ್ತಿಯಿಂದ ಹೊಂದುವದೇ ವಾಸನಾನಂದವೆನ್ನಲ್ಪಡುವದು. ಇದು ಅನುಭವೈಕವೇದ್ಯವಾಗಿರುವದು ‖೩‖ ವ್ಯವಹಾರ ವಿಷಯವಾಗಿ ದೃಶ್ಯವಾಗಿರುವ ಚರಾಚರಾತ್ಮಕವಾದ ಈ ಸಮಸ್ತ ಪ್ರಪಂಚವು ಕೃತಕವಾಗಿರುವದರಿಂದಲೇ, ನಾಶವನ್ನು ಹ

---

ಮುಲಗಿರಲು ತಾಹೊಂದುವದೆ ಬ್ರಹ್ಮಾನಂದ ವೆಂದಾರ್ಯವ್ಯವಹಾರ ಮುಂಟು ಶಾಸ್ತ್ರದಲಿ ‖೧‖

ಆನ್ನೊಂದ ರಟ್ಟುಳಿಯಿಂದೆಚ್ಚರಾಗದೆ ತಾನೆ ತಿಳಿದ ನಿದ್ರೆಯಲಿ। ಕಾಣಿಸಿ ಕೊಂಬುದೆ ವಾಸನಾನಂದವು ಮಾನಸವೃತ್ತಿಯ ಕೂಡೆ ‖೨‖

ತೋರುವದೆಲ್ಲ ನಾಶವನೈದು ತಿಹುದೆಂಬಪಾರ ಪಾರ್ಥಿವಧಿಷಣೆ

ಡೆಯುವದೆಂಬದಾಗಿ, ಕ್ರಮಕ್ರಮವಾಗಿದಾರ್ಢ್ಯವನ್ನುಹೊಂದಿದಭಾವನೆಯಿಂದ ಆವಿರ್ಭವಿಸಿದ, ದಾರೇಷಣ, ಪುತ್ರೇಷಣ, ವಿತ್ತೇಷಣಗಳೆಂಬ ಈ ಷಣತ್ರಯವನ್ನು ತೊರೆದು, ಇರುವದೆಮುಖ್ಯವಾದ ಆನಂದ ವೆಂಬದಾಗಿ, ಹೇಳಲ್ಪಡುತ್ತದೆ. ॥೪॥ ಸವಿಕಲ್ಪಕ, ನಿರ್ವಿಕಲ್ಪಕ, ಸಮಾಧಿಗಳು ಅಂದರೆ ಸಬೀಜ ಸಮಾಧಿ, ನಿರ್ಬೀಜಸಮಾಧಿಗಳೆಂಬ ಈ ಎರಡು ಸಮಾಧಿಗಳಿಂದಲು, ಇನ್ನು ಬ್ರಹ್ಮಾತ್ಮೈಕ್ಯೋಪ ಯೋಗವಾಗಿ, ಶಾಸ್ತ್ರದಲ್ಲಿ ವಿಹಿತವಾಗಿರುವ ಸಂತತ ಯೋಗಾಭ್ಯಾಸದ ಬಲದಿಂದಲು, ಚಿತ್ತವು ತನ್ನ ಬಗೆಬಗೆಯಾದವೃತ್ತಿಗಳೊಂದಿಗೆ ಲಯವನ್ನು ಪಡೆದ ಬಳಿಕ ಅಂದರೆ ಚರಮವಾದ ಚಿತ್ತದ ಅಖಂಡಾಕಾರ ವೃತ್ತಿಯೊಳುಪ್ರತಿಫಲನವಾಗುವದರ ಮೂಲಕ ತೋರುವ ಆನಂದವು ಯಾವದುಂಟೊ ? ಅದೆ ನಿಜಾನಂದ ವೆಂಬದಾಗಿ ಆಗಮ ಕೋವಿದರಾಗಿಯೂ, ಅನುಭವ ಶೂರರಾಗಿಯು, ಇರುವ ಪಂಡಿತರು ಅಂಗೀಕರಿಸಿರುವರು. ॥೫॥ ಪೂರ್ವದಲ್ಲಿ ಹೇಳಿದಂತೆ ಅಖಂಡಾಕಾರವಾದ ವೃತ್ತಿಯುಂಟಾಗಲು ತರುವಾಯ ಇತರ ವೃತ್ತಿಗಳು ಉಂಟಾಗುವದಿಲ್ಲವು, ಇದೆ ಚರಮಸಾಕ್ಷಾತ್ಕಾರವೆನ್ನಲ್ಪಡುವದು. ಈ ಚರಮ ಸಾಕ್ಷಾತ್ಕಾರ ವುಂಟಾದ ಉತ್ತರಕ್ಷಣದಲ್ಲಿಯೆ ಬೆಂಕಿಯು ಆರಿಹೋದ ಬಳಿಕ ಮೊದಲು ಆ ಬೆಂಕಿಯಿಂದಉಂಟಾಗಿದ್ದ ಹೊಗೆಯು ಆಶ್ರಯ ವಿಲ್ಲದೆ ಯಿರುವದರಿಂದ ತನ್ನಷ್ಟಕ್ಕೆ ತಾನೆ ಹ್ಯಾಂಗೆ ನಾಶವಾಗಿ ಹೋಗುವದೊ ? ಅದರಂತೆಯೆ ಈ ಚರಮವೃತ್ತಿಯು ತನ್ನಷ್ಟಕ್ಕೆ ತಾನೆಲಯವಂ ಪಡೆಯುವದು, ತರುವಾಯು ನಿರುಪಾಧಿಕವಾ

---

ಯಲಿ ॥ ತೋರುವದೆ ಮುಖ್ಯಾನಂದ ಮೆನಿಪುದು ಮೋಕ್ಷಾರಂ
ಭಿಸದಿರರೀಷಣದಿ ॥೪॥

ಸವಿಕಲ್ಪನಿರ್ವಿಕಲ್ಪಕ ಸಮಾಧಿಗಳಿಂದ ವಿವಿಧ ಯೋಗಾಭ್ಯಾಸ
ದಿಂದ । ಸವೆದಚಿತ್ತದಲಿ ತೋರ್ಪುದೆ ನಿಜಾನಂದವೆಂದವಗಾಹಿ
ಸಿದರು ಬಲ್ಲವರು ॥೫॥

ಪರಿಶುದ್ಧಚಿತ್ತವೃತ್ತಿಯುದೆಸೆಯಿಂದ ಶ್ರೀಗುರುಗಳ ಮುಖವಿ

ದ ಸ್ವಾತ್ಮಾನುಭವ ರೂಪವಾದ ಆನಂದ ವುಂಟಾಗುವದು. ಇದು ಸದ್ಗುರೂಪದಿಷ್ಟವಾದ ವಾಕ್ಯಾರ್ಥ ಶ್ರವಣದಿಂದ ಅಭ್ಯಾಸಮಾಡಿದ ನಿಧಿಧ್ಯಾಸನದಿಂದ ವುಂಟಾಗುವದು ಈ ಪ್ರಕಾರವಾದ ಪ್ರತ್ಯಗಾತ್ಮಪರಮಾತ್ಮೈಕ್ಯದಿಂದುಂಟಾಗುವ ಆನಂದವೇ ಅದ್ವೈತಾನಂದ ವೆಂಬದಾಗಿ, ಶಾರೀರ ಶಾಸ್ತ್ರವನ್ನು ಅಂದರೆ ಬ್ರಹ್ಮವಿಚಾರಮಾಂಸಾಶಾಸ್ತ್ರವನ್ನು ಬಲ್ಲಕೋವಿದರು ಹೇಳುವರು. ॥೬॥ ರುಗ್ಯಜುಸ್ಸಾಮಾಥರ್ವಣಗಳೆಂಬ ನಾಲ್ಕುವೇದಗಳಿಗು ಶಿರಸ್ಸುಗಳಾಗಿರುವ ಉಪನಿಷತ್ತುಗಳಲ್ಲಿ ಹೇಳಲ್ಪಟ್ಟಿರುವ ನಾಲ್ಕುಮಹಾ ವಾಕ್ಯಗಳು ಸದ್ಗುರುವಿನಿಂದ ಉಪದೇಶ ಮಾಡಲ್ಪಟ್ಟವುಗಳಾಗುತ್ತಿರಲಾಗಿ, ಮೊದಲು ಖಂಡಶಾಬ್ದಬೋಧೆಯುಂಟಾಗಿ ಬಳಿಕ ಕ್ರಮವಾಗಿ, ಅಖಂಡ ಶಾಬ್ದಬೋಧೆ ಯುಂಟಾದ ಬಳಿಕ ಅಚಿತ್ತ್ವವೆಂಬ ಅಜ್ಞಾನವು ತೊಲಗಿಹೋಗಿ ಅಖಂಡ ಚಿದಾಭಾನ ವುಂಟಾಗುವದು, ಸತ್ವಗುಣ ಪ್ರಧಾನವಾದ ಮಹಾವಾಕ್ಯ ಶ್ರವಣ ದಿಂದುಂಟಾಗುವ ಈ ಆನಂದವನ್ನು ಸದ್ವಿದ್ಯಾಜನ್ಯವಾದ ಆನಂದ ವನ್ನಾಗಿ, ಮಹನೀಯರೆಲ್ಲರು ಹೇಳುತ್ತಿರುವರು. ... ... ... ... ... ॥೭॥

೫ ವ ॥ ತಾ ॥ ಎಲೈ ಮನಃ ಪ್ರಭುವೇ! " ತನ್ನ ಆನಂದಕ್ಕೋಸ್ಕರವೇ ಸರ್ವವೂ ಪ್ರಿಯವಾಗಿರುವದು ,, ಎಂಬರ್ಥವುಳ್ಳ ಉಪನಿಷದ್ವಚನವು ಘಂಟಾ ಘೋಷವಾಗಿ ಹೊಗಳುತಿರುವದು. ಆದ್ದರಿಂದ ಈ ಶ್ರುತ್ಯರ್ಥದ ಪ್ರಾಮಾಣ್ಯಾನುಸಾರವಾಗಿಯಾವನೊಬ್ಬನಿಗುತ

---

ಜೀವನಲಿ । ಪರಮನೊಳೈಕ್ಯಮದ್ವೈತಾನಂದ ಮೆಂದರುಶಾರೀರ ಕಶಾಸ್ತ್ರಧರರು ॥೬॥

ತತ್ವಮಸ್ಯಾದಿಚತುರ್ವೇದ ಚೋದಿತ ಸಾತ್ವಿಕ ವಾಕ್ಯಮೊತ್ತರಿಸೆ । ಚಿತ್ವಭಾಗದಲಿ ವಿದ್ಯಾನಂದವೆಂದು ಮಹತ್ವಮುಳ್ಳ ವರೆಣಿಸುವರು ॥೭॥

೫ ಮೂಲ॥ ವಚನ॥ ಕೇಳೈಮನಶ್ಚಕ್ರವರ್ತಿಯೆ ? ತನ್ನ ಕಾಮುನಕ್ಕೋಸುಗಂಭಾರ್ಯೆಯು ಪ್ರಿಯಳಲ್ಲದೆ, ಭಾರ್ಯೆಯ ಕಾಮ

ನ್ನ ಆನಂದಕ್ಕೋಸ್ಕರ ಹೆಂಡತಿಯು ತನಗೆ ಪ್ರಿಯಳಾಗುವಳಲ್ಲದೆ,
ಆ ಹೆಂಡತಿಯು ತನ್ನ ಆನಂದಕ್ಕೋಸ್ಕರ ತಾನು ಪ್ರಿಯಳಲ್ಲ. ಅಂ
ದರೆ ತನ್ನ ಆನಂದಕ್ಕೋಸ್ಕರ ತನ್ನ ಗಂಡನಿಗೆ ತಾನು ಪ್ರಿಯಳಾ
ಗುವದಿಲ್ಲವು. ಹೀಗೆಯೆ ಪತ್ನಿಯು ತನ್ನ ಆನಂದಕ್ಕೋಸ್ಕರವಾಗಿ ತ
ನ್ನ ಗಂಡನು ತನಗೆ ಪ್ರಿಯನಾಗುತ್ತಾನಲ್ಲದೆ ತನ್ನ ಗಂಡನು ಅವನ
ಆನಂದಕ್ಕೋಸ್ಕರ ಅವನು ಪ್ರಿಯನಲ್ಲ. ಇದೇ ಮೇರಿಗೆ ತನ್ನ ಆನಂದ
ವನ್ನು ಉದ್ದೇಶಮಾಡಿಯೇ ತಾನು ಸಂಪಾದಿಸಿದ ಭೂಮಿಯು, ತಾ
ನು ಆರ್ಜಿಸಿದ ದ್ರವ್ಯವು, ತಾನು ಸಂಪಾದನೆಮಾಡಿದ ಧಾನ್ಯಾದಿ ಪದಾ
ರ್ಥಗಳು, ತಾನು ಘಳಿಸಿದ ರಾಜ್ಯಾದಿಗಳು ಇವೆಲ್ಲವು ತನಗೆ ಪ್ರಿಯಗಳ
ಲ್ಲದೆ ಈ ದ್ರವ್ಯವು, ಭೂಮಿಯು, ಬಂಧುಗಳು, ರಾಜ್ಯ ಮೊದಲಾದವು
ಗಳೆಲ್ಲವು, ತಮ್ಮ ತಮ್ಮ ಆನಂದಕ್ಕೋಸ್ಕರ ತಾವು ಪ್ರಿಯಗಳಲ್ಲವು. ಈ
ರೀತಿಯಾಗಿ ತನಗೆ ಪ್ರೀತಿಪಾತ್ರಗಳಾದ ಇಂದ್ರಿಯಾರ್ಥಗಳಲ್ಲಿ ತಾನೆ
ಪ್ರಿಯಶ್ರೇಷ್ಠನೆಂಬದಾಗಿ ತಿಳಿದ ಸಮಯದಲ್ಲಿ ಉಂಟಾಗುವ ಆನಂ
ದವು ಯಾವದುಂಟೋ ? ಆ ಆನಂದವೆ ಆತ್ಮಾನಂದವೆನ್ನಲ್ಪಡುವದು.
ಈ ಎಂಟಾನಂದಗಳಿಗು ವಿಚ್ಛಿತ್ತಿ ಯೆಂಬುವದು ಇಲ್ಲವೆ ? ಎಂದಿಗೂ
ಉಂಟಾಗುವದಿಲ್ಲ. ಏತಕ್ಕೆಂದು ಕೇಳ್ವೆಯುಂಟಾದರೆ, ಉತ್ತರವನ್ನು
ಹೇಳುವೆನು ಕೇಳು, ಲೋಕದಲ್ಲಿ ಸುಖಸಾಧಕಗಳಾದ ಸಮಸ್ತ ಸಾ
ಮಗ್ರಿಗಳು ತನಗೆ ಸಿದ್ಧವಾಗಿರುವ ಕಾಲದಲ್ಲಿ, ಯಾವದಾದರೊಂ
ದು ನಿಮಿತ್ತದಿಂದ ತಾನು ಸಂಪಾದನೆಮಾಡಿದ ಪದಾರ್ಥಗಳೆಲ್ಲೊಂ
ದಾಗಿ ಸುಖಸಾಧಕವಾಗಿಯೂ ಇರುವ ಭೂಮಿಯನ್ನು ಶತ್ರುಗಳು

---

ಕ್ಕೋಸುಗಂ ಭಾರ್ಯೆಯುಂ ಪ್ರಿಯಳಲ್ಲ. ಈ ತೆರದಿಂ ಭಾರ್ಯೆಯುಂ ತನ್ನ
ಕಾಮನಕ್ಕೋಸುಗಂ ಪತಿಯುಂ, ಪ್ರಿಯನಲ್ಲದೆ, ಪತಿಯ ಕಾಮ
ಕ್ಕೋಸುಗಂ ಪತಿಯುಂ ಪ್ರಿಯನಲ್ಲವು. ಈ ಪಾಂಗಿನಿಂ, ತನ್ನ
ಕಾಮಕ್ಕೋಸುಗಂ ವಿತ್ತ ಕ್ಷೇತ್ರ, ರಾಜ್ಯ, ಬಂಧು, ಧಾನ್ಯಾದಿ
ಗಳು ತಮ್ಮ ತಮ್ಮ ಕಾಮನಂಗಳಿಗೋಸುಗಂ ತಾವು ತಾವು ಪ್ರಿ

ಅಪಹರಿಸುತ್ತಿರಲಾಗಿ, ಆ ಸಮಯದಲ್ಲಿ ಈ ಪೂರ್ವೋಕ್ತವಾದ ಸುಖಸಾಧಕ ಸಾಮಗ್ರಿಗಳನ್ನು ಪಡೆದಿದ್ದ ಗೃಹಸ್ಥನು ಯತ್ನವಿಲ್ಲದೆ ಇರುವದರಿಂದ, ಈ ಭೂಮಿಯು ಹೋದರೆ ಹೋಗಲಿ, ನಾನು ಸಂಪಾದಿಸಿರುವ ದ್ರವ್ಯದಿಂದಲೆ ಆನಂದವನ್ನು ಪಟ್ಟುಕೊಂಡು ಇರೋಣ ಎಂಬದಾಗಿ ಎಣಿಸಿ ಆ ಹಣವನ್ನು ಗುಪ್ತವಾಗಿ ಇಟ್ಟುಕೊಂಡು ಇರುವನು, ಆ ದ್ರವ್ಯವೂ ಯಾವದಾದರೊಂದು ಕಾರಣದಿಂದ ಪೂರ್ವದಲ್ಲಿ ಹೇಳಿದಂತೆ ಯಾರಿಂದಲಾದರು ಅಪಹರಿಸಲ್ಪಟ್ಟದ್ದಾಗುತ್ತಿರಲಾಗಿ, ಆಗಲು ಯತ್ನವಿಲ್ಲದಿರುವದರಿಂದಲೆ ಆ ದ್ರವ್ಯದ ವಿನಾಶಕಾಲದಲ್ಲಿ ಉಳಿದಿರುವ ಬಂಧುಗಳಿಂದಲಾದರೂ ಅನಂದ ಪಡೋಣವೆಂಬದಾಗಿ ನಿಶ್ಚಯಿಸಿ ಆ ಬಂಧುಗಳನ್ನು ಆಶ್ರಯಿಸಿಕೊಂಡಿರುವನು. ಆ ಬಂಧುಳಗು ದೈವಯೋಗದಿಂದ ಕಾಲಕ್ರಮವಾಗಿ ಹಿಂದೆ ಉದಹರಿಸಿದಂತೆ ವಿನಾಶಮಂ ಪಡೆಯುವಂಥವರಾಗುತಿರಲಾಗಿ ಹತಶೇಷರಾದ ಹೆಂಡರು ಮಕ್ಕಳಿಂದಲಾದರು ಆನಂದವನ್ನನುಭವಿಸಿ ಕೊಂಡಿರೋಣವೆಂಬದಾಗಿ ಆ ಪತ್ನೀ ಪುತ್ರಾದಿಗಳನ್ನು ಹೊಂದಿಕೊಂಡಿರುವನು, ಹೀಗೆಯೇ ಕ್ರಮಕ್ರಮವಾಗಿ ಆ ದಾರಾಪುತ್ರಾದಿಗಳೂ ಕಾಲಾಧೀನರಾಗುತಿರಲಾಗಿ, ಆಗ ತನಗಿಂತಲು ಭಿನ್ನವಾದ ಸರ್ವವೂ ನಾಶವಾಗಿ ಹೋಗಿರುವದಾದ ಕಾರಣ ಅವುಗಳ ನಾಶಕಾಲದಲಿ ಈ ಉಳಿದಿರುವ ದೇಹವಿದ್ದರೆ ಸಾಕು ಇದರಿಂದಲೇ ಆನಂದಪಡೋಣವೆಂಬದಾಗಿ ನಿಂತಿರುವ ಶರೀರವನ್ನೇ

---

ಯಂಗಳಲ್ಲ. ಹೀಗೆ ತನಗೆ ಪ್ರಿಯವಿಷಯಂಗಳಾದ ವಿಷಯಗಳಲ್ಲಿ ತಾನ ಪ್ರಿಯತಮನೆಂದರಿದಾಗ ಬಂದಾನಂದವೆ ಆತ್ಮಾನಂದವೆನಿಸುವದು ಈ ಆನಂದಾಷ್ಟಕಂಗಳಿಗೆ ಸಂಚಾರವಿಲ್ಲವೆ ? ಎಂದೆಂದಿಗೂ ಇಲ್ಲ. ಏಕೆ?ಹಾಗಾದರೆ ಕೇಳು?ತನಗೆಪ್ರಿಯಂಗಳೊಳಾವುದಾದರೊಂದಪಾಯದಿಂಕ್ಷೇತ್ರಂಪರಾಕ್ರಾಂತವಾಗೆಬಳಿಕಿದು ಪೋದರೆ ಪೋಗಲಿಯೆಂದೊಬ್ಬಾನೊಬ್ಬ ಸಂಸಾರಿಯು ತಾಂಘಳಿಸಿದ ದ್ರವ್ಯಮಂ ಬೈಚಿಡುವನು. ಆ ದ್ರವ್ಯಪೋಗುವಲ್ಲಿ ಬಂಧುಗಳಂ ಪಡದಿರ್ಪನು. ಅವರ್ಕಳವಿಯೋಗದಲ್ಲಿ ದಾರಾ

ಸಾಧ್ಯವಾದ ಮಟ್ಟಿಗೂ ವಿಶೇಷವಾಗಿ ಪೋಷಿಸಿಕೊಳ್ಳುತಲಿರುವನು. ಹೀಗಿರುವ ಸಮಯದಲ್ಲಿ ಆ ಸ್ಥೂಲ ಶರೀರವನ್ನಾಶ್ರಯಿಸಿಕೊಂಡಿರುವ ಅವಯವಗಳು ನಾಶವಾಗಿ ಹೋಗುವ ಸಂದರ್ಭದಲ್ಲಿ ಈ ದೇಹಾಶ್ರಿತಗಳಾದ ಚಕ್ಷುರಾದಿ ಇಂದ್ರಿಯಗಳಿಂದಲೇ ಆನಂದಿಸೋಣವೆಂಬದಾಗಿ ನಿಂತಿರುವ ಇಂದ್ರಿಯಗಳನ್ನೆ ಚೆನ್ನಾಗಿ ಕಾಪಾಡಿಕೊಳ್ಳುತಲಿರುವನು. ಅನಂತರದಲ್ಲಿ ಆ ಇಂದ್ರಿಯಗಳು ತಮ್ಮ ತಮ್ಮ ಪಾಟವದಿಂದ ವಿರಹಿತಗಳಾಗಿ ಶೈಥಿಲ್ಯವನ್ನು ಹೊಂದುತಬರಲಾಗಿ ಆಗ ಪ್ರಾಣಗಳು ಮಾತ್ರವಿದ್ದರೆ ಸಾಕು ? ಈ ಪ್ರಾಣಗಳಿಂದಲೆ ಆನಂದಪಡೋಣವೆಂಬದಾಗಿ ಎಣಿಸಿ ಪ್ರಾಣಗಳನ್ನು ಸಂರಕ್ಷಣೆಮಾಡಿಕೊಳ್ಳುವದರಲ್ಲಿಯೇ ವಿಶೇಷ ಜಾಗರೂಕನಾಗಿರುವನು. ಆ ಪ್ರಾಣಗಳಿಗೂ ವಿನಾಶವುಂಟಾಗುವ ಸಂದರ್ಭವು ಬರುತ್ತಿರಲಾಗಿ ಮಾನವೊಂದಿದ್ದರೆ ಸಾಕು, ಈ ಮಾನದಿಂದಲೆ ಆನಂದಿಸೋಣವೆಂಬದಾಗಿ ತಿಳಿದು ಆ ಮಾನದಕಾಪಾಡುವಿಕೆಯಲ್ಲಿಯೇ ತತ್ಪರನಾಗಿರುವನು. ಈ ದುಷ್ಟವಾದ ಮಾನಾಭಿಮಾನಗಳಿಂದ ನಿನಗೆ ಪರಮ ಪುರುಷಾರ್ಥವಾದ ಮೋಕ್ಷವು ಬರಲಾರದೆಂಬದಾಗಿ ಉಪದೇಶಿಸುವ ಸದ್ಗುರುಗಳ ವಾಕ್ಯದಿಂದಲೂ ಅದೇ ಅರ್ಥವನ್ನು ಹೇಳುವ ವೇದವಾಕ್ಯಗಳಿಂದಲೂ, ಆ ಮಾನಾಭಿಮಾನಗಳನ್ನು, ಅಶೇಷ ವಾಸನಾಜನ್ಯವಾದ ಅನುರಾಗ ಸಂತತಿಯನ್ನು ಬಿಟ್ಟು ನಿತ್ಯವಾಗಿಯೂ, ಸರ್ವೋತ್ತಮವಾಗಿಯೂ, ಅಪರಿಮಿತಾನಂದ ಜನಕವಾಗಿಯೂ, ಇರುವಮೋಕ್ಷವನ್ನು ಹೊಂದುವದರಲ್ಲಿ ಆತ್ಯಾಸಕ್ತನಾಗಿರುವನು, ಆ ಮೋಕ್ಷದಲ್ಲಿಯಾದರೋ ತಾನೊಬ್ಬನೆ

---

ಪುತ್ರಾದಿಸ್ವಜನ ಮಾತ್ರಮಂ ಕೂಡಿಕೊಂಡಿರ್ಪನು. ಆದೇಹಾವಯವವಿನಾಶ ಕಾಲದಲ್ಲಿ, ಇಂದ್ರಿಯಂಗಳಂ ಪಾಲಿಸಿಕೊಂಡಿರ್ಪನು. ಪ್ರಾಣಂಗಳಿಗತ್ಯಯಕಾಲದಲ್ಲಿ ಮಾನಮಂ ಪೊರೆಯುತಿರ್ಪನು ಆಮಾನಾಭಿಮಾನಗಳಿಂ ನಿನಗೆ ಮೋಕ್ಷಂಸಿದ್ಧಸದೆಂಬ ಶ್ರುತಿಗುರುವಾಕ್ಯಂಗಳಿಂದ ಮಾನಾಪಮಾನಾನುರಾಗಂಗಳಂ ಬಿಟ್ಟು ಮೋಕ್ಷಮಂಕಾಪಾಡುವನು.ಆಮೋಕ್ಷದೋಳ್

ಆನಂದಸ್ವರೂಪವಾಗಿ ಇರುತ್ತಾನಾಗಿ ಸ್ವಾತ್ಮಾನಂದ ಸ್ವರೂಪವಾದ ಆ ಸುಖವು ಯಾವ ಯಾವ ಅರ್ಥಗಳು, ಮತ್ತು ಇತರವಾದ ಎಂಥ ಅವಶ್ಯಕರ್ತ್ತವ್ಯಗಳು ಬಂದಾಗ್ಯೂ ಆಗಲೆಲ್ಲಾ ಪ್ರತ್ಯಗಾತ್ಮನಾದ ತನ್ನನ್ನು ಬಿಟ್ಟು ಬೇರಿಲ್ಲವಾಗಿ ಆಸುಖವೆ ತಾನೆಂಬುದು ಪರಮಸಿದ್ಧಾಂತವಾಗಿರುವದು. ಆದರೆ ಪೂರ್ವದಲ್ಲಿ ಉದಹರಿಸಿದ ಎಂಟುಬಗೆಯಾದ ಆನಂದಗಳು ಸೋಪಾಧಿಕಗಳಾಗಿರುವವೆ ? ಅಂದರೆ ಉಪಾಧಿಯಿಂದ ಸಹಿತವಾದವುಗಳೆ ? ಎಂದರೆ ! ಹೌದು, ಅದೆಂತೆಂದರೆ ಕಲ್ಪಿತವಾಗಿರ್ವವದು ಯಾವಯಾವದುಂಟೊ ? ಅದೆಲ್ಲವುದುಃಖವೆ ಹಾಗಕಲ್ಪಿತವಾಗದೆ ಪರಮಾರ್ಥವಾಗಿರುವದು ಯಾವದುಂಟೊ ? ಅದೆಸುಖವೆನ್ನಲ್ಪಡುವದು. ಅದು ಹ್ಯಾಗೆಂದರೆ ? ಚಿತ್ತವೆಂಬುವದು ಅವಿದ್ಯಾಕಾರ್ಯವಾಗಿರುವದರಿಂದಲೆ ಗುಣತ್ರಯಾತ್ಮಕವಾಗಿರುವುದು. ಆದ್ದರಿಂದ ಈ ಚಿತ್ತದ ವೃತ್ತಿಗಳೂ ಹಾಗೆಯೆ ಗುಣತ್ರಯಾತ್ಮಕಗಳಾಗಿರುವವು. ಆದರೆ ರಜಸ್ತಮೊಗುಣಗಳಿಂದ ಮಲಿನವೃತ್ತಿಗಳುಂಟಾದ ಸಂದರ್ಭದೊಳು ಕಲ್ಪಿತ ಸುಖದುಃಖಗಳು ತೋರಿಬರುವವು. ಇಂಥಸುಖದುಃಖಗಳಿಲ್ಲದಿರುವ ಕಾಲದಲ್ಲಿ ಕೇವಲಸತ್ವಪ್ರಧಾನವಾದ ವೃತ್ತಿಯು ಬೆಳಗುತಿರುವದು. ಇಂತಪ್ಪ ಸತ್ವಪ್ರಧಾನವಾದ ಚಿತ್ತವೃತ್ತಿಯೊಳು ಬ್ರಹ್ಮಾನಂದವೆ ಸ್ಫುರಿಸುತಿರುವದು. ಹಾಗೆ ಸಂಕಲ್ಪ ವಿಕಲ್ಪಾಭಾವದಿಂದೊಡಗೂಡಿದ ಚಿತ್ತದಲ್ಲಿ ಕಲ್ಪಿತವಾದ ದುಃಖವು ತೋರುವದಿಲ್ಲವು. ತನ್ನಲ್ಲಿ ತನಗೆ ಉಂಟಾಗಿರುವ ಪ್ರೀತಿಯು ಪ್ರೇಯಸ್ಸು ಎನ್ನ

ತಾನೋರ್ವನೆ ಸುಖಸ್ವರೂಪಿಯಾಗಿರ್ಪನಾಗಿ ಆ ಸುಖವುಮೇಣಾವ ಪ್ರಯೋಜನಂಗಳೊಳಾವಶ್ಯಕತ್ವಂ ಬಂದರು ತನ್ನಬಿಟ್ಟರದಾಗಿ ಸುಖಮೆತಾನೆಂಬುದೆ ಸಿದ್ಧಾಂತಂ ಆದರೆ ಸುಖಂಗಳಿವು ಔಪಾಧಿಕಗಳೆಂಬಂತೆ ತೋರುತಿಥೆಯಲ್ಲ? ಅಲ್ಲ. ಕೃತ್ರವೆ ದುಃಖ ಸಹಜವೆ ಸುಖ ಹೀಗೆ ಹರ್ಷವಿಷಾದಂಗಳಿಲ್ಲದೆ ಸ್ಥಿತಮಿತವಾಗಿರ್ದ್ದಾಗ ಮನಸ್ಸಿನಲ್ಲಿ ಇಹಸುಖಂತೋರುತ್ತದೆ ಅದುರೋಗಾಧಿಯಿಂದಲ್ಲಿ ಮನಸ್ಸಿನ ವೃತ್ತ್ಯಭಾವಕಾಲದಲ್ಲಿ ದುಃಖಂತೋ

ಲ್ಪಡುವದು, ತನಗೆ ಅನುಕೂಲವಾಗಿರುವ ದ್ರವ್ಯಗಳಲ್ಲಿರುವ ವಿಶ್ವಾಸವು ಯಾವದುಂಟೋ! ಅದು ಪ್ರೀತಿಯೆನಿಸಿ ಕೊಳ್ಳುವದು. ಮತ್ತು ಪ್ರೀತಿಪ್ರೇಯಸ್ಸುಗಳಾಗದೆಯು, ಹಾಗೆದ್ವೇಷಮಾಡುವದಕ್ಕೆ ಆಗಲಿ ಇನ್ನು ಉಪೇಕ್ಷೆ ಮಾಡುವದಕ್ಕೆ ಆಗಲಿ, ಕ್ರಮವಾಗಿ, ಗೋಚರಗಳಾದ ಹುಲಿಯಲ್ಲಿಯು, ಮತ್ತು ಜೀರ್ಣವಾಗಿ ಬಿದ್ದಿರುವ ತೃಣದಲ್ಲಿಯು, ಪ್ರೀತಿಯೆಂಬುವದು ಉಂಟಾಗುವದಿಲ್ಲವು. ಈ ಹುಲಿಹುಲ್ಲು ಮೊದಲಾದ ಪದಾರ್ಥಗಳಲ್ಲಿ ವಿಶ್ವಾಸ ಬರದಿರುವದಕ್ಕೆ ನಿಮಿತ್ತವೇನಂದರೆ! ಇದು ಆಯಾಯ ಪದಾರ್ಥಗಳ ಶರೀರ ಮಾತ್ರದಿಂದುಂಟಾಗಿರುವ ನಿಯಮವಲ್ಲ. ಮತ್ತೇನೆಂದರೆ ಇದು ವೃತ್ತಿನಿಯಮವೆನಿಸಿ ಕೊಳ್ಳುವದು. ಅದೆಂತೆಂದರೆ? ಈಗ ಹುಲಿಯೆಂಬುವದು ನಮ್ಮಯೆದುರಿಗೆ ಬಂದರೆ ಆಗ ನಮಗೆ ಅದರಲ್ಲಿ ವಿಶೇಷವಾದ ದ್ವೇಷಬುದ್ಧಿಯುಂಟಾಗುತಲಿಧೆ. ಇದೆ ಹುಲಿಯನ್ನು ಬಾಲ್ಯದಿಂದಲು ಮಮತೆಯಿಂದಕಾಪಾಡುತ ಬಂದಿದ್ದರೆ ಆಗಲದು ಪ್ರೀತಿವಿಷಯವಾಗುತಲಿತ್ತು. ಆದುದರಿಂದಲೆ ಇದು ವೃತ್ತಿನಿಯಮವೆಂಬದಾಗಿಯೆ ಅರಿಯಬೇಕು. ಆದಕಾರಣದಿಂದಲೇ: ಶ್ಲೋ॥ ಆತ್ಮಾಪ್ರೇಯಾನ್ಪ್ರಿಯಶ್ಶೇಷಃದ್ವೇಷೋಪೇಕ್ಷೆತದನ್ಯಯೋಃ ॥ ಅಂದರೆ,—ಸತ್ಯನಾಗಿಯು, ನಿತ್ಯನಾಗಿಯು, ಆನಂದ ಸ್ವರೂಪಿಯಾಗಿಯೂ, ಇರುವ ಆತ್ಮನು ಪ್ರೇಯಸ್ಸಾಗಿರುವನು, ಇತರ ವಸ್ತುಗಳು ಅಂದರೆ ಲೌಕಿಕ ಸುಖಸಾಧಕಗಳಾದವಸ್ತುಗಳು ಪ್ರಿಯಗಳೆನ್ನಲ್ಪಡುವವು. ತದಿತರವಾಗಿರು ವ್ಯಾಘ್ರ ಜೀರ್ಣತೃಣ ಮುಂತಾದವುಗಳೆಲ್ಲವು ದ್ವೇಷ್ಯೋಪೇಕ್ಷ್ಯಗಳಾಗಿರುವವು, ಅಂದರೆ

---

ರದಾಗಿ ತನ್ನಲ್ಲಿ ಪ್ರೀತಿಯು ಪ್ರೇಯಸಿ ಯೆನಿಸಿಕೊಂಬುದು ಆತ್ಮಾನುಕೂಲ ದ್ರವ್ಯಂಗಳಲ್ಲಿರ್ಪುದು, ಪ್ರೀತಿ ಯೆನಿಸಿಕೊಂಬುದು, ಮೇಣೆರಡಕ್ಕಂ ಕ್ರಮವಾಗಿದ್ವೇಷ್ಯೋಪೇಕ್ಷ ವಿಷಯಂಗಳಾಗಿರ್ಪ ವ್ಯಾಘ್ರಜರತ್ತೃಣಾದಿಗಳಲ್ಲಿ ಪ್ರೀತಿಬಾರದೆಂಬುದಕ್ಕೆ ನಿಮಿತ್ತವೇನೆಂದರೆ ಇವರಯುಕ್ತಿನಿಯಮಿಲ್ಲ. ವೃತ್ತಿನಿಯಮವೆಸರಿ, ಅದೇಕೆ? ಕೇಳು! ವ್ಯಾಘ್ರವು ಅಭಿಮುಖವಾದರೆ ಉ

ದ್ವೇಷಮಾಡಲಿಕ್ಕೆ ಅರ್ಹವಾದವುಗಳಾಗಿಯು, ಉಪೇಕ್ಷೆ ಅಂದರೆ ಔದಾಸೀನ್ಯ ಮಾಡಲಿಕ್ಕೆ ಯೋಗ್ಯವಾದವುಗಳಾಗಿಯೂ, ಇರುತಲಿವೆ ಎಂಬದಾಗಿ ಯಾಜ್ಞವಲ್ಕ್ಯಸ್ಮೃತಿಯೊಳಗೆ ಉದಹರಿಸ್ಪಟ್ಟಿರುವದು. ಆದರೆ ಸತ್ತಾಗಿಯು, ಚಿತ್ತಾಗಿಯು ಇರುವ ಪದಾರ್ಥದೊಡನೆ ಈ ಆನಂದಕ್ಕೆ ಭೇದವೆಂಬುವದುಂಟೋ? ಅಥವಾ ಇಲ್ಲವೋ? ಎಂಬದಾಗಿ ಪ್ರಶ್ನೆಮಾಡಿದರೆ.

೬ ಕಂದ॥ ತಾ॥ ಲೋಕದಲ್ಲಿ ಹಾಲಿನೊಳಗೆ ಸ್ವಾಭಾವಿಕವಾಗಿ, ಮಾಧುರ್ಯವು, ಶುಭ್ರತೆಯು, ದ್ರವತ್ವವು ಎಂಬ ಮೂರು ವಿಧವಾದ ಗುಣಗಳಿರುವವು, ಈ ಮೂರು ಗುಣಗಳು ಭೂತಲದಲ್ಲಿ ಒಂದಕ್ಕೊಂದು ಭಿನ್ನಗಳಾಗಿ,ಹಾಲಿನಿಂದ ಹೊರಗೆ ಹಿಂದೆ ಕಂಡುಬರಲಿಲ್ಲವು. ವರ್ತಮಾನಕಾಲದಲ್ಲಿಯು ಬೇರೆಯಾದವುಗಳಾಗಿ ಕಾಣಬರುತಲು ಇಲ್ಲ, ಮುಂದೆಯೂ ಬೇರ್ಪಟ್ಟುಕಾಣಹೋಗುವದೂ ಇಲ್ಲ. ಅಂದರೆ ಮೂರು ಕಾಲದಲ್ಲಿಯೂ ಪರಸ್ಪರಾ ಭಿನ್ನಗಳಾಗಿಯೇ ಹಾಲಿನೊಳಗೆ ಕೇರಿರುವವು, ಹಾಗೆಯೇ ಸತ್ವ, ಚಿತ್ವ,ಆನಂದಗಳೂ, ಬ್ರಹ್ಮಪದಾರ್ಥದೊಳಗೆ ಒಂದಕ್ಕೊಂದ ಭಿನ್ನಗಳಾಗಿಯು, ನಿತ್ಯಗಳಾಗಿಯೂ ಇರುವವೆಂಬದಾಗಿ ಸಂದೇಹವಿಲ್ಲದೆ ತಿಳಿಯುತಕ್ಕದ್ದು.

---

ಪೇಕ್ಷೆಯುಪ್ಪುದು, ಇಂತಪ್ಪವ್ಯಾಘ್ರವೆ ಲಾಲನೆಯಿಂದನುಕೂಲವಾದರೆ ಪ್ರಿಯಮಪ್ಪುದು, ಇದರಿಂ ಆತ್ಮಾಪ್ರೇಯರ್ಾಪ್ರಿಯಶ್ಕೇಷೊದ್ವೇಷೊಪೇಕ್ಷೆತದನ್ಯಯೋಃ ॥ ಎಂದುಯಾಜ್ಞವಲ್ಕ್ಯವಾಕ್ಯವಿರ್ಘುದರಿಂ; ಹಾಗಾದರಾಗಲಿ, ಸಚ್ಚಿತ್ತುಗಳೊಡನೆ ಈ ಆನಂದಕ್ಕೆ ಭೇದವಿಲ್ಲವೆ?

೬ ಮೂಲ॥ ಕಂದ॥ ಎಂದೆಂದಿಗಿಲ್ಲಹಾಲಿನೊ।
ಳೊಂದಿದಮಧುರಾರ್ಜುನದ್ರವತ್ವಂಗಳಗೇಂ॥
ಸ್ಪಂದತೆಯಹುದೆಮೇಣಾ।
ನಂದಕೇಂಭೇದಮುಂಟೆಸಚ್ಚಿತ್ತುಗಳೊಳ್॥

೭ ಗೀತ॥ ತಾ॥ "ನಿತ್ಯಾನಂದ ಪದಾರ್ಥದ ದೆಸೆಯಿಂದಲೇ ಈ ಕಾಣಬರುವ ಸಮಸ್ತವೂ ಉತ್ಪನ್ನವಾಗುವದು" ಎಂಬದಾಗಿ ತೈತ್ತಿರೀಯ ಶ್ರುತಿಯು ಕಂಠೋಕ್ತವಾಗಿ ಹೇಳುತಿರುವದು. ಆಶ್ರುತಿವಾಕ್ಯ ಪ್ರಮಾಣ್ಯಾನುಸಾರವಾಗಿಯೇ ಯಥಾರ್ಥವಾಗಿರುವ ಬ್ರಹ್ಮಾನಂದ ಪದಾರ್ಥವೇ ಚರಾಚರಾತ್ಮಕವಾಗಿರುವ ಸಮಸ್ತ ಪ್ರಪಂಚಕ್ಕೂ ಮೂಲಕಾರಣವಾಗಿರುವದು. ಆದುದರಿಂದಲೇ ಈ ಬ್ರಹ್ಮಪದಾರ್ಥಕ್ಕೆ ಸತ್ವ, ಚಿತ್ವ, ಆನಂಗಳೆಂಬವು ಪ್ರತ್ಯೇಕವಾಗಿಯಾಗಲಿ, ಇಲ್ಲವೇ ಕಲತೇ ಆಗಲಿ ಸ್ವರೂಪಲಕ್ಷಣವಾಗಿರುವದೆಂಬದಾಗಿ ಅರಿಯುವದು. ಇಂತಪ್ಪ ಲಕ್ಷಣದಿಂದೊಡಗೂಡಿರುವ ಅಮೋಘವಾದ ವಸ್ತುವೇ ನಾನು ಯೆಂಬದಾಗಿ ತಿಳಿದರೆ ಒಡನೆಯೇ ಅಜ್ಞಾನವು ನಿವೃತ್ತಿಯಾಗಿ ಪರಮಾರ್ಥವಾಗಿರುವ ಮುಕ್ತಿಯು ಆವಿರ್ಭವಿಸುವ ವಿಷಯದಲ್ಲಿ ಸಂದೇಹವಿಲ್ಲವು.

೮ ವ॥ ತಾ॥ ಈ ಪ್ರಕಾರವಾಗಿ ನಿತ್ಯಾನಂದ ಸ್ವರೂಪ ಪದ್ಧತಿಯುನ್ನು ಶ್ರವಣೇಂದ್ರಿಯಕ್ಕೆ ಹಿತವಾಗಿರುವಂತೆ ತಿಳಿಯಪಡಿಸಿ ಇನ್ನೊಂದು ಪ್ರಕಾರವಾಗಿ ಹೇಳುತಲಿದ್ದಾನೆ.

೧೧ ಇಂತು ಆನಂದಸ್ವರೂಪ ವಿಚಾರಪದ್ಧತಿಯು ಮುಗಿದುದು.

---

೭ ಮೂ॥ ಗೀತ॥ ಈ ನಿಜಾನಂದ ಮಖಿಲವುನಿದಾನವೆಂಬ ವೇದವಾಕ್ಯಂಗಳಿಂ ಬ್ರಹ್ಮಮಾದುದಕ್ಕೆ ಸತ್ವಚಿತ್ವಸುಖಂಗಳೆ ಸಹಜಲಕ್ಷಣಗಳಿದು ನಾನೆನಲ್ಕೆ ಮೋಕ್ಷಂಗಮಿಪ್ಪುದು ॥೧॥

೮ ಮೂಲ॥ ವ॥ ಇಂತಾನಂದ ಭಾವಪದ್ಧತಿಯುಂ ಶ್ರೋತ್ರದೇಶಜನ್ಯಂಗೈದಿನ್ನೊಂದು ಪ್ರಕಾರ ಪೇಳುತಿರ್ದಪನದೆಂತೆನೆ.

೧೧ ಇಂತು ಆನಂದಸ್ವರೂಪ ವಿಚಾರಪದ್ಧತಿಯು ಮುಗಿದುದು.

## ೧೨ ನಿತ್ಯಭಾವವಿಚಾರಪದ್ಧತಿ ಪ್ರಾರಂಭವು.

೧ ತ್ರಿಪುಡೆ॥ ತಾ॥ ಈ ಪ್ರಪಂಚದ ಆದಿ ಸೃಷ್ಟಿಯೊಳು ಮೂಲ ಕಾರಣವಾಗಿರುವ ಅವಿದ್ಯೆಯು ಅಂದರೆ, ಅಜ್ಞಾನದ ಮೊಳಕೆಯು ಯಾವದುಂಟೋ, ಅದೇ ಮಹತ್ತತ್ವವೆನ್ನಲ್ಪಡುವದು, ಈ ಮಹತ್ತತ್ವವೆ ಪೃಥಿವ್ಯಪ್ತೇಜೋ ವಾಯ್ವಾಕಾಶಗಳೆಂಬ ಪಂಚಭೂತಗಳಲ್ಲಿಯು ॥೧॥ ಈ ಹಿಂದೆ ಹೇಳಿದ ಸಪ್ತಾವರಣಗಳಿಂದಲು ಪ್ರಕಾಶಿಸುತ್ತಿರುವ ಬ್ರಹ್ಮಾಂಡ ಸಹಸ್ರಗಳನ್ನು, ಇನ್ನು ಆ ಬ್ರಹ್ಮಾಂಡದ ಪದರಗಳಲ್ಲಿರುವ ಅನೇಕಕೋಟಿ ಜೀವರುಗಳ ಸಮುದಾಯಗಳನ್ನು. ॥೨॥ ಆ ಜೀವರಾಶಿಗಳ ಜನ್ಮಾಂತರ ವ್ಯಾವಹಾರಿಕ ಕರ್ಮಾನುಗುಣವಾಗಿ ಆಯಾಯ ವಿಷಯ ಸಮೂಹಾನುಭವ ನಿಮಿತ್ತಗಳಾಗಿರುವ ವಿಲಾಸರಾಶಿಗಳನ್ನು ಇನ್ನು ಆ ಜೀವರಾಶಿಗಳ ಸಮುದಾಯದಿಂದ ಗ್ರಹಿಸಲಿಕ್ಕೆ ಯೋಗ್ಯವೆನಿಸಿಕೊಂಡಿರುವ ಅಶೇಷವಾದ ಜಗತ್ತನ್ನು, ॥೩॥ ಪ್ರಕೃತಿ ಪ್ರಳಯಕಾಲ ಸ್ವರೂಪವಾಗಿರುವ ಪುರುಷನು ತನ್ನ ಅಧೀನವನ್ನಾಗಿ ಮಾಡಿಕೊಂಡಿರುವದರಿಂದಲೇ ಸ್ವಪ್ನಕಾಲದೊಳು ಕಾಣಬರುವ ವಿಚಿತ್ರವಾದ ನಗರ ಮುಂತಾದವುಗಳು, ಆ ನಗರದೊಳು ನಾನಾಬಗೆಯಿಂದ ವಿರಾಜಿಸುವ ಜನಸಮೂಹ ಮೊದಲಾದದ್ದು, ಹ್ಯಾಗೆ ಅತ್ಯಲ್ಪಕಾಲದೊಳು ನಾಶವಂ ಪಡೆಯುವದೋ, ಹಾಗಯೇ ಈ ಹಿಂದೆ

---

## ೧೨ ನಿತ್ಯಭಾವವಿಚಾರಪದ್ಧತಿ ಪ್ರಾರಂಭವು.

೧ ಮೂ॥ ತ್ರಿಪುಡೆ॥ ಮೂಲಕಾರಣವೆನಿಪವಿದ್ಯೆಯ ಮೊಳೆಯುಯಾ
ದಮಹತ್ವಮೇವಾ। ಕೂಲಪಥವಾಯ್ವನಲಕೀಲಾಜಾಲದಲ್ಲಿ ॥೧॥
ಇರುತಿರಲ್ಕೀಯೆಳರಿಂಪ್ರಸ್ಫುರಿಸಿ ದಂಡಸಹಸ್ರಗಳುಮವ। ರ
ರಗಳಲಿವರ್ತಿಸುವಭೂತಗ್ರಾಮತತಿಯಂ ॥೨॥
ವಿಷಯಭೋಗನಿಮಿತ್ತವಾಗಿಹವಿವರಗಳುಮಿವರ್ಕಳಾಯಾ।
ವಿಷಯರಾಗಿಗ್ರಹಣಸಾಧನವೆನಿಪಜಗವುಂ ॥೩॥
ಕಾಲಪುರುಷಾಧೀನವಾಗಿಯೆ ಕನಸಿನಲಿಕಾಣಿಸಿದನಗರಜ। ನತೆ
ಳಿಯಂದದಿಶಿಥಿಲಬಲದಿಂ ನಷ್ಟಮಹುದು ॥೪॥

ಉದಹರಿಸಿದ ಸಮಸ್ತವನ್ನು ಸ್ವತಃ ಸತ್ತಾಶೂನ್ಯವಾಗಿರುವದರಿಂದಲೇ ನಾಶವಂ ಮಾಡುತಲಿರುವನು. ॥೪॥ ಹೀಗೆ ಆಯಾಯ ಪದಾರ್ಥಗಳಿಗೆ ಅಲ್ಲವೇ ಜೀವರಾಶಿಗಳಿಗೆ ಅಂದರೆ ಸಮಸ್ತ ವಸ್ತುಗಳಿಗೆ ಕಾಲಶಕ್ತಿಯು ಆಯುಃ ಪರಿಮಿತಿಯನ್ನು, ದೌರ್ಬಲ್ಯವನ್ನು ಪದಾರ್ಥವಿನಾಶವೆಂಬ ಪಿಶಾಚವು ಬಲಿಯನ್ನಾಗಿ ಮಾಡಿಕೊಳ್ಳುವದು ಆದುದರಿಂದ ಇವುಗಳ ವಿನಾಶ ವೈಚಿತ್ರ್ಯವು ವರ್ಣಿಸಲಶಕ್ಯವಾಗಿರುವದು. ॥೫॥ ಈ ಪದಾರ್ಥಗಳು ಇಲ್ಲದೆ ಹೋಗುವದರಿಂದ ಅಂದರೆ, ವ್ಯವಹಾರ ಕಾಲ ಮಾತ್ರ ವೃತ್ತಿಯಾಗಿರುವದರಿಂದ ಈ ಪದಾರ್ಥಗಳು ಇವೆ ಎಂಬದಾಗಿ ತಿಳಿದಾಗಲು, ವಿವೇಕದಿಂದ ಇಲ್ಲವೆಂದು ತಿಳಿದಾಗಲು, ಏಕರೂಪವಾಗಿ ಪ್ರಕಾಶಮಾನಗಳಾಗಿರುವ ಸಚ್ಚಿದಾನಂದಗಳೇ, ॥೬॥ ಪ್ರತ್ಯೇಕವಾಗಿ ಒಂದೊಂದೇ ಪ್ರಕಾಶವನ್ನು ಹೊಂದಿ ಆತ್ಮನಿಗೆ ಸ್ವರೂಪಲಕ್ಷಣವಾಗಿರುವದು. ಆದಾಗ್ಯೂ ಒಂದೇ ವಸ್ತುವು ಸಚ್ಚಿದಾನಂದಗಳೆಂಬ ಮೂರು ಬಗೆಯಾಗಿ ತೋರುವದು. ಆದುದರಿಂದಲೇ ದ್ವೈತಾದಿ ದೋಷಗಳಿಂದ ರಹಿತವಾಗಿರುವದು. ಹಾಗೆ ದೋಷಲೇಶ ರಹಿತವಾಗಿರುವ ಆತ್ಮನೇ ನೀನೆಂಬದಾಗಿ ತಿಳಿಯತಕ್ಕದ್ದು. ॥೭॥

೨ ವ॥ ತಾ॥ ಈ ನಿತ್ಯಸ್ವರೂಪದೊಳಗೆ ಪ್ರಾಗಭಾವವು, ಪ್ರಧ್ವಂಸಾಭಾವವು, ಅತ್ಯಂತಾಭಾವವು, ಅನ್ಯೋನ್ಯಾಭಾವವು, ಎಂಬೀ ನಾಲ್ಕು ಅಭಾವಗಳೂ ಇಲ್ಲದೆ ಇರುವನು.

---

ಕಾಲಶಕ್ತಿಯಿದಕ್ಕೆಜೀವಿತ ಕಾಲದುರ್ಬಲಮಿವರಳಿವು। ತತ್ಕಾ
ಲಭೂತಬಲಿಗಳಿವರಿಂಶೀಲವೇನು ॥೫॥
ಎಲ್ಲವಾದುದರಿಂದರಿವುತೋರ್ಪಲ್ಲಿಯುಂ ತೋರದೆಕೆಯೊಳುಂ ।
ವುಳ್ಳಚಿತ್ಪ್ರಮುದಂಗಳೆಸತತೋದಯವನು ॥೬॥
ಸಾರಿರುವದು ಸರ್ಗಲಕ್ಷಣ ಸತ್ವಮುಳ್ಳಾಳ್ವ ತ್ರಿವಿಧದಿಂದದು ।
ತೋರುತಿಹುದವಿಭೇದಮದುನೀಂದೋಷಶೂನ್ಯಂ ॥೭॥

೨ ಮೂ॥ ವ॥ ಈ ನಿತ್ಯಸ್ವರೂಪದೊಳಭಾವ ಚತುಷ್ಟಯಂ ಪೊಗದಿರ್ಪುದು.

೩ ಸಾಂಗತ್ಯ॥ ತಾ॥ “ ಎಲೈ ಸೌಮ್ಯನೇ ! ಈ ಕಾಣಬರುವ ನಿಖಿಲ ಪ್ರಪಂಚವು ಸೃಷ್ಟಿಗಿಂತಲು ಮೊದಲು ಅಬಾಧಿತವಾದ ಸದ್ರೂಪವಾಗಿದ್ದುದು ,, ಎಂಬರ್ಥವುಳ್ಳ ಛಾಂದೋಗ್ಯೋಪನಿಷದ್ವಾಕ್ಯವನ್ನು ಅನುಸರಿಸಿ ಹೇಳುತಲಿದಾನೆ. ಚರಾಚರಾತ್ಮಕವಾದ ಪ್ರಪಂಚವು ಸೃಷ್ಟವಾಗುವದಕ್ಕಿಂತಲೂ ಪೂರ್ವದಲ್ಲಿ ಕಾಲತ್ರಯಾಬಾಧಿತವಾದ ಸದ್ರೂಪವಾಗಿಯು, ಸ್ವತಃ ಪ್ರಕಾಶಮಾನವಾದ ಚಿತ್ಸ್ವರೂಪವಾಗಿಯು, ದುಃಖಾಭಾವ ರೂಪವಾದ ಆನಂದ ಸ್ವರೂಪವಾಗಿಯೂ ಇರುವ ಆತ್ಮವಸ್ತು ಒಂದೇ ಇದ್ದುದು, ಈ ಸಚ್ಚಿದಾನಂದ ವಸ್ತುವಿನಲ್ಲಿ ಪ್ರಪಂಚವು ಇರಲಿಲ್ಲ. ತರುವಾಯ ಮಣ್ಣಿನೊಳು ಮಡಕೆಯೆಂಬುವದು ಮೊದಲು ಯಾವದಾದರೊಂದು ಆಕೃತಿಯನ್ನು ಹೊಂದಿಯಿಲ್ಲದೆ ಇದ್ದಾಗ್ಯೂ ಬಳಿಕ ಹ್ಯಾಂಗೆ ಕಲ್ಪಿತವಾಗಿ ಉಂಟಾಗುವದೋ, ಅದರಂತೆಯೇ ಈ ಪ್ರಪಂಚವೂ ಕಲ್ಪಿತವಾಗಿ ಉಂಟಾಯಿತು.॥೧॥ಸಚ್ಚಿದಾನಂದ ವಸ್ತುವು ಪ್ರಪಂಚಸೃಷ್ಟಿಗಿಂತಲೂ ಪೂರ್ವದಲ್ಲಿ ವಿಕಾರವನ್ನು ಹೊಂದದೆ ಕೇವಲ ತೇಜೋರೂಪವಾಗಿಯೇ ಹ್ಯಾಂಗೆ ಇತ್ತೋ ಅದರಂತೆಯೇ ಕಲ್ಪಿತವಾದ ಪ್ರಪಂಚವು ಕಾಣಬರುವಾಗಲು ಅವಿಕಾರಿಯಾಗಿಯೇ ಇರುವದು. ಕಲ್ಪಿತವಾಗಿ ಕಾಣಬರುವ ಪ್ರಪಂಚವು ಮಾತ್ರ ನಿವೃತ್ತಿಯಂ ಪಡೆಯುವದು. ಹಾಗೆ ಈ ಪ್ರಪಂಚವು ನಾಶವಾದ ಬಳಿಕಲು ಈ ಆತ್ಮವಸ್ತುವು ಅವಿಕಾರಿಯಾಗಿಯೇ ಇರುವದು. ಭೂಮಿಯೊಳು ಮೊದಲಿಲ್ಲದೆ ಮಧ್ಯದಲ್ಲಿ ಹುಟ್ಟಿ, ಮಧ್ಯದಲ್ಲಿಯೇ ನಾಶವಂ ಪಡೆಯುವ ಘಟದಂತೆ ಜಗತ್ತು ಮಾತ್ರ ಕಾಲಕ್ರಮದಿಂದ ನಾಶವಾಗಿ ಹೋಗುವದು. ಆದರೆ ಭೂಮಿಯೊಳು ಮಡಿಕೆಯು ಮೊದಲಿಲ್ಲದಿದ್ದರೂ ತಾನು ಹುಟ್ಟಿದ ಬಳಿಕ ಪೃಥಿವಿಗೆ

---

೩ ಸಾಂಗತ್ಯ॥ ಮೂ॥ ಮೊದಲಿದ್ದುದೀ ಸಚ್ಚಿದಾನಂದ ಮಯ
ವಸ್ತು ವಿದರೊಳಗಿಲ್ಲ ಪ್ರಪಂಚ ॥ ತದನಂತರದಲಿ ಪುಟ್ಟಿತು
ಮೃತ್ತಿಕೆಯಲಿ ಘಟದ ಹಾಗೆ ವಿಕಲ್ಪವಾಗಿ ॥೧॥
ಎಂದನಂತರದು ವಿಕೃತಿಯೈದದಾವಸ್ತು ಪೊಂದಿಕಲಾ ಎಕೇ

ವಿಕಾರವೆಂಬುವದು ಉಂಟಾಗುವದು, ಆದುದರಿಂದಲೇ ಮಡಿಕೆಯನ್ನು ನೋಡಿ ಪ್ರಾಜ್ಞರು ಮೃದ್ವಿಕಾರವೆಂಬರು, ಹಾಗೆಯೇ ಪ್ರಪಂಚವು ಮೊದಲು ಬ್ರಹ್ಮನಲ್ಲಿ ಇಲ್ಲದಿದ್ದರೂ ಬಳಿಕ ವುಂಟಾಗುವದು.

ಆದ್ದರಿಂದಲೇ ಪ್ರಪಂಚದಲ್ಲಿಯು ಬ್ರಹ್ಮವಿಕಾರವೆಂಬದಾಗಿ ವ್ಯಹಾರ ವುಂಟಾಗಲಿ, ಮತ್ತು ಹಾಗೆ ಬ್ರಹ್ಮಪದಾರ್ಥ ವಿಕಾರವು ಬಂದ ಬಳಿಕ ಪೃಥಿವಿಗೆ ಬಂದಂತೆ ಅನಿತ್ಯತ್ವವೂ ಉಂಟಾಗಲಿ ? ಎಂಬದಾಗಿ ಕೇಳ್ವೆಬಂದರೆ, ದೃಷ್ಟಾಂತದೊಳು ಸರ್ವಸಾಮ್ಯವು ಬರುವದಿಲ್ಲವು. ಅದು ಹ್ಯಾಗಂದರೆ ? ಮುಖವು ಚಂದ್ರನಂತಿರುವದೆಂಬದಾಗಿ ಹೇಳಿದರೆ ಆಗಮುಖದಲ್ಲಿ ಸರ್ವಸಾಮ್ಯವು ಬರಬೇಕಾದರೆ ಚಂದ್ರನಲ್ಲಿರುವ ಕಳಂಕವು, ಜಗತ್ಪ್ರಕಾಶಕತ್ವವು ಇವೆ ಮುಂತಾದವುಗಳೆಲ್ಲ ಮುಖದಲ್ಲಿ ಬರಬೇಕಾಗುವದು. ಅಲ್ಲಿ ಹ್ಯಾಗೆ ಚಂದ್ರನಲ್ಲಿರುವ ವರ್ತುಲತ್ವ ಆಹ್ಲಾದ ಕಾರಿತ್ವ ಮುಂತಾದ ಕೆಲವು ಧರ್ಮಗಳು ಮುಖದಲ್ಲಿರುವದರಿಂದ ಚಂದ್ರನಂತೆ ಮುಖವೆಂಬದಾಗಿ ವ್ಯವಹಾರ ವುಂಟಾಗುವದೋ ! ಹಾಗೆಯೇ ಪ್ರಕೃತದಲ್ಲಿಯು ಜಗತ್ತು ಪೂರ್ವದಲ್ಲಿ ಆತ್ಮನಲ್ಲಿ ಇಲ್ಲದೆ ಇದ್ದು ತರುವಾಯ ವುಂಟಾಗಿ ನಾಶವಾಗುವದೆಂಬ ಅಂಶದಲ್ಲಿ ಮಾತ್ರ ಮೊದಲುಭೂಮಿಯಲ್ಲಿಲ್ಲದೆ ಮಧ್ಯೆಉಂಟಾಗಿ ಹಾಗೆಯೆ ಅಂತ್ಯಕಾಲದಲ್ಲಿ ನಾಶವಾಗುವ ಮಡಕೆಯೊಡನೆ ಹೋಲಿಸಲ್ಪಟ್ಟಿತು. ಇದಲ್ಲದೆ ಪೃಥಿವಿಯು ಘಟಾಕಾರವಾಗಿ ಪರಿಣಮಿಸುವದರಿಂದ ಅದುಪರಿಣಾಮಿಕಾರಣ ವೆಂಬದಾಗಿ ಹೇಳಲ್ಪಡುವದು. ಬ್ರಹ್ಮಪದಾರ್ಥವು ಜಗದ್ರೂಪವಾಗಿ ಪರಿಣಮಿಸುವದಿಲ್ಲವು. ಅದೆಂತೆಂದರೆ ಈ ಕಾರಣವೆಂಬುವದು ಪರಿಣಾಮಿಕಾರಣವೆಂತಲು, ವಿವರ್ತೋಪಾದಾನಕಾರಣ ವೆಂತಲು, ಎರಡು ಬಗೆಯಾಗಿರುವದು. ಇವೆರಡರಲ್ಲಿ ಜಗತ್ತನ್ನು ಕುರಿತು ಬ್ರಹ್ಮಪದಾರ್ಥವು ವಿವರ್ತೋಪಾದಾನಕಾರಣವಾಗಿರುವದು ಇನ್ನು ಇದರ ವಿವರವೆಂತೆಂದೊಡೆ, ಯಾವದಾದರೊಂದು ವಸ್ತುವು ತ

ಷವನು ॥ ಮುಂದೆ ಕಾಣಿಸಿಕೊಂಡಭುವನವಿ ಕೆಡುವದು ಬಂದು
ನಡೆವ ಕಾಲಗತಿಯಿಂ ॥೭॥

ನೆಗೆ ಸಮಾನವಾದ ಸತ್ವದಿಂದೊಡಗೂಡಿ ಕಾರ್ಯರೂಪದಿಂ ಕಂಡು ಬರುವದು ಪರಿಣಾಮವು, ತಾನು ಅವಿಕಾರಿಯಾಗಿ ತನಗೆ ಸಮಾನವಾದ ಸತ್ವವಿಲ್ಲದೆ ಕಡಮೆಯಾದ ಸತ್ವದಿಂದ ಕಂಡು ಬರುವಕಾರ್ಯವು ವಿವರ್ತವೆಂತಲು ತಿಳಿಯಬೇಕು. ಇನ್ನು ಇದರ ವಿಷಯದಲ್ಲಿ ಬಹಳವಾಗಿ ವಿಚಾರ ಮಾಡತಕ್ಕದ್ದಿದ್ದರೂ ಗ್ರಂಥವಿಸ್ತಾರವಾಗುವದೆಂಬ ಭೀತಿಯಿಂದಲು, ಪ್ರಕೃತಕ್ಕೆ ಅಷ್ಟುಕೇವಲ ಉಪಯೋಗವಿಲ್ಲದ್ದರಿಂದಲು ಸೂಕ್ಷ್ಮವಾಗಿ ಉದಹರಿಸಲ್ಪಟ್ಟಿರುವದು, ವಿವೇಕ ಶಾಲಿಗಳು ಇಷ್ಟರಿಂದಲೆ ಊಹಿಸಿ ತಿಳಿದುಕೊಳ್ಳಬಹುದು ||೧|| ಪೃಥ್ವಿಯರೂಪವು ಜಲದಲ್ಲಿ ಹ್ಯಾಗೆ ಇಲ್ಲವೋ ? ಉದಕರೂಪವು ತೇಜಸ್ಸಿನಲ್ಲಿ ಎಂತು ಇಲ್ಲವೋ ? ಅಗ್ನಿಯರೂಪವು ವಾಯುವಿನಲ್ಲಿ ಎಂತಿಲ್ಲವೊ ? ಆ ವಾಯುವಿನ ರೂಪವು ಆಕಾಶದಲ್ಲಿ ಎಂತಿಲ್ಲವೋ ? ಅಂದರೆ ಒಂದೊಂದೊಂದು ಭೂತದ ರೂಪವು ಮತ್ತೊಂದು ಭೂತದಲ್ಲಿ ಇರುವದಿಲ್ಲ. ಅದು ಹ್ಯಾಗಂದರೆ ? ಘಟದಲ್ಲಿ ಪಟವೆಂಬುವದು ಇಲ್ಲ. ಪಟವೆಂಬುವದು ಘಟದಲ್ಲಿಯೂ ಇಲ್ಲ. ಆದುದರಿಂದಲೇ ಏಕರೂಪವಾಗಿರುವ ಅಬಾಧಿತವಾದ ವಸ್ತುವು ಎಂದಿಗೂ ಎರಡಾಗದು. || ೨ || ಲೋಕದಲ್ಲಿ ವಂಧ್ಯೆಯನ್ನು ಅಂದರೆ ಬಂಜೆಯನ್ನು ಕುರಿತು ಪುತ್ರನುಂಟು ಎಂಬದಾಗಿ ವ್ಯವಹರಿಸುವದು ಮಾತ್ರವಲ್ಲದೆ ವಂಧ್ಯೆಗೆ ಪುತ್ರನಾಗುವದುಂಟೆ? ಇಲ್ಲ. ಹಾಗೆ ಇಲ್ಲದೆ ಇದ್ದಾಗ್ಯೂ ವಂಧ್ಯಾಪುತ್ರನೆಂಬದಾಗಿ ಮಾತ್ರ ಇಲ್ಲ, ಎಂಬರ್ಥದಲ್ಲಿ ವ್ಯವಹಾರವುಂಟಾಗುವದು. ಇದರಂತೆಯೇ ಸರ್ವತ್ರ ವ್ಯಾಪಕವಾಗಿ ಆತ್ಮಪದಾರ್ಥವೆ ಇರುವಲ್ಲಿ ಸ್ವತಃ ಸತ್ವಶೂನ್ಯವಾಗಿರುವ ಮಾಯೆಯು ಪಾರಮಾರ್ಥಿಕವಾಗಿ ತೋರುವದುಂಟೇ ? ಇಲ್ಲ. ಆದುದರಿಂದ

---

ರೂಪುಗೊಂಡೀಮಿರದೊಂದನೇಪಡದೊಂದುತಮ್ಮೊಳಗೆ || ಪೋ
ಪಂತೆಘಟದಲ್ಲಿಪಟವಿಲ್ಲದಂತೆ ಸ್ವರೂಪವಿಂತೆರಡಾಗದೆಂದು ||೨||
ಬಂಜೆಯಕುರಿತು ಮಗನಪೇಳ್ವುದಲ್ಲದೆ ಬಂಜೆಗೆಮಗನಾಗಲುಂ
ಟೆ || ಪುಂಜೀಕರಿಸಿತಾನೆ ತೋರ್ಪುದೆಮಾಯೆಸದಂಜನಬಲವಿ
ಲ್ಲದಿರಲು ||೪||

ಲೇ ಈ ಮಾಯಾಕಾರ್ಯವೆಂದೆನಿಸಿಕೊಂಡು ಇರುವ ಪ್ರಪಂಚವು ಇಲ್ಲವೆಂಬದಾಗಿ ತಿಳಿಯಬೇಕು. ||೪|| ಈ ಪ್ರಕಾರವಾಗಿ ನಾಲ್ಕು ವಿಧವಾದ ಅಭಾವವನ್ನು ಹೊಂದದೆ ಕಡೆಯಲ್ಲಿ ನಿಂತ ಸ್ವತಃ ಪ್ರಕಾಶರೂಪವಾದ ವಸ್ತು ಯಾವದುಂಟೋ ? ಅದೇ ದ್ವೈತಾದಿ ಇತರ ದುರ್ಮತಗಳ ದುಷ್ಟದೂಷಣೆಗಳಿಗೆ ವಿಷಯವಾಗದೆ ದೋಷಗಂಧರಹಿತವಾದ ನಿರ್ಮಲವಸ್ತುವಾಗಿರುವದು. ಆತ್ಮವಸ್ತುವು ಚತುರ್ವಿಧವಾದ ಅಭಾವಗಳಿಗೆ ಎಂತು ವಿಷಯವಲ್ಲೆಂದರೆ, ಅಭಾವವು ಪ್ರಾಗಭಾವವೆಂತಲು, ಪ್ರಧ್ವಂಸಾಭಾವವೆಂತಲೂ, ಅತ್ಯಂತಾಭಾವವೆಂತಲೂ, ಅನ್ಯೋನ್ಯಾಭಾವವೆಂತಲು ನಾಲ್ಕು ಬಗೆಯಾಗಿರುವದೆಂದು ಮೊದಲೆ ಹೇಳಲ್ಪಟ್ಟಿತಷ್ಟೆ ? ಇವುಗಳಲ್ಲಿ ಪ್ರಾಗಭಾವವೆಂದರೆ, ಯಾವದಾದರೊಂದು ಸ್ಥಲದಲ್ಲಿ ಯಾವದಾದರೊಂದು ಪದಾರ್ಥವು ಹುಟ್ಟುವದಕ್ಕಿಂತಲು ಮುಂಚೆ ಆ ಸ್ಥಲದಲ್ಲಿ ಆ ಪದಾರ್ಥವು ಇರುವದಿಲ್ಲವಾದಕಾರಣ ಆ ಪದಾರ್ಥವಿಲ್ಲವೆಂಬುವದೇ ಅದರ ಪ್ರಾಗಭಾವವಾಗಿರುವದು, ಒಬ್ಬ ಕುಂಬಾರನು ಒಂದು ಮಡಕೆಯನ್ನು ಮಾಡುವದಕಿಂತಲು ಮುಂಚೆ ಅಲ್ಲಿ ಆ ಮುಂದೆ ಹುಟ್ಟಿ ಹೋಗುವ ಮಡಕೆಯು ಇರುವದಿಲ್ಲವಷ್ಟೆ ? ಆಗಲಲ್ಲಿ ಮುಂದು ಹುಟ್ಟುವ ಮಡಕೆಯು ಅಭಾವವಿರುವದು. ಈ ಅಭಾವವು ಪ್ರಾಗಭಾವವೆನ್ನಲ್ಪಡುವದು, ಪ್ರಾಕ್ ಅಂದರೆ ಪದಾರ್ಥವು ಹುಟ್ಟುವದಕ್ಕಿಂತಲು ಮೊದಲು ಇರುವ ಅಭಾವವು. ಎಂಬದಾಗಿ ಯಥಾರ್ಥನಾಮವಾಗಿರುವದು, ಇದು ಮೊದಲನೆಯ ಅಭಾವವು, ಪ್ರಧ್ವಂಸಾಭಾವವೆಂದರೆ,— ಯಾವದಾದರೊಂದು ಪದಾರ್ಥವು ಹುಟ್ಟಿ ಬಳಿಕ ಯಾವದಾದರೊಂದು ನಿಮಿತ್ತದಿಂದ ಅದು ನಾಶವಾಗಿ ಹೋದರೆ, ಅದೇ ಪ್ರಧ್ವಂಸಾಭಾವ ವೆನ್ನಲ್ಪಡುವದು, ಹ್ಯಾಗಂದರೆ, ಪದಾರ್ಥವು ಇದ್ದು ತರುವಾಯ ಅದು ಧ್ವಂಸವಾಗಿ ಹೋಗಿ ಪದಾರ್ಥ

---

ಇಂತುಚತುರ್ವಿಧಾಭಾವಕೆಕಡೆಯಲ್ಲಿ ನಿಂತನಿರಂಜನ ವಸ್ತು ||
ತಾಂತಳೆಯದೆ ಪರಮತವಾದಿ ದೂಷಣಮಂ ತೆರಪಾದ ನಿತ್ಯ
ತೆಯಿಂ ||೫||

ವು ಇಲ್ಲದೆ ಹೋಗುವದು. ಆ ಪದಾರ್ಥವಿಲ್ಲದೆ ಹೋಗುವಿಕೆಯೇ ಪ್ರಧ್ವಂಸಾಭಾವವು. ಪ್ರ-ಅಂದರೆ ವಿಶೇಷವಾಗಿ ಧ್ವಂಸ, ನಾಶವಾಗಿ ಹೋಗುವದರಿಂದುಂಟಾಗುವ ಅಭಾವವು ಪ್ರಧ್ವಂಸಾಭಾವವು, ಎಂಬ ಯಥಾರ್ಥನಾಮವನ್ನು ಹೊಂದಿರುವದು. ಈ ಎರಡು ಅಭಾವಗಳು ಮೊದಲನೆ ಪದ್ಯದಲ್ಲಿ ತೋರಿಸಲ್ಪಟ್ಟಿತು. ಹ್ಯಾಗಂದರೆ, ಆತ್ಮವಸ್ತುವಿನಲ್ಲಿ ಪ್ರಪಂಚದ ಸೃಷ್ಟಿಗಿಂತಲೂ ಪೂರ್ವದಲ್ಲಿ ಈ ಜಗತ್ತು ಇರದೆ ಅಭಾವವೆ ಇರುತ್ತದಾಗಿ ಅದೇ ಪ್ರಾಗಭಾವವಾಯಿತು. ಮಣ್ಣಿನಲ್ಲಿ ಮಡಕೆಯು ಮೊದಲು ಇಲ್ಲದೆ ಮಧ್ಯದಲ್ಲಿ ಹುಟ್ಟಿ ನಾಶವಾದಂತೆ ಪ್ರಪಂಚವು ಮಧ್ಯದಲ್ಲಿ ಕಲ್ಪಿತವಾಗಿದ್ದು ನಾಶವಾಗಿ ಹೋಗುತ್ತದೆಯಾದಕಾರಣ ಇದೇ ಪ್ರಧ್ವಂಸಾಭಾವವಾಯಿತು, ಈ ಎರಡು ಅಭಾವಗಳು ಆತ್ಮನನ್ನು ಗೋಚರಿಸಲಾರವು. ಯಾತಕ್ಕಂದರೆ ? ಆತ್ಮವು ಇರದೆ ಇದ್ದ ಕಾಲವೆ ಇಲ್ಲದ್ದರಿಂದ ಪ್ರಾಗಭಾವವಿಲ್ಲವು, ಇನ್ನು ಎಂದಿಗೂ ನಾಶವಾಗಿ ಹೋಗುವದಿಲ್ಲವಾದುದರಿಂದ ಪ್ರಧ್ವಂಸಾಭಾವವು ಇಲ್ಲ, ಆದಕಾರಣವೇ ಎರಡು ಅಭಾವಗಳಿಗೂ ಗುರಿಯಲ್ಲವೆಂದರಿಯಬೇಕು. ಅನ್ಯೋನ್ಯಾಭಾವವೆಂಬುವದು ಮೂರನೇ ಪದ್ಯದಲ್ಲಿ ನಿರೂಪಿಸಲ್ಪಟ್ಟಿತು. ಅದು ಹ್ಯಾಗಂದರೆ 'ಘಟಪದಾರ್ಥವು ಪಟವಲ್ಲದ್ದರಿಂದಲು, ಪಟಪದಾರ್ಥವು ಘಟವಲ್ಲದ್ದರಿಂದಲೂ, ಅನ್ಯೋನ್ಯಾಭಾವ ವೆನ್ನಲ್ಪಡುವದು. ಹೀಗೆ ಆತ್ಮನಿಗಿಂತಲೂ ಆತ್ಮನಂಥ ಮತ್ತೊಂದು ವಸ್ತುವು ಇದ್ದರೆ ಆಗ ಈ ಪದಾರ್ಥವು ಆತ್ಮನಲ್ಲ, ಆತ್ಮನು ಈ ಪದಾರ್ಥವಲ್ಲ. ಎಂಬದಾಗಿ ಹೇಳಬಹುದಾಗಿತ್ತು ಹಾಗಿಲ್ಲದ್ದರಿಂದಲೇ ಅನ್ಯೋನ್ಯಾಭಾವವೆಂಬುವದು ಆತ್ಮನನ್ನು ಗೋಚರಿಸಲಾರದು, ಅತ್ಯಂತಾಭಾವವೆಂಬುವದು ನಾಲ್ಕನೆ ಪದ್ಯದಲ್ಲಿ ವ್ಯಕ್ತಮಾಡಲ್ಪಟ್ಟಿತು. ಅದೆಂತೆಂದರೆ, ಮಾಯೆಯೆಂಬುವದಕ್ಕೆ ಸ್ವತಃ ಸತ್ವವಿಲ್ಲದ್ದರಿಂದ ಆತ್ಮನೆಂಬ ಪದಾರ್ಥವಿಲ್ಲದಿದ್ದರೆ, ಈ ಜಗತ್ತು ವ್ಯಾವಹಾರಿಕವಾಗಿಯಾಗಲಿ ಪ್ರಾತಿಭಾಸಿಕವಾಗಿಯಾಗಲಿ ಕಾಣಲಿಕ್ಕೆ ಮಾರ್ಗವಿಲ್ಲದೆ ಹೋಗುವದಾದ್ದರಿಂದ ಭೂತಭವಿಷ್ಯದ್ವರ್ತಮಾನಗಳೆಂಬ ಮೂರುಕಾಲ

ದಲ್ಲಿಯು ಪರಮಾರ್ಥವಾಗಿ ಪ್ರಪಂಚವು ಪರಾತ್ಮನಲ್ಲಿ ಇಲ್ಲದ್ದರಿಂದ ಅತ್ಯಂತಾಭಾವವು ಬಂದುದು. ಮೂರುಕಾಲದಲ್ಲಿಯೂ ಆತ್ಮವಸ್ತುವು ಅಬಾಧಿತವಾಗಿ ಇರುತದೆಯಾದಕಾರಣ ಅತ್ಯಂತಾಭಾವವೆಂಬುವದು ಆತ್ಮನನ್ನು ವಿಷಯೀಕರಿಸಲಾರದು. ಎಂಬದಾಗಿ ಸಂಶಯವಿಲ್ಲದೆ ತಿಳಿಯುತಕ್ಕದ್ದು. ಈ ನಾಲ್ಕು ವಿಧವಾದ ಅಭಾವಗಳನ್ನು ಆಯಾಯ ಸ್ಥಳದಲ್ಲಿ ತೋರ್ಪಡಿಸತಕ್ಕದ್ದು ಕ್ರಮವಾಗಿದ್ದರೂ ಸುಲಭವಾಗಿ ಅವಗಾಹನ ಉಂಟಾಗುವದಕ್ಕಾಗಿ ಒಂದೇ ಸ್ಥಲದಲ್ಲಿ ವಿಶದಮಾಡಲ್ಪಟ್ಟಿತು. ॥ ೫ ॥ ಈ ಪ್ರಕಾರವಾಗಿ ಆತ್ಮವಸ್ತುವು ನಿತ್ಯವಾಗಿಯೂ, ಅವಿಕಾರಿಯಾಗಿಯು, ಸ್ವತಃ ಪ್ರಕಾಶಮಾನವಾಗಿಯು ಇದ್ದರೆ ಇಂತಪ್ಪ ನಿರ್ವಿಕಾರವಾದ ವಸ್ತುವು ಮತ್ತೊಂದು ವಸ್ತುವಿನೊಡನೆ ಸಂಬಂಧಿಸಿಕೊಂಡು ಇರುವಂತೆ ತೋರುತಿರುವದಲ್ಲ, ಅದಕ್ಕೆ ನಿಮಿತ್ತವೇನು ? ಅನುಭವಿಸುವದಕ್ಕೆ ಯೋಗ್ಯವಾಗಿರುವ ಮಾಯೆಯಿಂದ ಇರಬಹುದು, ಎಂದರೆ ಹಾಗೆ ಹೇಳಲಾಗದು, ಯಾತಕಂದರೆ ಅಕೃತ್ರಿಮವಾಗಿ ರುವ ವೇದವಾಕ್ಯಗಳಿಗೆ ಕೂಡಹೇಳಲಿಕ್ಕೆ ಅಗೋಚರವಾಗಿರುವ ಆತ್ಮವಸ್ತುವಿನಲ್ಲಿರುವ ಸತ್ವಪ್ರಕಾಶ ಲೇಶದಿಂದಲೇ ಹಾಗೆ ತೋರುವದು. ಇದಿಲ್ಲದಿದ್ದರೆ ಈ ಮಾಯೆಗೆ ಸ್ವತಃ ಸತ್ವಲೇಶವೂ ಇಲ್ಲದ್ದರಿಂದ ಹಾಗೆ ಯೆಂದಿಗೂ ತೋರಲಾರದು. ॥ ೬ ॥ ಈ ಪೂರ್ವೋಕ್ತವಾದ ಆತ್ಮ ಸತ್ವದ ಪ್ರಕಾಶಲೇಶದ ಸಂಬಂಧದಿಂದ ಪ್ರತ್ಯಕ್ಷವಾಗಿ ಕಾಣಬರುವ ವಸ್ತುವನ್ನು ಪರೋಕ್ಷವಾಗುವ ಹಾಗೆ ಮಾಡುವದು. ಪರೋಕ್ಷವಾಗಿರುವ ವಸ್ತುವನ್ನು ಪ್ರ

---

ಹೀಗೆವಿಕಾರವಿಲ್ಲದನಿತ್ಯಪದವಿ ಸಂಯೋಗಿಸಿ ದಂತಿಹುದೇಕೆ ॥
ಭೋಗಿಸಲಹಮಾಯೆಯುನ ಬೇಡಬಲಮುಂಟವಾಗ ಗೋಚರ
ಮಾಗಿಮೆರೆವ ॥೬॥

ಅಪರೋಕ್ಷದಲ್ಲಿಪರೋಕ್ಷವ ಕಾಣಿಪುದುಪರೋಕ್ಷದಲ್ಲಿ ಪ್ರತ್ಯಕ್ಷ
ವನು॥ ವಿಪುಲಮಾಗೀಕ್ಷಿಸಾಚರಿಪುದುಲಾಘವಪದವಪಡದಕಾ
ಲದಲಿ ॥೭॥

ತ್ಯಕ್ಷವಾಗಿ ಕಾಣಬರುವಹಾಗೆ ಮಾಡುತ್ತದೆ. ಮತ್ತು ಈ ಮಾಯೆಯು ತಾನು ಸ್ವಾತಂತ್ರ್ಯವನ್ನು ಪಡೆದಿರುವಂತೆಯು, ತೋರಿಬರ್ರುತ ಲಾಘವವನ್ನು ಹೊಂದಿರುವ ಪದಾರ್ಥವನ್ನು ॥೭॥ ಗೌರವವಾಗಿರುವಂತೆ ಮತಿಯನ್ನುಂಟುಮಾಡುವದು. ಗೌರವವನ್ನು ಹೊಂದಿರುವ ಪದಾರ್ಥವನ್ನು ಲಘುವಾಗಿರುವಂತೆ ತೋರ್ಪಡಿಸುವದು. ಆದುದರಿಂದಲೇ ಈ ಮಾಯೆಯು ಅಘಟಿತಘಟನಾ ಸಾಮರ್ಥ್ಯವನ್ನು ಅಂದರೆ ಅಸಾಧ್ಯವಾದದ್ದನ್ನು ಸಾಧಿಸುವ ಶಕ್ತಿಯುಂಟಾಗುವಹಾಗೆ ಮಾಡುವದು. ಆದಕಾರಣವೇ ಅಪರಿಮಿತವಾದ ಆಶ್ಚರ್ಯಗಳಿಗೆ ಆಕರವಾಗಿರುದೆಂಬದಾಗಿ ಅರಿತ ಆರ್ಯರು ಹೇಳುತಲಿರುವರು, ॥೮॥ ಇಂತಪ್ಪ ಮಾಯೆಯನ್ನು ವ್ಯಾವಹಾರಿಕ ಸತ್ಯತ್ವವನ್ನು ಹೊಂದಿರುವಳೆಂಬದಾಗಿಯೂ ಅನಿರ್ವಚನೀಯ ಸತ್ವವನ್ನು ಆಶ್ರಯಿಸಿರುವಳೆಂಬದಾಗಿಯೂ, ಅಂದರೆ,—ಸದಸದ್ವಿಲಕ್ಷಣ ವಾಗಿರುವಳೆಂಬದಾಗಿಯೂ, ಇನ್ನು ತುಚ್ಛತೆಯನ್ನು ಪಡದಿರುವಳು, ಅಂದರೆ,—ಅಸತ್ವವನ್ನಾಶ್ರಯಿಸಿರುವಳೆಂಬದಾಗಿಯೂ, ಸಮಸ್ತ ಶಾಸ್ತ್ರ ಪಾರಗಾಮಿಗಳಾಗಿ ಪರಿಪಕ್ವವಾದ ಜ್ಞಾನವುಳ್ಳ ಸಾಧು ಶಿರೋಮಣಿಗಳಾದ ಆತ್ಮನಿಷ್ಠರು ಹೇಳುತಲಿರುವರು. ॥೯॥ ಮತ್ತು ಪೂರ್ವದಲ್ಲಿ ಉದಹರಿಸಲ್ಪಟ್ಟ ಮಾಯೆಯು ವಿಚಿತ್ರವಾದ ಚಿತ್ರಗಳನ್ನು ಬರದ ಪಟವನ್ನು ಒಂದುವೇಳೆ ಚ

---

ಗೌರವಮತಿಯುಪುಟ್ಟಿಪುದು ಗೌರವಕಾಲ ಮಾರಂಭಿಸಿರದಲ್ಪ
ಮತಿಯು ॥ ಸಾರಿಸುವುದುಮಾಯೆ ವಿಸ್ಮಯಪ್ರಥಮಃಶರೀರಿಣಿ
ಯೆನಿಸಿಪೇಳುವರು ॥೮॥

ವಾಸ್ತವಿಯೆಂಪ ನಿರ್ವಚನೀಯೆಯೆಂದು ನಿರಸ್ತದೋಷರುತು
ಚ್ಛೆಯೆಂದು ॥ ನ್ಯಸ್ತವಾಗಿರುವಯೌಕ್ತಿಕದ್ವೈಕ್ಯನ್ನೈಗಮಃಶಸ್ತ
ಕರಣದಿತ್ರಿವಿಧದಿಂ ॥೯॥

ಬಮ್ಮಿತೋರಿಸುವಳು ಸಕಲಲೋಕಗಳ ಮತ್ತೊಮ್ಮೆಮರಸು
ವಳೀಮಾಯೆ ಹವ್ಮಿದಚಿತ್ರಪಟದಪ್ರಸರಣದಂತೆಕೆಮ್ಮಿದದಂ
ಕೋಚದಂತೆ ॥೧೦॥

ನ್ನಾಗಿ ಚಿಚ್ಚರಿಸಿದಂತೆಯು, ಮತ್ತೊಂದುವೇಳೆ ಸುತ್ತಿರಿಸಿದಂತೆಯೂ, ಈ ಚತುರ್ದಶ ಭುವನವನ್ನು ಒಂದು ಸಮಯದಲ್ಲಿ ಚೆನ್ನಾಗಿ ವಿವರಿಸಿ ತೋರಿಸುವದು. ಇನ್ನೊಂದು ವೇಳೆಯಲ್ಲಿ ಮರೆಮಾಡುವದು. ॥೧೦॥ ... ... ... *

ಆದರೆ ಅರಿವೆಂಬ ಪದಾರ್ಥವನ್ನು ಬಿಟ್ಟು ತಾನು ಪ್ರತ್ಯೇಕವಾಗಿ ತೋರಿಬರದೆ ಇರುವದಾಗಿಯು, ಇನ್ನು ತನ್ನ ವಿಚಿತ್ರವ್ಯಾಪಾರಗಳಿಂದ ಚಿತ್ಸ್ವರೂಪವನ್ನು ಆಚ್ಛಾದನವ ಮಾಡಿ, ಅದನ್ನು ಬೇರೊಂದು ವಿಧವಾಗಿ ಇರುವಂತೆ ಮಾಡುವಿಕೆಯು ಈ ಮಾಯೆಯ ಸ್ವರೂಪವೆಂದು ಬಲ್ಲಂಥ ಕೋವಿದರು ಹೇಳುತಿರುವರು. ॥೧೧॥ ಈ ಮಾಯೆಯು ವಾಚಾಮಗೋಚರವಾದ ಚರಿತ್ರೆಯುಳ್ಳವಳಾದ ಕಾರಣವೇ ಮೊದಲು ತಾನೆ ಅಬದ್ಧಳಾಗಿರುವಳಾದಾಗ್ಯೂ ಅಡಿಗಲ್ಲಿನಂತೆ ಯಾವವಿಕಾರಗಳನ್ನು ಹೊಂದದೆ ಅಖಂಡವಾಗಿಯು, ನಿಸ್ಸಂಗವಾಗಿಯು, ಶುದ್ಧವಾಗಿಯು ಇರುವ ಆತ್ಮಸ್ವರೂಪವನ್ನು ತಾನು ಹೊಂದಿ ಅತ್ಯದ್ಭುತವಾಗಿ ಕಾಣಬರುವ ಈ ಹದಿನಾಲ್ಕು ಲೋಕಗಳನ್ನು ಉಂಟುಮಾಡಿರುವಳು. ಇನ್ನು ಏನೇನು ಮಾಡಿರುವಳೆಂದರೆ, ॥೧೨॥
ಈ ಮಾಯೆಯು ಸಾಕ್ಷಾತ್ ಚಿತ್ಪದಾರ್ಥದ ಪ್ರತಿಬಿಂಬಸ್ವರೂಪವಾಗಿರುವ ಜೀವನನ್ನು ಮತ್ತು ಈಶ್ವರನನ್ನು ಭಿನ್ನಭಿನ್ನವಾಗಿ ತೋ

---

ಚಿತ್ತನುಬಿಟ್ಟುತೋರದ ದೆಸೆಯಿಂನಾನಾವೃತ್ತಿಯಿಂದನ್ಯ ದಾಕೃತಿಯಾ ॥ ಚಿತ್ತಿಗೆಪೊಂದಿಸಿದತ್ತಣಿಂಮಾಯೆಯನುತ್ತಮರೆಂಬದೆಂತೆಂದು ॥೧೧॥

ಅನಿಜತಂತ್ರೆಯು ನಿಜತಂತ್ರೆಯಂದಾವುದ ನನುಗವಿಸದಕೂಟಸ್ಥನನು ॥ ಜನವಾದಸಂಗನಾದಾತ್ಮನಪೊಂದಿಭುವನರೂಪವನುಮಾಡಿದುದಲ್ತೆ ॥೧೨॥

ತಾನೆಚಿದಾಭಾಸ ರೂಪದಿಂದಲೆ ಜೀವೇಶಾನರಗೈದಮಾಯೆಯುಲಿ ॥ ಏನೆಂದನರಸಲುಂಟೆ ದುರ್ಘಟೈಕನಿದಾನವತಿಯೆ ಮಾಯೆಯುಕ್ಕು ॥೧೩॥

ಲುವಹಾಗೆಲ್ಲಾ ಮಾಡಿರುವದು. ಇಂತಪ್ಪ ಅಮೋಘವಾದ ಕಾರ್ಯಗಳ ನ್ನೆಲ್ಲಾ ಮಾಡಿರುವಲ್ಲಿ ಇನ್ನು ಯಾವಯಾವ ಕಾರ್ಯಗಳನ್ನು ಮಾಡು ವದಿಲ್ಲವೆಂದು ಹೇಳುವದಕ್ಕೆ ಆದೀತು ? ಆಗುವದಿಲ್ಲ. ಹೀಗೆ ದುರ್ಘ ಟವಾದ ಕಾರ್ಯಗಳನ್ನೆಲ್ಲ ಘಟನೆ ಯಾಗುವಹಾಗೆ ಮಾಡುತಲಿರುವಳು. ॥೧೩॥ ಅತಿಶುದ್ಧವಾದ ಆತ್ಮಪದಾರ್ಥದೊಳಗೆ ಈ ಮಾಯೆಯು ವಿಚಿ ತ್ರವಾದ ಕಲ್ಪನೆ ಯೆಂಬುವದ್ಯಾವದುಂಟೋ ? ಅದೇ ಅಧ್ಯಾರೋಪ ವೆಂಬದಾಗಿ ಹೇಳಲ್ಪಡುತ್ತದೆ. ಈ ಮಾಯೆಯೆಂಬದು ಇಲ್ಲ. ಮಿ ಥ್ಯಾರೂಪದಿಂದ ಹೀಗೆ ಬಗೆಬಗೆಯಾಗಿ ತೋರುತಲಿರುವದು ಯೆಂಬ ದಾಗಿ ದೃಢವಾಗಿ ತಿಳಿದು ಬರುವ ಅರಿವೇ ಅಧ್ಯಾರೋಪದವಿ ಸರ್ಜನೆ ಯನ್ನಲ್ಪಡುವದು. ಈ ಮಾಯೆಯು ಯಾವಾಗಲಾದರೆ ಜೀವನಸ್ವ ರೂಪ ಜ್ಞಾನವನ್ನು ಸುತರಾಂ ಮರಸುತ್ತದೊ ಆಗಲಿದಕ್ಕೆ ತಮಸ್ಸು ಎಂಬ ನಾಮಧೇಯು ವುಂಟಾಗುವದು. ॥೧೪॥ ಮತ್ತು ಅಖಂಡಸಚ್ಚಿ ದಾನಂದ ರೂಪವಾಗಿರುವ ಬ್ರಹ್ಮಪದಾರ್ಥವು ತನ್ನಲ್ಲಿ ಸಂಪೂರ್ಣ ವಾಗಿ ಪ್ರತಿಫಲಿಸಿ ಇನ್ನು ಇಂತಪ್ಪ ಚೈತನ್ಯವನ್ನು ಪ್ರಭಾಸಮಾಡದೆ ತನ್ನ ಲ್ಲಿಯೆ ವಿಷಯನಿಗರಣದಿಂದ ಸಮಸ್ತಪ್ರಪಂಚವಸ್ತುವನ್ನೆಲ್ಲ ತನ್ನಲ್ಲಿ ಪ್ರತಿಬಿಂಬಿಸುವಂತೆ ಮಾಡುವದಲ್ಲದೆ ಇದಕ್ಕೆ ತಮವೆಂಬ ಪೆಸರು ಲೋಕಪ್ರಸಿದ್ಧವಾಗಿರುವದು. ॥೧೫॥ ಇಂತು ಅಮೋಘವಾಗಿಯು ಅ

---

ಇವಳಕಲ್ಪನೆಯೆಬ್ರಹ್ಮನೊಳಧ್ಯಾರೋಪಮತ್ತಿವಳುತ್ಸರ್ಜನ
ಮಪವಾದ ॥ ಇವಳೆಜೀವಜ್ಞಾನಛಾದಕಳಾಗೆಸಂಭವಿಸುವದು ತ
ಮವೆಂದುನಾಮ ॥೧೪॥
ಜಗದರೂಪಾಗಿತನ್ನೊಳಗಿರ್ದ ಚೈತನ್ಯನಿಗರಣಮೊಸಗದಾವ
ಸ್ತು ॥ ಮಿಗೆವಶವಾಗಿರ್ಪಕಾಲದಿ ಮಾಯೆಯುಂದಸಲದಪೆಸ
ರಿಂದೊಪ್ಪುವಳು ॥೧೫॥
ಇಂತಿಹಮಾಯೆಯುಗೆಲವುಭುವನದಲ್ಲಿ ಜಂತುಗಳಿಗೆ ಸಿದ್ಧಸು
ವುದು ॥ ಯೆಂತೆನಲೀಮಾಯೆಯ ಪರಮಾರ್ಥತೆಯಂತಪೆ.ಶಾ
ಸ್ತ್ರದಿಂದಹು ॥೧೬॥

ಘಟನಾಘಟನ ಸಾಮರ್ಥ್ಯವುಳ್ಳ ಈ ಮಾಯೆಯು ಯಾವಪ್ರಕಾರವಾಗಿ ನಾಶವಾಗುವದು ಎಂದರೆ, ಈ ಮಾಯೆ ಎಂಬುವದು ಅಪಾರಮಾರ್ಥಿಕ, ಅಂದರೆ,- ಮಿಥ್ಯಾಸ್ವರೂಪವಾದದ್ದು. ಎಂಬದಾಗಿ ಯುಕ್ತಿ,ಪ್ರಮಾಣಗಳಿಂದ ವಿಶದವಾಗಿ ಉದಹರಿಸುವ ತತ್ವಶಾಸ್ತ್ರವಿಚಾರದಿಂದಲೇ ಆಗತಕ್ಕದ್ದಾಗಿರುವದು. ॥೧೬॥ ಈ ಮಾಯೆಯು ನಾನಾಬಗೆಯಾದ ಕಾರ್ಯಜಾಲಗಳು ಪರಾತ್ಮಾಖಂಡ ಸಾಕ್ಷಾತ್ಕಾರದಿಂದ ಅಳಿದು ಹೋಗುವವು. ಕಾರ್ಯಜಾತದೊಂದಿಗೆ ಈ ಮಾಯೆಯ ಲೀನತೆಯು ಎಂತಾಗುವದೆಂದಡೆ,— ವಿಚಾರಾನುಭವಗಳಿಂದ ಆಗಾಮಿ ಸಂಚಿತಕರ್ಮಗಳ ವಿನಾಶವುಂಟಾಗುತ್ತ ಕಡೆಗೆ ನಷ್ಟವಾಗುವ ಪ್ರಾರಬ್ಧಕರ್ಮ ನಿಕರಗಳ ನಾಶದಿಂದಲೇ ಉಂಟಾಗುವದು ಈ ವಿಷಯದಲ್ಲಿ ಸಂದೇಹವಿಲ್ಲವೆಂದು ಅನೇಕಯೋಗ ವಿಶಾರದರು ನಿರೂಪಿಸುತ್ತಿರುವರು. ॥೧೭॥ ಇದಲ್ಲದೆ ವಿಜಾತೀಯಗಳಾಗಿ ಅಪಾರಗಳಾಗಿಯು ಇರುವ ಕರ್ಮಫಲವೆಂಬುವದು ಕೇವಲ ಹೇಯವಾಗಿರುವದು. ಅಂದರೆ,—ಬಹುತುಚ್ಛವಾಗಿರುವದು. ಅಮೋಘವಾದ ಜ್ಞಾನದಿಂದ ಉಂಟಾಗತಕ್ಕ ಫಲವಾದರೋ ಸಾರವಾದದ್ದಾಗಿಯು, ಸರ್ವಶ್ಲಾಘ್ಯವಾದದ್ದಾಗಿಯು ಇರುವದು, ಇನ್ನು ಕರ್ಮಸಾಧ್ಯವೆಂಬುವದು ಅಶಾಶ್ವತವಾದದ್ದಾಗಿರುವದು. ಜ್ಞಾನಸಾಧ್ಯವಾದರೋ ಅವಿಕಾರಿಯಾಗಿಯು, ನಿತ್ಯವಾದದ್ದಾಗಿಯು ಇರುವದು. ಅಂದರೆ,—ಕರ್ಮಸಾಧ್ಯವಾದ ಸ್ವರ್ಗಾದಿಲೋಕಗಳು ನಶ್ವರವಾಗತಕ್ಕವುಗಳು. ಜ್ಞಾನದಿಂದ ಸಾಧ್ಯವಾದ ಮುಕ್ತಿಯೆಂಬುವದು ಅನಶ್ವರವಾಗಿರುವದು. ಎಂ

---

ಇವಳ ಕಾರ್ಯಕ್ಷಯಮಪ್ಪವೆ ಪ್ರತ್ಯಕ್ಷಾತ್ಮಾನುಭವದಿಂದಲಿಡುವುದು
ತೋರಿಕೆಯೆ ॥ ಇವಳದೆಂತಳಿವುದೆಂದರೆ ಪ್ರಾರಬ್ಧಾಂತದಿಂದಲೆ
ಸಿದ್ಧಿಸುವದುಚನ್ನಾಗಿ ॥೧೭॥

ಕರ್ಮಫಲವುತುಚ್ಛಜ್ಞಾನ ಫಲವಮೋಘಕರ್ಮಸಾಧ್ಯವದೆನಶ್ವರ
ವು ॥ ನಿರ್ಮಲಜ್ಞಾನಸಾಧ್ಯವೆನಿತ್ಯವೆಂದು ನಿಷ್ಕರ್ಮಕಾಮರು
ಪೇಳುತಿಹರು ॥೧೮॥

ಒದಾಗಿ ತತ್ವಶಾಸ್ತ್ರಪಾರೀಣರಾಗಿ ಅದಕ್ಕನುಗುಣವಾದ ಅನುಭವದಲ್ಲಿ ಶೂರರಾಗಿ, ಸ್ರಕ್ಚಂದನ ವನಿತಾದಿ ವಿಷಯಾಭಿಲಾಷೆಯನ್ನು ತೊರೆದು ವಿರಕ್ತಿಯೆಂಬ ಕಾಂತೆಯ ಕೈಯನ್ನು ಹಿಡಿದಿರುವ ಮಹಾನುಭಾವರು ಹೇಳುತಲಿರುವರು. ॥೧೮॥ ವೇದಾಂತಶಾಸ್ತ್ರಾಧ್ಯಯನ ಧುರೀಣರಾದ ಮಹನೀಯರು ಎರಡು ಎಂಬ ಭೇದಕ್ಕೆ ಅಬದ್ಧತೆಯಂ ತಿಳಿದಿರುವರು. ಅಂದರೆ,—ಮಿಥ್ಯಾತ್ವವನ್ನು ಶಾಸ್ತ್ರಪ್ರಮಾಣಗಳಿಂದ ಒಡಂಬಟ್ಟಿರುವರು. ಆದುದರಿಂದಲೆ ಸಜಾತೀಯ ಭೇದ, ವಿಜಾತೀಯಭೇದ, ಸ್ವಗತಭೇದಗಳೆಂಬ ಭೇದತ್ರಯ ಶೂನ್ಯವಾಗಿರುವ ಬ್ರಹ್ಮಸ್ವರೂಪಕ್ಕೆ ಎರಡನೆಯ ಪದಾರ್ಥವು ಮತ್ತೊಂದು ಇಲ್ಲವೆಂಬದಾಗಿ ಅರಿತರೆ ಕೃತಾರ್ಥತೆ ಎಂಬುವದುಂಟಾಗುವದು. ಈ ಅರ್ಥವು ಪ್ರಮಾಣಾಭಾಸಗಳನ್ನು, ಯುಕ್ತ್ಯಾಭಾಸಗಳನ್ನು ನಂಬಿಕೊಂಡು ವ್ಯವಹರಿಸುವ ದುಸ್ತರ್ಕಗಳಿಗೆ ಅಪಹರಿಸಲಶಕ್ಯವಾಗಿರುವದೆಂದು ಅರಿಯತಕ್ಕದ್ದು. ॥೧೯॥ ಎರಡು ಎಂಬದಾಗಿ ಭೇದವಿಲ್ಲದೆ ಇರುವದು ಯಾವದುಂಟೋ ? ಅದೇ ಪರಿಪೂರ್ಣವಾಗಿರುವಂಥಾದ್ದಾಗಿ ಇರುವದು. ಅನಿತ್ಯವೆನ್ನಲ್ಪಡುವದೇ ಸುಖಸ್ವರೂಪವಾಗಿರುವದು. ಆ ಸುಖ ಸ್ವರೂಪವಾಗಿರುವದೇ ಚಿತ್ಪದಾರ್ಥ ವೆನ್ನಲ್ಪಡುವದು. ಈ ಚಿದ್ವಸ್ತುವೇ ಅಬಾಧಿತವಾದ ಸತ್ಪದಾರ್ಥವಾಗಿರುವದು. ಈ ಭೇದವಿಲ್ಲದ್ದಾಗಿಯೂ, ಪರಿಪೂರ್ಣವಾಗಿಯು, ಆನಂದಸ್ವರೂಪವಾಗಿಯು, ಸ್ವತಃಪ್ರಕಾಶಮಾನವಾಗಿಯು, ತ್ರಿಕಾಲಾಬಾಧಿತವಾಗಿಯೂ, ಸರ್ವಸಾಕ್ಷಿಯಾಗಿಯೂ, ಇರುವ ಬ್ರಹ್ಮಪದಾರ್ಥವೆ ನಾನೆಂಬದಾಗಿ

---

ಪಿರಿಯರುಭೇದಕ್ಕೆ ಮಿಥ್ಯಾತ್ವಮುಳವಟ್ಟಕಾರಣದಿಂದಲೆ ದ್ವೈತ
ನ್ಯಕ್ಕೆ ! ಎರಡಿಲ್ಲವೆಂದು ತಿಳಿದು ದುಸ್ತರ್ಕ ಪರರಿಂದ ಹಾರ್ಯ
ಮಾಗಿಹುದು ॥೧೯॥

ಭೇದವಿಲ್ಲದುದೆನಿತ್ಯವುನಿತ್ಯವೆನಿಸುವ ದಾದುದಾಸುಖಮಾಸು
ಖವೆ ! ಆದುದುಚಿತ್ತು ಚಿತ್ತೆ ಸತ್ಪದಾರ್ಥವೆಂದಾದರಿಸದುವೆ
ನಾನೆಂದು ॥೨೦॥

ಎಲೈ ಮನಃಪ್ರಭುವೇ ? ನೀನು ಅರಿತುಕೊಳ್ಳುವನಾಗು. ॥೨೦॥

೪ ಟೀ॥ ವ॥ ಈ ಪ್ರಕಾರವಾಗಿ ನಿತ್ಯಭಾವ ಪದ್ಧತಿಯನ್ನು ವಿಶದವಾಗಿ ಅವಗಾಹನಕ್ಕೆ ಬರುವಂತೆಮಾಡಿ ಮತ್ತೊಂದು ಬಗೆಯಿಂದ ವಿವರಿಸುತ್ತಾರೆ, ಅದೆಂತೆಂದರೆ ?

೧೨ ಇಂತು ನಿತ್ಯಭಾವಪದ್ಧತಿಯು ಮುಗಿದುದು.

### ೧೩ ಪರಿಪೂರ್ಣ ಭಾವಪದ್ಧತಿ ವಿಚಾರ ಪ್ರಾರಂಭವು.

೧ ಟೀ॥ ಜಂಪೆ॥ ದಿಕ್ಕುಗಳೊಳಗೆ ಇದು ಇಂಥದಿಕ್ಕು ಅಂದರೆ ಇದು ಪೂರ್ವ, ಇದು ಪಶ್ಚಿಮ, ವೆಂಬದಾಗಿ ವ್ಯವಹರಿಸಲಿಕ್ಕೆ ಸೂರ್ಯಚಂದ್ರರ ಉದಯಾಸ್ತಮಯಗಳು ಕಾರಣವಾಗಿರುವವು ಅಂದೆಂತೆಂದರೆ? ಸೂರ್ಯನುದಿಸುವ ದಿಕ್ಕನ್ನು ಅವಲೋಕಿಸಿ ಇದುಪೂರ್ವವೆಂತಲೂ, ಸೂರ್ಯಾಸ್ತಮಯವಾಗುವದನ್ನು ನೋಡಿ, ಇದುಪಶ್ಚಿಮದಿಕ್ಕೆಂಬದಾಗಿಯೂ ಇವುಗಳನ್ನುದ್ದೇಶಮಾಡಿಕೊಂಡು ಎಡಬಲಗಳಲ್ಲಿರುವ ದಿಕ್ಕುಗಳನ್ನು ದಕ್ಷಿಣೋತ್ತರಗಳೆಂಬದಾಗಿಯೂ ವ್ಯವಹರಿಸಲ್ಪಡುವದು. ಈ ಸೂರ್ಯಚಂದ್ರರಿಲ್ಲದ ಪಕ್ಷದಲ್ಲಿ ಸಾಮಾನ್ಯವಾಗಿ ಎಲ್ಲ ದಿಕ್ಕುಗಳು ಮೇಘಮಂಡಲಾವೃತಗಳಾಗಿರುವದರಿಂದ ಇದು ಪೂರ್ವ, ಇದು ಪಶ್ಚಿಮ, ಇದು ಉತ್ತರ, ಇದು ದಕ್ಷಿಣದಿಕ್ಕೆಂಬದಾಗಿ ಕಂಡು ಹಿಡಿಯುವದಕ್ಕೆ ಆಗದೆ ಇರುವದು. ॥೧॥ ಚತುರ್ಮುಖನಿಂದ ಸೃಷ್ಟ

---

೪ ಮೂ॥ ವ॥ ಇಂತೆಂದು ನಿತ್ಯಭಾವಪದ್ಧತಿಯಂ ಪ್ರತಿಶ್ರವಿಪಂತೆ ಮಾಡಿ ಇನ್ನೊಂದು ಪ್ರಕಾರಮಂ ಪೇಳುತಿರ್ದಪನದೆಂತೆನೆ.

೧೨ ಇಂತು ನಿತ್ಯಭಾವಪದ್ಧತಿಯು ಮುಗಿದುದು.

೧೩ ಪರಿಪೂರ್ಣ ಭಾವಪದ್ಧತಿ ವಿಚಾರ ಪ್ರಾರಂಭವು.

೧ ಮೂ॥ ಜಂಪೆ॥ ದಿಕ್ಕಿನೊಳಿಹಪ್ರಭವಕ್ಕೆ ಚಂದ್ರಾರ್ಕರೆ, ಪಕ್ಕವಾಗಿಹರಭ್ರಪಟಲವೆಂತೋಕೇಳ್ ॥೧॥

ವಾಗಿರುವ ಈ ಬ್ರಹ್ಮಾಂಡವಿರುವ ಪರ್ಯಂತರವು ಆ ಚತುರಾನನ ಆಯುಃ ಪರಿಮಿತ ಕಾಲದ ವ್ಯಾಪಕತೆಯನ್ನನುಸರಿಸಿ ಈ ಪಾಂಚಭೌತಿಕವಾದ ಶರೀರದೊಳು ಪ್ರಾಣವಾಯುವು ಸಂದರ್ಭಾನುಸಾರವಾಗಿ ಶಕ್ತಿಯನ್ನು ಹೊಂದಿ ಇರುತಲಿರುವದು ॥೧॥ ಪೃಥಿವಿಜಲ ಮುಂತಾದ ಪಂಚಭೂತಗಳೊಳಗೆ ಸಂತೋಷವೆಂಬುವದಿಲ್ಲದೆಯು ಮತ್ತು ಚೆನ್ನಾಗಿ ವಿಚಾರಮಾಡಿ ನೋಡಿದರೆ ಪರಿಪೂರ್ಣತ್ವವೆಂಬುವದೂ ಇಲ್ಲವೆಂದು ಸ್ಪಷ್ಟವಾಗಿ ತಿಳಿಯಬರುವದು. ॥ ೩ ॥ ವಿಚಾರದಿಂದ ಅಪರೋಕ್ಷರೂಪವಾದದ್ದಾಗಿಯು, ಪರಿಪೂರ್ಣತೆಯನ್ನಳವಟ್ಟಿರುವದಾಗಿಯೂ, ಪರಮಾರ್ಥ ಸ್ವರೂಪವಾದದ್ದಾಗಿಯೂ, ಭೇದಗಂಧ ರಹಿತವಾದದ್ದಾಗಿಯೂ, ದೋಷಲೇಶಕ್ಕವಕಾಶ ವಾಗದಿರುವದಾಗಿಯೂ ಇರುವದು ಬ್ರಹ್ಮಪದಾರ್ಥ ಒಂದೇ ಎಂಬದಾಗಿ ತಿಳಿಯತಕ್ಕದ್ದು ॥೪॥ ಪೃಥಿವ್ಯಪ್ತೇಜೋವಾಯ್ವಾಕಾಶಗಳೆಂಬ ಪಂಚಭೂತಗಳೊಡನೆ ಕೂಡಿ ಇದ್ದಾಗ್ಯೂ ಈ ಪಂಚಭೂತಗಳು ನಾಶವನ್ನು ಹೊಂದಿದರು, ಆನಿಜವಾಗಿರುವ ವಸ್ತುವು ಎಂದಿಗೂ ನಾಶವನ್ನು ಹೊಂದುವದಿಲ್ಲ. ಮತ್ತು ಈ ತತ್ವಗಳೊಡನೆ ಸೇರಿ ಬಿಡುಗಡೆಯನ್ನು ಹೊಂದುವದಿಲ್ಲವು. ಇನ್ನು ಎಂದಿಗೂ ಚಾಂಚಲ್ಯವನ್ನು ಹೊಂದುವದಿಲ್ಲ. ಇದಕ್ಕೆ ಸಮವಾಗಿರುವ ವಸ್ತುವಾಗಲಿ ಇಲ್ಲವೆ ಅಧಿಕವಾಗಿರುವ ಪದಾರ್ಥವೇ ಆಗಲಿ ಅಥವಾ ನ್ಯೂನವಾದ ದ್ರವ್ಯವೇ ಆಗಲಿ, ಕಾಲತ್ರಯದಲ್ಲಿಯೂ ಪರಮಾ

---

ಅಂಡವಿರುವನ್ನಬರ ಪವನಕಾಲದವಿಭುತೆ, ಕಂಡಿಹುದು ಶರೀರ
ಕಾನಿಲಬಲವನು ॥೧॥
ಮಿಕ್ಕಭೂತವ್ರಜದ ದಿಕ್ಕಿನೊಳ್ಸೌಖ್ಯತುಕಂ, ದಕ್ಕಿರುವದಲ್ಲದೆ
ನಿಧಾನಿಸಲುಪೂರ್ತಿ ॥೩॥
ಎಡೆಗೊಳದ ಸಮ್ಮುಖದೊಳಿಕೆಗೊಂಡಿಹ ನಿಜವೇ ಪಿಡಿದಿಹುದ
ಭೇದಮುಂಕಡೆಮೊದಲೆಸೆಯದೆ ॥೪॥
ಕೂಡಿವರೊಡನೆಕೆಡದು ಕೂಡದಗಲದು ಚಲಿಸದೀಡಿರಿಹುದದನೆ
ನಾನೆಂದುನಿಶ್ಚೈಸು ॥೫॥

ರ್ಥವಾಗಿ ಇಲ್ಲವೇ ಇಲ್ಲವೆಂದು ತಿಳಿಯುವದಲ್ಲದೆ ಆ ಬ್ರಹ್ಮಸ್ವರೂಪವೆ ನಾನೆಂದು ತಿಳದುಕೊಳ್ಳು. ॥೫॥

೧ ಟೀ॥ ವ॥ ಯಾವರೀತಿಯಿಂದಲಾದರು ಈ ಬ್ರಹ್ಮಪದಾರ್ಥಕ್ಕೆ ಸಜಾತೀಯವಾದ ವಸ್ತುವಂದುಂಟೆಂದರೆ ಸ್ವಗತಭೇದವೆಂಬೊಂದು ದೋಷವು ಬರುವದು. ಅಥವಾ ಈ ಬ್ರಹ್ಮಪದಾರ್ಥಕ್ಕೆ ಸಜಾತೀಯವಾಗಿ ಹೆಚ್ಚಾದದ್ದಾಗಿಯಾಗಲಿ ಇಲ್ಲವೆ ಕಡಮೆಯಾದದ್ದಾಗಿಯಾಗಲಿ ಒಂದು ವಸ್ತುವುಂಟೆಂದರೆ ಆಗ ಸಜಾತೀಯ ಭೇದವು ಬರುವದು. ಇನ್ನು ಆ ಬ್ರಹ್ಮಪದಾರ್ಥಕ್ಕೆ ವಿಜಾತೀಯವಾಗಿ ಯಾಗಲಿ, ಒಂದು ಪದಾರ್ಥವು ನ್ಯೂನವಾಗಿ ಆಗಲಿ ಅಧಿಕವಾಗಿಯಾಗಲಿ ಇಧೆ, ಎಂದರೆ ಆಗ ವಿಜಾತೀಯಭೇದವು ಬರುವುದು. ಈ ಮೇರಿಗೆ ಮೂರು ವಿಧವಾದ ದೋಷಗಳು ಸಂಭವಿಸುವವು. ಇವುಗಳಿಗೆ ಪರಿಹಾರ ಕ್ರಮವೆಂತೆಂದು ಸಂದೇಹವುಂಟಾದರೆ ಇವುಗಳ ಪರಿಹಾರ ವಿಧಾನವನ್ನು ಬರೆಯುತಲಿಧಾರೆ.

೨ ಟೀ॥ ಜಂಪೆ॥ ಪೂರ್ವದೊಳು ಸಂದರ್ಭವಶದಿಂದ ಈ ಭೇದತ್ರಯ ವಿಚಾರವು ಬಂದಕಾಲದಲ್ಲಿ ವಿಶದವಾಗಿಯೆ ಉದಹರಿಸಲ್ಪಟ್ಟಿರುವದು. ಆದಾಗ್ಯೂ ಈಗ ಕ್ರಮಪ್ರಾಪ್ತವಾಗಿ ಬಂದುದರಿಂದ ವಿವರಿಸಲ್ಪಡುವದು. ಯಾವದಾದರೊಂದು ವೃಕ್ಷದಲ್ಲಿ ಬಿಟ್ಟ ಹಣ್ಣುಗಳು, ಎಲೆಗಳು, ಇವುಗಳ ಸಮುದಾಯವೆ ತನಗಿಂತಲು ಅಂದರೆ ಆವೃಕ್ಷಕ್ಕಿಂತಲೂ ಭಿನ್ನವಾಗಿರುವದು, ಒಂದು ವೃಕ್ಷಕ್ಕೆ ಮತ್ತೊಂದು ಅಂಥ ವೃಕ್ಷವೆ ಸ್ವಸಜಾತೀಯವಾಗಿರುವದು. ॥೧॥ ಸ್ಥಾವರವಾಗಿರುವ ಪಾಷಾಣವು ಈ ಹಿಂದೆ ಹೇಳಿದ ವೃಕ್ಷಕ್ಕೆ ವಿಜಾತೀಯವಾಗಿರು

---

೧ ಮೂ॥ ವ॥ ಇದರಲ್ಲಿ ಸ್ವಗತ ಸ್ವಜಾತೀಯ ವಿಜಾತೀಯವೆಂಬ ಭೇದತ್ರಯದೋಷವರ್ಜದಲಾ ಮೇಣದನೆಂತು ನಿವಾರಿಸಬೇಕೆಂದೊಡದಕ್ಕೆ.

೨ ಮೂ॥ ಜಂಪೆ॥ ತರುವಿನೊಳು ಫಲಪತ್ರತತಿಯೆ ಸ್ವಗತವಹುದು। ತರುವಿಂಗಿತರವಾದತರುಸ್ವಜಾತೀಯಂ ॥೧॥

ವದು, ಹ್ಯಾಂಗೆ? ಅದರಂತೆಯೇ ಬ್ರಹ್ಮ ಪದಾರ್ಥದೊಳಿರುವ ಸತ್ವರಜಸ್ತಮೋಗುಣಗಳ ಪ್ರಕಾಶವೇ ಸ್ವಗತ ಭೇದವೆನ್ನಲ್ಪಡುವದು ॥ ೧ ॥ ಚೈತನ್ಯರೂಪವಾಗಿರುವ ಜೀವನೆ ಸ್ವಸಜಾತೀಯನಾಗಿರುವನು. ಇಂತಪ್ಪ ಜೀವನಿಗೆ ಉಪಭೋಗಾರ್ಹವಾಗಿರುವ ಆಕಾಶವೇ ಮುಂತಾದ ಪಂಚಭೂತಗಳ ಸಮುದಾಯದಿಂದಲು ಅಥವ ಭಿನ್ನಭಿನ್ನವಾಗಿಯು ನಿರ್ಮಲವಾಗಿರುವ ವಿವಿಧವಾದ ಕಾರ್ಯಜಾತವು ॥೨॥ ವಿಜಾತೀಯವಾಗುತಲಿರುವದು. ಹೀಗಿರಲಾಗಿ ಬ್ರಹ್ಮಪದಾರ್ಥವು ಸಜಾತೀಯ,ವಿಜಾತೀಯ,ಸ್ವಗತಗಳೆಂಬ ಭೇದತ್ರಯದಿಂದ ಶೂನ್ಯವಾದಂಥಾದ್ದು ಎಂತಹದು? ಮತ್ತು ಈ ಮೇಲೆ ಹೇಳಿದವುಗಳೆಲ್ಲ ಭಿನ್ನಗಳಾಗಿರುತಲಿರಲಾಗಿ ಸರ್ವತ್ರಪರಿಪೂರ್ಣವಾಗಿರುವಂಥಾದ್ದು ಹ್ಯಾಗಾದೀತು. ॥೪॥ ಎಂದೀಪ್ರಕಾರವಾಗಿ, ಎಲೈಮನಃಪ್ರಭುವೆ ನಿನಗೆ ಸಂದೇಹವೆಂಬ ಬಾಧೆಯುಂಟಾಗಿರುವದು. ಆದ್ದರಿಂದ ಅಂಥ ಸಂದೇಹದ ಉಪದ್ರವವು ಸುತರಾಂತಪ್ಪಿ ಹೋಗುವಂತೆ ನಿನಗೆ ವಿಶದಪಡಿಸುತ್ತೇನೆ ಸಾವಧಾನದಿಂದ ಕೇಳು. ... ॥೫॥

೪ ಟೀ॥ ವ॥ ಎಲೈಮನೋರಾಜನೆ ಕೇಳು! ವೃಕ್ಷದಲ್ಲಿ ಹಣ್ಣುಗಳು ಎಲೆಗಳು ಹುಟ್ಟಿ ಇರುವದರಿಂದಲೆ, ಆ ವೃಕ್ಷಕ್ಕಿಂತಲು ಇತರವಾದ

---

ಸ್ಥಿರವಾದಶಿಲೆ ವಿಜಾತೀಯ ಮೆಂತಿದರಲ್ಲಿ ಪರಬ್ರಹ್ಮದಲಿ ಗು
ಣಸ್ಫುರಣೆಯೇಸ್ವಗತಂ ॥೧॥
ಜೀವನೆಸ್ವಜಾತೀಯಜೀವಭೋಗ್ಯವೆನಿಸುವ ॥ ದೇವಪಥಮು
ಖ್ಯಭೂತಾವಳಿಯಕಾರ್ಯಂ ॥೨॥
ಅಪ್ಪುದುವಿಜಾತೀಯಮಾಗಲಿಂತಾವಸ್ತು ತಪ್ಪದೆ ಪರಿಪೂರ್ಣ
ಧಾಮಮೆಂತಹುದು ॥೪॥
ಎಂದು ಬಾಧಿಪುದಲಾ ಸಂದೇಹಗಂನಿನಗದರ, ಚಂದಮಂ ಕೇ
ಳುತತ್ಸಂದೇಹಮಳಿಯೆ ॥೫॥

೪ ಮೂ॥ ವಚನ॥ ಅರಸೆ ತರುವಿನೊಳು ಫಲಪತ್ರಾದಿಗಳುದಿಸಿದ
ತರುವಿಂಗನ್ಯಮಾದ ಗುಣರೂಪನಾಮಂಗಳಂ ತಳೆದಿರ್ಪಂತೆ,

ಗುಣವು, ಆಕಾರವು, ಹೆಸರು, ಇವುಗಳನ್ನು ಹೊಂದಿ ಇರುವಹಾಗೆ ಸದ್ರೂಪವಾಗಿ, ಹೊಳೆವ ಪರಬ್ರಹ್ಮ ಪದಾರ್ಥದಲ್ಲಿ ಸತ್ವರಜಸ್ತಮಗಳೆಂಬ ಗುಣತ್ರಯವು ಹುಟ್ಟಿ ಸದ್ರೂಪವಾಗಿರುವ ಬ್ರಹ್ಮಕ್ಕೆ ಇತರವಾದ ಆಕಾರವನ್ನು, ಹೆಸರುಗಳನ್ನು ಹೊಂದಿ ಇರುವವೆಂಬದಾಗಿ ಆಕ್ಷೇಪವು ಬಂದರೆ? ಹಣ್ಣುಗಳಲ್ಲಿ ವೃಕ್ಷವಿಲ್ಲದಿರುವಹಾಗೆ ಸತ್ವರಜಸ್ತಮಗಳೆಂಬ ಗುಣತ್ರಯದಲ್ಲಿ, ಬ್ರಹ್ಮಪದಾರ್ಥವು ಅಲ್ಲದೆ ಅಳಿವು, ಮತ್ತು ಹಣ್ಣುಮೊದಲಾದವುಗಳಿಗು, ವೃಕ್ಷಕ್ಕು ರುಚಿವಿಶೇಷವುಂಟಾಗಿರುವಹಾಗೆ, ಸತ್ವರಜಸ್ತಮೋಗುಣಗಳಲ್ಲಿ, ಸದ್ರೂಪವಾಗಿರುವ ಬ್ರಹ್ಮಪದಾರ್ಥಕ್ಕಿಂತಲು, ಅನ್ಯತ್ವವೆಂಬುವದು ಸಂಭವಿಸಿರುವದೆ? ಇಲ್ಲವು. ಇದಲ್ಲದೆ ವೃಕ್ಷಕ್ಕು ಹಣ್ಣುಮೊದಲಾದವುಗಳಿಗು ಪರಸ್ಪರವಾಗಿ, ಒಂದು ಹುಟ್ಟಿದ್ದೆಂತಲು, ಮತ್ತೊಂದು ಹುಟ್ಟಿಸುವದೆಂತಲು ಈ ಪ್ರಕಾರವಾಗಿ, ಜನ್ಯಜನಕ ಭಾವಸಂಬಂಧವೆಂಬುವದು ಹ್ಯಾಗೆ ಇರುವದೊ? ಅದರಂತೆ ಬ್ರಹ್ಮಪದಾರ್ಥಕ್ಕು ಗುಣಾದಿಗಳಿಗು ಅನ್ಯೋನ್ಯವಾಗಿ ಜನ್ಯಜನಕತ್ವವೆಂಬ ಪರಮಾರ್ಥವಾದ ಸಂಬಂಧವೆಂಬುವದು ಉಂಟೆ? ಸರ್ವಾತ್ಮನಾ ಇಲ್ಲವು. ಈ ರೀತಿಯಾಗಿರುವದರಿಂದಲೇ ಸದ್ರೂಪವಾಗಿರುವ ಬ್ರಹ್ಮನಲ್ಲಿ ಸ್ವಗತಭೇದವೆಂಬ ದೋಷವು ಬಂದಕಾಲಕ್ಕು ಉಂಟಾಗುವದೇ ಇಲ್ಲವು. ಇದರಿಂದ ಒಂದು ಆಕ್ಷೇಪವು ನಿವೃತ್ತಿಯಾಯಿತು, ಇದಲ್ಲದೆ ಯಾವದಾದರೊಂದು ವೃಕ್ಷಕ್ಕೆ ಅದೆ ಜಾತಿಯಲ್ಲಿ ಹುಟ್ಟಿದ ಮತ್ತೊಂದು ವೃಕ್ಷವು ಇರುವ

---

ಸದ್ರೂಪವಾದ ಬ್ರಹ್ಮನಲ್ಲಿ ಗುಣತ್ರಯಂಗಳುದಿಸಿ ಸದ್ರೂಪ ಬ್ರಹ್ಮಕನ್ಯವಾದ ರೂಪನಾಮಂಗಳಂ ತಳೆದಿರ್ಪವೆಂದರೆ, ಫಲಾದಿಗಳಲ್ಲಿ ತರುವಿಲ್ಲದಂತೆ, ಗುಣಾದಿಗಳಲ್ಲಿ ಸದ್ವಸ್ತುವಿಲ್ಲದಿರ್ಪುದೆ, ಫಲಾದಿಗಳಲ್ಲಿ ತರುವಿಂಗೆ ವಿಶೇಷಘಟಿಸದಂತೆ ಗುಣಾದಿಗಳಲ್ಲಿ ಸದ್ವಸ್ತುವಿಂಗೆ ವಿಶೇಷಂ ಘಟಿಸಿರ್ಪುದೆ? ತರುಫಲಂಗಳಿಗೆ ಪರಸ್ಪರವಾಗಿ ಜನ್ಯಜನಕ ಸಂಬಂಧವಿರ್ಪುದೆ? ಇಂತೆಂದುದರಿಂ, ಸದ್ವಸ್ತುವಿನಲ್ಲಿ ಸ್ವಗತಭೇದ ದೋಷವಿಲ್ಲ. ತರು

ದರಿಂದ ಒಂದಕ್ಕೆ ಮತ್ತೊಂದು ಸಜಾತೀಯವಾಯಿತು. ಆದುದರಿಂದಲೆ ಸಜಾತೀಯಭೇದವು ಬಂದುದು. ಇದರಂತೆಯೇ ಭೂತಭವಿಷ್ಯದ್ವರ್ತಮಾನಗಳೆಂಬ ಕಾಲತ್ರಯದ ವಿದ್ಯಮಾನಗಳನ್ನು ತಿಳಿಯುವಿಕೆಯೆಂಬಿವೆ ಮೊದಲಾದ ಗುಣಗಳುಳ್ಳ ಚತ್ಸ್ವರೂಪನಾದ ಈಶ್ವರನಿಗು, ಹಾಗೆಯೆ ಕಾಲತ್ರಯ ವಿದ್ಯಮಾನಗಳಾದವುಗಳನ್ನು ಸ್ವಲ್ಪವಾಗಿ ತಿಳಿಯುವಿಕೆಯೆ, ಮೊದಲಾದ ಗುಣಗಳುಳ್ಳವನಾಗಿರುವ ಜೀವನು ಚೈತನ್ಯೈಕತ್ವವೆಂಬ ಗುಣದಿಂದ ಸಜಾತೀಯನಾಗಿರುವನು. ಆದುದರಿಂದಲೆ ಗುಣಾಧಿಕ್ಯ, ಗುಣನ್ಯೂನತೆಯೆಂಬ ಭಾವಭೇದದಿಂದ ಸಜಾತೀಯ ಭೇದವು ಬಂದುದು, ಎಂಬದಾಗಿ, ಮತ್ತೊಂದಾಕ್ಷೇಪವು ಬಂದರೆ ? ಈಶ್ವರತ್ವ ಜೀವತ್ವವೆಂಬವುಗಳು, ಮತ್ತು ಇವುಗಳಿಗೆ ಉಪಾಧಿಗಳಾಗಿರುವ ಮಾಯಾವಿದ್ಯೆಗಳು ನಿವೃತ್ತಿಯಾದ ಬಳಿಕ ಇವನು ಜೀವನು ಈತನು ಈಶ್ವರನು ಎಂಬ ಭೇದವು ಎಲ್ಲಿರುವದು, ಉಪಾಧಿಪರಿತ್ಯಾಗಾನಂತರದಲ್ಲಿ ಚೈತನ್ಯವೆಂಬುವದು ಒಂದೇ ಆಗಿರುವದಾದಕಾರಣ ಆಭಾಸವಾಗಿ ಮೇಲೆ ಹೇಳಿದಂತೆ ಭೇದವು ಕಂಡು ಬಂದರು ಪರಮಾರ್ಥ ವಿಚಾರವನ್ನು ಮಾಡಿದರೆ ಈಶ್ವರನಿಗೆ ಸಜಾತೀಯ ಭೇದವೆಂಬ ದೋಷಗಂಧವೇ ಇಲ್ಲವೆಂದು ಮೇಲೆ ಉದಹರಿಸಿದ ಯುಕ್ತಿಯಿಂದ ತಿಳಿಯತಕ್ಕದ್ದು. ಇದರಿಂದ ಎರಡನೆಯ ಆಕ್ಷೇಪವು ನಿವೃತ್ತವಾಯಿತು. ಇದರಮೇಲೆ, ವೃಕ್ಷಕ್ಕೆ ಸ್ಥಿರವಾಗಿರುವ ಕಲ್ಲುಗಳು ಮುಂತಾದ ಪದಾರ್ಥಗಳು ವಿಜಾತೀಯಗಳಾಗಿರು

---

ವಿಂಗೆ ತರುವಂತರವು ಸ್ವಜಾತೀಯಮಾದಂತೆ. ಸರ್ವಜ್ಞತ್ವಾದಿ ಗುಣಂಗಳುಳ್ಳ ಈಶ್ವರಂಗೆ ಕಿಂಚಿದ್ಜ್ಞತ್ವಾದಿ ಗುಣಂಗಳುಳ್ಳ ಜೀವಂಗೆ ಚೈತನ್ಯೈಕ್ಯದಿಂ ಸ್ವಜಾತೀಯತ್ವಮಾಗದೆ, ಎಂದರೆ ಮಾಯಾವಿದ್ಯೋಪಾಧಿಗಳಿಂ, ಸರ್ವಜ್ಞತ್ವ ಕಿಂಚಿದ್ಜ್ಞತ್ವಾದಿಗಳುಂ ಮಹೇಶ್ವರತ್ವ ಜೀವತ್ವಮುಂ ಬಂದುದು. ಈ ಉಪಾಧಿ ಇಲ್ಲದಂದು ಜೀವೇಶ್ವರತ್ವ ವ್ಯವಸ್ಥೆಯಿಲ್ಲಿಯದೆ ಎಂಬುದರಿಂ, ಸ್ವಜಾತೀಯಭೇದ ದೋಷಮಿಲ್ಲ. ತರುವಿಂಗೆ

ವವು. ಹ್ಯಾಗಂದರೆ ? ವೃಕ್ಷವು ಒಂದು ಜಾತಿಯಾಗಿರುವದು ಕಲ್ಲು ಮತ್ತೊಂದು ಜಾತಿಯದಾಗಿರುವುದು. ಆದುದರಿಂದಲೇ ಇವುಗಳಿಗೆ ವಿಜಾತೀಯಭೇದವು ಬಂದುದು. ಸ್ಥಿತಿಯನ್ನು ಪಡೆದಿರುವುದು, ತಿಳುವಳಿಕೆ, ಯುಂಟಾಗಿರುವುದು, ಸುಖಸ್ವರೂಪವಾಗಿರುವುದು, ಕೇಡಿಲ್ಲದೆ ಇರುವದು, ಅಖಂಡವಾಗಿರುವುದು, ಸರ್ವವ್ಯಾಪಿಯಾಗಿರುವದು, ಎಂಬೀಧರ್ಮಗಳನ್ನು ಹೊಂದಿರುವ ಬ್ರಹ್ಮಪದಾರ್ಥಕ್ಕೆ ಅಬದ್ಧವಾಗಿರುವದು, ಚೈತನ್ಯಸ್ವರೂಪವಾಗದೆ ಯಿರುವದು, ದುಃಖದಿಂದೊಡಗೂಡಿರುವದು. ಖಂಡಖಂಡವಾಗಿರುವದು, ಎಂಬಿವೆ ಮೊದಲಾದ ಧರ್ಮಗಳನ್ನು ಹೊಂದಿರುವ ಪಾಂಚಭೌತಿಕಾದಿ ಪದಾರ್ಥಗಳು ಮಾಯಾ ಸ್ವರೂಪವನ್ನನುಸರಿಸಿ ಕ್ರಮದಿಂದ ಪ್ರತಿದ್ವಂದ್ವಗಳಾಗಿರುವವಾದಕಾರಣ ವಿಜಾತೀಯ ಭೇದಬಂದುದಾದಕಾರಣ ವಿಜಾತೀಯ ಭೇದದೋಷವು ಬಂದುದೆಂಬದಾಗಿ ಆಕ್ಷೇಪವು ಬಂದರೆ ? ಯಥಾರ್ಥಸ್ವರೂಪದಲ್ಲಿ ಅಬದ್ಧವಾದ ವಸ್ತುವಿಲ್ಲವು ಅರಿವಿನ ಸ್ವರೂಪವಾಗಿರುವ ವಸ್ತುವಿನಲ್ಲಿ ಅರಿಯೆನೆಂಬ ಧರ್ಮವಿಲ್ಲವು. ಸುಖಸ್ವರೂಪವಾದ ವಸ್ತುವಿನಲ್ಲಿ ದುಃಖವೆಂಬುವದಿಲ್ಲವು. ನಿತ್ಯವಾಗಿರುವ ವಸ್ತುವಿನಲ್ಲಿ ಅನಿತ್ಯತೆ ಯೆಂಬುದಿಲ್ಲವು. ಪರಿಪೂರ್ಣವಾದ ವಸ್ತುವಿನಲ್ಲಿ ಖಂಡತ್ವವೆಂಬುದಿಲ್ಲವು. ಮತ್ತೆ ಇವುಗಳೆಲ್ಲಿರುವವೆಂದರೆ ? ಸರ್ವದಾ ನಡೆಯುತಲಿರುವ ಮಹಾಕಾಲವನ್ನು ಹಿಡಿದು, ಮತ್ತು ಆಯಾಯ ದೇಶವನ್ನು ಹಿಡಿದು ಇವುಗಳು ತೋರುತಲಿದ್ದರೆ, ಆಗ ಹೇಳಲು ಒಹುದು. ಅಂದರೆ ಒಂದು ಕಾಲದಲ್ಲಿ ಒಂದು ಬಗೆಯಾಗಿಯು ಮತ್ತೊಂ

ಪಾಷಾಣಾದಿಗಳು ವಿಜಾತೀಯವಾದಂತೆ ಸತ್ತಿಗಂಚಿತ್ತಿಗಂ, ಆನಂದಕಂ, ನಿತ್ಯಕಂ, ಪರಿಪೂರ್ಣಕ್ಕಂ, ಅನೃತವೆಂದು, ಜಡವೆಂದು, ದುಃಖವೆಂದು, ನಶ್ವರವೆಂದು, ಖಂಡಿತವೆಂದು, ಕ್ರಮದಿಂ ಮಾಯಾಸ್ವರೂಪವಂ ಪ್ರತಿಯೋಗಿ ಯಾಗಿರ್ಪುದಲಾಯೆಂದರೆ, ಇರುವದರೊಳಿಲ್ಲವೆಂಬುದಿಲ್ಲ. ತಿಳಿವಿನೊಳ್ತಿಳಿಯನೆಂಬುದಿಲ್ಲ. ಆನಂದದಲ್ಲಿ ದುಃಖವಿಲ್ಲ ನಿತ್ಯದಲ್ಲಿ ಕೇಡಿಲ್ಲ. ಪರಿಪೂ

ದು ಕಾಲದಲ್ಲಿ ಇನ್ನೊಂದು ಬಗೆಯಾಗಿಯು ಇದ್ದರೆ ಆಗಕಾಲಭೇದದಿಂದ ಎರಡು ವಿರುದ್ಧ ಧರ್ಮಗಳಾದಾಗ್ಯು ಬಂದರಲ್ಲಿರ ಬಹುದು, ಬ್ರಹ್ಮಪದಾರ್ಥವಾದರೆ ಎಲ್ಲಕಾಲದಲ್ಲಿಯು, ಎಲ್ಲ ವಸ್ತುಗಳಲ್ಲಿಯು, ವ್ಯಾಪ್ತವಾಗಿರುವದರಿಂದ ಪರಿಪೂರ್ಣತೆಯನ್ನಳವಟ್ಟಿರುವದು, ಈ ಮೇಲೆ ಹೇಳಿದಕಾಲಕ್ಕೆ ಭೂತಭವಿಷ್ಯದ್ವರ್ತಮಾನಗಳೆಂಬ ಕಾಲಗಳನ್ನೆ ಹಿಡಿದು ಕಾಲವಿಧೆ, ಕಾಲವು ಪ್ರಕಾಶಿಸುತ್ತೆ. ದೇಶವಿಧೆ, ದೇಶವು ಪ್ರಕಾಶಿಸುತ್ತೆ, ಎಂದೀ ಪ್ರಕಾರವಾಗಿ ಇವುಗಳಿಗಲ್ಲ ಪರಿಚ್ಛೇದವುಂಟು, ಬ್ರಹ್ಮಪದಾರ್ಥಕ್ಕಾದರೋ ? ಈಕಾಲ ಪರಿಚ್ಛೇದ, ದೇಶಪರಿಚ್ಛೇದವಸ್ತು ಪರಿಚ್ಛೇದವೆಂಬ ಪರಿಚ್ಛೇದದೋಷಲೇಶವೂ ಇಲ್ಲವು. ವಿಜಾತೀಯ ಭೇದದೋಷವೂ ಇಲ್ಲವು. ಹಾಗಾದರೆ ಇದಂ ಹೀಗೆಯೆ ಒಪ್ಪಿಕೊಂಡರೂ, ನಿತ್ಯಜ್ಞಾನಾನಂದಗಳಿಂದ ಪರಿಪೂರ್ಣವಾಗಿರುವ ವಸ್ತುಗಳಿಗೆ ಪರಿಚ್ಛೇದದೋಷವು ಹ್ಯಾಂಗೆ ಉಂಟಾಗುವದಿಲ್ಲವೆಂಬದಾಗಿ ಕೇಳ ಬಂದಂಥ ಮನುಜಗೆ ಉತ್ತರ ವೆಂತೆಂದೊಡೆ, ಸತ್ಯತ್ವ, ನಿತ್ಯತ್ವ, ಆನಂದ, ಚಿತ್ವಗಳೆಂಬಿವು ಬೇರೆಬೇರೆಯಾಗಿದ್ದರೆ ಆಗಲೀ ಪ್ರಶ್ನೆಯನ್ನು ಕೇಳಬೇಕು. ಇವುಗಳು ಪರಸ್ಪರ ಭಿನ್ನಗಳಿಲ್ಲವೆಂಬದಾಗಿ ಹಿಂದೆ ಹೇಳಿದ ಯುಕ್ತಿಜಾಲಗಳಿಂದ ತಿಳಿದಮೇಲೆಯು, ಕೇಳಬಾರದು, ಯಾಕೆಂದರೆ—ತನ್ನ ಹೆಗಲಮೇಲೆ ಕುರಿಯುಮರಿಯ

---

ರ್ಣದಲ್ಲಿ ಎಡೆದೆರೆಪಿಲ್ಲ. ಮತ್ತೆಲ್ಲಿರ್ಪುದೆಂದರೆ ಕಾಲಮಂಪಿಡಿದು, ದೇಶವಂಪಿಡಿದು, ವಸ್ತುವಂಪಿಡಿದು ತೋರಬೇಕು. ಸರ್ವಕಾಲದಲ್ಲಿಯೂ, ಸರ್ವ ದೇಶದಲ್ಲಿಯು, ಸರ್ವವಸ್ತುವಿನಲ್ಲಿಯು, ಕಾಲೋಸ್ತಿ, ಕಾಲೋಭಾತಿ, ದೇಶೋಸ್ತಿ, ದೇಶೋಭಾತಿ, ವಸ್ತುವಸ್ತಿ, ವಸ್ತುಭಾತಿ. ಎಂಬುದರಿಂ ಸಚ್ಚಿತ್ತುಗಳಿಗೆ ಕಾಲ ದೇಶವಸ್ತು ಪರಿಚ್ಛೇದದೋಷವಿಲ್ಲ. ಹಾಂಗಾದರಾಗಲಿ ಆನಂದ ನಿತ್ಯಪರಿಪೂರ್ಣತ್ವಗಳಿಗೆ ಪರಿಚ್ಛೇದದೋಷಬಾರದೆ ? ಎಂದರೆ ಸಚಿತ್ತುಗಳನ್ಯಗಳೆ ವಸ್ತುಗಳಾದರೆ ಹೀಗೆಂದು ವಿತರ್ಕಿಸಬೇಕು. ತನ್ನ ಹೆಗಲೇರಿದ ಕುರಿಯುಂ ಕಾಣದೆ ದಿಕ್ಕಿ

ನ್ನು ಹೊತ್ತುಕೊಂಡು ಆ ಮರಿಯನ್ನು ಕಾಣೆನೆಂಬದಾಗಿ ಅದನ್ನೇ ಎಲ್ಲಾ ಕಡೆಯಲ್ಲಿಯು ಹುಡುಕುತ ಬಂದಾಸೊಂದು ಭಾವಿಯ ತಡಿಗೆ ಬಂದು ಆ ಭಾವಿಯನೀರಿನಲ್ಲಿ ಪ್ರತಿಬಿಂಬಿಸಿದ ಕುರಿಮರಿಯ ರೂಪವ ನ್ನು ಕಂಡು ಅಯ್ಯೋ ನನ್ನ ಕುರಿಮರಿಯು ಈ ಕೊಳದಲ್ಲಿ ಬಿದ್ದು, ಇರುವದೆಂಬದಾಗಿ ಆ ಕೂಪೋದಕದಲ್ಲಿ ಬಿದ್ದಕುರುಬನಂತೆ ಕೇಳಬೇ ಕಾದರೆ ಕೇಳಬೇಹುದು. ಇತರ ಮತಗಳವರು ಹೇಳುವ ಸಿದ್ಧಾಂತವ ನ್ನು ತಿಳಿಯದೆ ಮಾತನಾಡಬಾರದು. ಈ ಪ್ರತ್ಯಕ್ಷವಾಗಿರುವ ಪರಿಪೂ ರ್ಣವಸ್ತುವು ಹಿಂದೆ ಉದಹರಿಸಿದ ಸಚ್ಚಿದಾನಂದಾದಿ ರೂಪಸ್ವರೂ ಪಲಕ್ಷಣ ಮುಳ್ಳದ್ದು, ಎಂಬದಾಗಿ ಚನ್ನಾಗಿ ತಿಳದು ಅದೇ ನಾನೆಂಬ ದಾಗಿ ತಿಳದರೆ.

೫೯ ಟೀ॥ ಕಂದ॥ ಈ ಪ್ರಕಾರವಾಗಿ ಉದಹರಿಸಲ್ಪಟ್ಟ ಬ್ರಹ್ಮವಿ ದ್ಯಾಧ್ಯಯನವನ್ನು ಮಾಡಿ, ಅದರಿಂದುಂಟಾದ ಪರಿಪಕ್ವವಾದ ಜ್ಞಾನ ದಿಂದ ಪೂರ್ಣವಾಗಿರುವ ಸದ್ವಸ್ತುವೆ ಸಾಕ್ಷಾದ್ಬ್ರಹ್ಮಸ್ವರೂಪವು. ಅದೆ ನಾನು ಯೆಂಬ ಭಾವನೆಯು ಲೇಶವಾದರು ಚಾಂಚಲ್ಯವನ್ನು ಹೊಂದದೆ ಸ್ಥೈರ್ಯವನ್ನು ಹೊಂದಿದರೆ, ಆಗಲೆ ಅಂತಪ್ಪ ಭಾವನಾದಾ ರ್ಢ್ಯವುಳ್ಳ ಜ್ಞಾನಿಪುರುಷನು ಅಜ್ಞಾನಕಾರ್ಯವಾಗಿರುವ ಜೀವತ್ವದಿಂದ ಬಿ ಡಲ್ಪಟ್ಟಂಥವನಾಗಿ ಬ್ರಹ್ಮವೇತ್ತೃವೆಂಬದಾಗಿ ಪ್ರಖ್ಯಾತನಾಗುವನು.

---

ದಿಕ್ಕಿನೊಳರಸಿ ಜಲದೊಳ್ ಪ್ರತಿಬಿಂಬಮಂಕಂಡು ನೀರಿನೊ
ಳ್ಬಿದ್ದಿದೆಯೆಂದು ಭಾವಿಸಿ ಧುಮುಕಿದ ಕುರಬನಂತೆ ಕೇಳಬೇ
ಕಾದರೆ ಪರಪಕ್ಷೋಕ್ತಬಾಧಕವಂ ವಿಚಾರಿಸದಾಡಬಾರದದರಿಂ,
ಈ ಪೂರ್ಣವಸ್ತು ಪೂರ್ವೋಕ್ತ ಸಚ್ಚಿದಾನಂದ ನಿತ್ಯತ್ವಲ
ಕ್ಷಣಲಕ್ಷಿತವೆಂದರಿದು ನಾನೆಂದರಿಯೆ.

೬೦ ಮೂ॥ ಕಂದ॥ ಈವಿದ್ಯೆಯೆಸಂಸ್ಥಿತಿಯಂ ।
ಸೇವಿಸಲಾಪುರುಷನಾಕ್ಷಣಂತ್ರಿಭುವನದೊಳ್॥
ಜೀವನ್ಮುಕ್ತನೆನಿಸುವಂ ।
ಭಾವನೆಯಿಂದೇಹವಿರಲಿನಾನಾವಿಧದಿಂ ॥

ಈತನೇ ಜೀವನ್ಮುಕ್ತನೆನ್ನಲ್ಪಡುವನು. ಅದುದರಿಂದಲೇ ಈತನಿಗೆ ನಾನಾವಿಧವಾದ ದೇಹಗಳಿದ್ದಾಗ್ಯೂ.

೬ ಟೀ॥ ವಚನ॥ ಪಾಂಚಭೌತಿಕವಾದ ದೇಹವು ಸಾಮಾನ್ಯವಾಗಿ ಇದ್ದಾಗ್ಯೂ ಮತ್ತು, ಪ್ರಾಣಪಂಚಕ ಕರ್ಮೇಂದ್ರಿಯ ಪಂಚಕ, ಜ್ಞಾನೇಂದ್ರಿಯಪಂಚಕ, ಮನಸ್ಸು, ಬುದ್ಧಿ, ಯೆಂಬ ಪಂಚದಶಾವಯವಾತ್ಮಕವಾದ ಸೂಕ್ಷ್ಮಶರೀರವಿದ್ದಾಗ್ಯೂ, ಇವುಗಳಲ್ಲಿ ಸ್ಥೂಲದೇಹದಲ್ಲಿ ಸಂಭವಿಸುವ ರೋಗಾದ್ಯುಪದ್ರವಗಳು, ಇನ್ನು ಸೂಕ್ಷ್ಮಶರೀರ ಸಂಬಂಧವಾಗಿರುವ ರಾಗಾದಿಗಳು, ಇವುಗಳಿಂದ ಮೇಲೆ ಹೇಳಲ್ಪಟ್ಟ ಜೀವನ್ಮುಕ್ತನಿಗೆ ಯಾವವಿಧವಾದ ಕುಂದಕವೂ ಉಂಟಾಗುವದಿಲ್ಲವು. ಯಾತಕೆಂದರೆ, ಆ ಮಹಾನುಭಾವನಿಗೆ ಸ್ಥೂಲದೇಹದಲ್ಲಿಯಾಗಲಿ ಸೂಕ್ಷ್ಮಶರೀರದಲ್ಲಿಯೇ ಆಗಲಿ, ಆತ್ಮಬುದ್ಧಿಯು ಉಂಟಾಗಿದ್ದರೆ ಆಗಲವನಿಗೆ ಆಯಾಯ ಶರೀರ ಸಂಬಂಧವಾದ ಸುಖದುಃಖಾದಿಗಳು ಬಾಧೆಯನ್ನು ಪಡಿಸುತಲಿರಬಹುದು. ಆತನಿಗೆ ಅಭಿಮಾನವೆಂಬುವದಿರುವದಿಲ್ಲವಾದ್ದರಿಂದಲೇ ಆ ಸುಖಾದಿಗಳು ಇಲ್ಲವೆಂದರಿಯ ತಕ್ಕದ್ದು. ಇದೇರೀತಿಯಿಂದೆಲ್ಲರು ದೇಹೇಂದ್ರಿಯಾದಿಗಳಲ್ಲಿಭ್ರಾಂತಿಯಿಂದ ಆತ್ಮತ್ವಬುದ್ಧಿಯನ್ನು ಮಾಡಿಕೊಂಡು ಅವುಗಳ ಸಂಬಂಧವಾದ ದುಃಖಗಳಿಂದ ತೊಳಲುತಲಿರುವದು ಅತ್ಯಂತ ಹೇಯವಾದದರಿಂದ ಹಾಗಾಗದೆ ಶಾಸ್ತ್ರವಿಚಾರವನ್ನು ಮಾಡುವದರ ಮೂಲಕ ವಿವೇಕವನ್ನು ಸಂಪಾದಿಸಿ ಜನನಮರಣ ಪ್ರವಾಹ ರೂಪವಾಗಿರುವ ಸಂಸಾರದಿಂದ ಉತ್ತೀರ್ಣರಾಗಬೇಕೆಂಬುವದು ಪರಿಪಕ್ವವಾದ ಆಶಯವೆಂದರಿವುದು.

೭ ವ॥ ತಾ॥ ಈ ರೀತಿಯಿಂದ ಪರಿಪೂರ್ಣಭಾವಪದ್ಧತಿಯ ಸ್ವರೂ

---

೬ ಮೂ॥ ವ॥ ದೇಹವೆಂಬ ಸಾಮಾನ್ಯಗ್ರಹಣದಿಂ, ಲಿಂಗದೇಹಮಂ ಗ್ರಹಿಸಲ್ಪಟ್ಟುದಾಗಿ ಸ್ಥೂಲದೇಹದಲ್ಲಿ ರೋಗಾದಿಗಳು, ಸೂಕ್ಷ್ಮದೇಹದಲ್ಲಿನ ರಾಗಾದಿಗಳುಂ ಪರ್ತಿಸಲಿ, ಇವರಿಂದಾತಂಗೆ ಬಾಧಕವಿಲ್ಲವೆಂಬುದರ್ಥ.

೭ ಮೂ॥ ವ॥ ಇಾತೆಂದು ಪರಿಪೂರ್ಣ ಭಾವಪದ್ಧತಿಯ ಸಖ್ಯ

ಪವನ್ನು ಶಾಸ್ತ್ರೋದಾಹರಣಾನುಭವಗಳ ಪರಂಪರೆಗಳಿಂದಸುಲಭವಾಗಿ ಅವಗಾಹನ ವಾಗುವಂತೆ ವಿಶದಪಡಿಸಿ ಇನ್ನೊಂದು ಬಗೆಯಿಂದ ಹೇಳುತಲಿಧಾನೆ, ಅದೆಂತೆಂದರೆ ?

೧೩ ಇಂತು ಪರಿಪೂರ್ಣ ಭಾವಪದ್ಧತಿ ವಿಚಾರವು ಮುಗಿದುದು.

## ೧೪ ಮಂತ್ರಯೋಗ ಪದ್ಧತಿ ಪ್ರಾರಂಭವು.

೧ ವೃ॥ ತಾ॥ ಎಲೈ ಚಿತ್ತವೆಂಬ ಪ್ರಭುವೆನೀನು ಚನ್ನಾಗಿ ಯೋಚನೆಮಾಡಿ ನೋಡು ಲೋಕದೊಳು ನಾನಾ ಬಗೆಯಾಗಿರುವ ಸುಕೃತ ದುಷ್ಕೃತಗಳ ರಾಶಿಯು ಸಂಬಂಧ ಶೂನ್ಯವಾಗಿರುವ ಮೇಘಮಂಡಲದಿಂದ ಹುಟ್ಟಿದ ಜಲವೆ ಆಶ್ರಯುವಾಗಿ, ಉಳ್ಳ ಸಮಸ್ತವಾದ ಶರೀರವೆಂಬ ಮೇಲಕ್ಕೆ ಯದ್ದಂಥಯಾತವನ್ನು ಹತ್ತುವದಕ್ಕೆ ಯಾವ ಆಧಾರವಾದ ದಂಡವನ್ನು ಹಿಡಿದುಕೊಂಡುಬಂದೆಯೊ? ಆಶ್ರಯಭೂತವಾದ ದಂಡವನ್ನು, ಈ ಕಾಲದಲ್ಲಿ ಹುಡಿಕಿಕೊಂಡು ಪ್ರಾಣಸಮೂಹದ ನಡುವೆ ಇರುತಲಿರುವ ಆತ್ಮಸ್ವರೂಪವಾದ ಮಂತ್ರವದು ಎಂಥಾದ್ದು, ಅಂದರೆ ಜಬೋದ್ಧಾರವನ್ನು ಮಾಡುವದಕ್ಕೆ ದಂಡವೆಂಬುವದು ಹ್ಯಾಂಗೆ ಆಧಾರ ಭೂತವಾಗಿರುತ್ತಿರುವದೋ? ಅದರಂತೆ ಪ್ರಾಣವಾಯು ಸಮುದಾಯದ ಅಂತರಾಳದೊಳು ಶಿಲುಕಿರುವ ಆತ್ಮೋ

---

ಪಗವಿಾಕರಿಸಿ ಇನ್ನೊಂದು ಪ್ರಕಾರಮಂ ಪೇಳುತಿರ್ದಪನದೆಂತೆನೆ.

೧೩ ಇಂತು ಪರಿಪೂರ್ಣ ಭಾವಪದ್ಧತಿ ವಿಚಾರವು ಮುಗಿದುದು.

೧೪ ಮಂತ್ರಯೋಗ ಪದ್ಧತಿ ಪ್ರಾರಂಭವು.

೧ ಮೂ॥ ವೃ॥ ಎಲೈ ಚಿತ್ತಪ್ರಭುವೆ ವಿಚಾರಿಸುವೃಷಾಘಸ್ಸಂಗ
ನಿರ್ದುಷ್ಟಕರ್ಮಲಮೇಘವಪ್ರಸವಾಶ್ರಯಾಖಿಲಶರೀರೋದ್ಯ
ಘಟಯಂತ್ರಮೇರೆಲೆ ನೀನಾವುದನೊಂದಿಬಂದೆಯುದನೀಗನ್ವೇ
ಷಿಸಿಪ್ರಾಣಮಂಡಲಮಧ್ಯಸಿಥತಮಾತ್ಮಮಂತ್ರಮುದಃಹಂಸ
ದ್ವಿರಿದ್ವನೋರ್ವಜ್ವಲಂ॥

ದ್ವಾರಕ್ಕೆ ನಿದಾನವಾಗಿರುವ, ಮಂತ್ರವು ಯಾವದೆಂದರೆ ಹಂಸಎಂಬ ಎರಡಕ್ಷರದ ಸ್ವರೂಪವಾಗಿರುವದೆಂಬದಾಗಿ, ವಿಚಾರ ಮಾಡುವದರ ಮೂಲಕ ಸೂಕ್ಷ್ಮವಾದ, ದೃಷ್ಟಿಯಿಂದ ತಿಳಿದು ಕೊಳ್ಳತಕ್ಕದ್ದು. ... ... ... *

೨ ಏಕತಾಳ॥ ತಾ॥ ಎಲೈ ಮನಃ ಪ್ರಭುವೆ ಲಾಲಿಸು, ಅನವರತವೂ ಲೇಶವಾದರು ಅವಕಾಶವಿಲ್ಲದೆ ನಿನ್ನಲ್ಲಿಯೆ ಇರುತಲಿರುವುದು. ಮತ್ತು ನೀನು ಮನುಷ್ಯ, ದೇವ, ಪಶು, ಪಕ್ಷಿ, ಕ್ರಿಮಿಗಳೆ ಮೊದಲಾಗಿರುವ ಯಾವ ವಿಧವಾದ ಪ್ರಾಣಿದೇಹಗಳನ್ನು ಹೊಂದಿದಾಗ್ಯು ಆಯಾಯ ಸಮಯದಲ್ಲೆಲ್ಲಾ, ಬಿಡುಗಡೆಯಿಲ್ಲದೆ ಬೆನ್ನುಹತ್ತಿಯೆ ಬಂದು ಇರುವದು. ಅದೆಂತೆಂದರೆ ॥೧॥ ನೀನು ಯಾವದೇಹವನ್ನು, ಹೊಂದುವಿಯೊ ! ಆ ದೇಹದಲ್ಲಿಯೇ, ಹೃದಯ ದೇಶವನ್ನು ಹೊಂದಿರುವ ಪ್ರಾಣವಾಯುವು ನಿರಂತರದಲ್ಲಿಯು ಹಕಾರವನ್ನುಚ್ಚರಿಸುತಲಿರುವದು. ಅಂದರೆ ಯಾವಾಗಲಾದರೆ ವಾಯುವು ಬಹಿರ್ಮುಖವಾಗಿ, ಹೊರಟುಬರುವದೊ ? ಆ ಸಮಯದಲ್ಲಿಹಕಾರೋಚ್ಚಾರಣ ವಿಲ್ಲದೆ ಹೊರಗೆ ಬರುವದಕ್ಕೆ ಆಗುವದಿಲ್ಲವಾದಕಾರಣ ಹಕಾರವು ಉಚ್ಚರಿಸಲ್ಪಡುವದು. ಇದರಂತೆಯೇ ? ಅಪಾನ ವಾಯುವೆಂಬುವದು ಸಕಾರವನ್ನು ಉಚ್ಚರಿಸುತಲಿರುವದು. ಅಂದರೆ–ಅಪಾನವಾಯುವು, ಹೊರಗೆ ಹೊರಡುವ ಸಮಯದಲ್ಲಿಯು, ಸಕಾರೋಚ್ಚಾರಣವಿಲ್ಲದೆ ಸಂಚಾರವೇ ಸಂಬಂಧಿಸುವದಿಲ್ಲವಾದುದರಿಂದ ಸಕಾರವು ಉಚ್ಚರಿಸಲ್ಪಟ್ಟಿತು. ॥೨॥ ಈ ಹಿಂದೆ ಉದಹರಿಸಲ್ಪಟ್ಟ ಈ ಎರಡು ವರ್ಣಗಳ

---

೨ ಮೂ॥ ಏಕತಾಳ॥ ಎಡೆಬಿಡದೆನಿನ್ನೊಳಿರ್ಪುದು ನೀನಾವಾವಡಲುಗಳೆತ್ತಲುಂಬಿಡದೆಬೆನ್ನ ॥೧॥
ಪ್ರಾಣಮುಚ್ಚರಿಪುದುಪದುಳದಿಂಹಂತ್ವಮಪಾನಮುಚ್ಚರಿಪುದುಪಟುಸತ್ವವನ್ನು ॥೨॥
ಈ ವರ್ಣಯುಗಯೋಗಮೆಲ್ಲಿಹುದ್ಧಿಯೆ ಭಾವಮುಹುದುಹಂಸಪದಮತಿಚತುರಂ ॥೩॥

ಸಂಬಂಧವೆಂಬುವದು, ಯಾವ ಸ್ಥಲದಲ್ಲಿ ಉಂಟೋ? ಆ ಸ್ಥಲದಲ್ಲಿಯೇ ! ಅತಿ ಚಮತ್ಕಾರದಿಂದ ಹಂಸವೆಂಬಪದವು,ಅಭಿವ್ಯಾಯುವಾಗುವದು. ... ... ‖೩‖

೩ ವ॥ ತಾ॥ ಈ ಹಂಸವೆಂಬ ಅಮೋಘವಾದ ಮಂತ್ರವು ದಿವಸವೊಂದಕ್ಕೆ ಉತ್ಶ್ವಾಸರೂಪವಾಗಿ ಪ್ರಾಣವಾಯುವಿನಗಮನಾಗಮನರೂಪವಾಗಿರುವ ಪ್ರಚಾರವೈಚಿತ್ರ್ಯದಿಂದ ಇಪ್ಪತ್ತೊಂದು ಸಾವಿರದ ಆರುನೂರು ಆವರ್ತಿತಿರುಗುತಲಿರುವದು. ಆದರೆ ಶಾಸ್ತ್ರೋಕ್ತವಿಧಾನದಿಂದ ಸದ್ಗುರುವನ್ನು ಸೇವಿಸಿ ನಿರ್ಮಲವಾಗಿರುವ ಚಿತ್ತವೃತ್ತಿಯಿಂದ ಆ ಮಹಾನುಭಾವನ ಅನುಗ್ರಹವನ್ನು ಸಂಪಾದಿಸಿ ಆತನಿಂದ ಈಶ್ವಾಖ್ಯವಾದ ಮಂತ್ರವನ್ನು ಸಂಪಾದಿಸಿ ಪ್ರತಿದಿವಸದಲ್ಲಿಯು ಪ್ರಾತಃಕಾಲದಲ್ಲಿ ಅಂದರೆ ಅರುಣೋದಯಕ್ಕಿಂತಲು ಪೂರ್ವಭಗವನ್ನಾಮಸ್ಮರಣ ಪೂರ್ವಕವಾಗಿಯೇ ! ಎದ್ದು ಶೌಚನಿವೃತ್ತಿಯನ್ನು ಮಾಡಿಕೊಂಡು ಕೈಕಾಲು ಮುಖಗಳನ್ನು ಶುದ್ಧವಾಗಿ, ತೊಳಿದುಕೊಂಡು ಕ್ರಮವಾಗಿ, ವಿಭೂತಿ ಧಾರಣವನ್ನು ಮಾಡಿಕೊಂಡು ತನಗೆ, ಇಷ್ಟವಾದ ಸುಖಾಸನದಲ್ಲಿ ಕುಳಿತುಕೊಂಡಂಥವನಾಗಿ. ... ... ... ... *

೪ ವೃ॥ ತಾ॥ ಅನವರತವೂ ಪ್ರವಹಿಸುತಿರುವ ಮಧೋದಕದ ಧಾರೆಯಸುವಾಸನೆಯಿಂದ ಆಕಪಟ್ಟು ಓಡಿ ಬಂದು ಸಂಚರಿಸುತಿರುವ ದುಂಬೆಗಳ ಸಮುದಾಯವೆಂಬ ಇಂದ್ರನೀಲಮಣಿಗಳಹಾರದಿಂದ

---

೩ ಮೂ॥ ವ ‖ ಇದುದಿನವೊಂದಕ್ಕೆ ಪ್ರಾಣಗತಿವ್ಯಾಜದಿಂದಿಪ್ಪತ್ತೊಂದುಸಾವಿರದಾರುನೂರುಬಾರಿಯಾವರ್ತಿಸುತ್ತುತ್ತಿರುಗುವದರಿಂದ,ಶ್ರೀಗುರುಮತವಿಡಿದು ಬ್ರಾಹ್ಮೀಮುಹೂರ್ತದೊಳು ಪ್ರಬುದ್ಧನಾಗಿ ಶೌಚತ್ರಿಪುಂಡ್ರದಿಂ ಶುದ್ಧನಾಗಿಸುಖಾಸೀನನಾಗಿ ‖

೪ ಮೂ॥ ವೃ॥ ಮೂಲಾಧಾರಥ ಪದ್ಮದಲ್ಲಿಮದಧಾರಾಗಂಧಲೋಭಭ್ರಮು। ಲ್ಲೋಲಂಬೇಂದ್ರಮಣಿಸ್ರಗಾವೃತಶಿರಃಕೋಟೀರ

ಅನೃತವನಾದ ಶಿರದೊಳುಧರಿಸಿರುವ ಕಿರೀಟಾಗ್ರದಿಂದ ಸಂಶೋಭಿಸುತಿರುವಂಥವನಾಗಿಯು ಮತ್ತೂ ತನ್ನಯ ಸೊಂಡಲಿದ ಅಗ್ರಭಾಗದೊಳು ವಿಲಾಸಾರ್ಥವಾಗಿ, ಗ್ರಹಿಸಿರುವ ಚಂಚಲವಾದ ಕೆಂದಾವರೆಯು ಧೂಳಿಯಿಂದ ಹೊಂಬಣ್ಣವಾಗಿರುವ ಮುಖವುಳ್ಳವನಾಗಿಯು, ಶೈಲಾಧಿರಾಜನಾದ ಹಿಮವಂತನ ಪುತ್ರಿಯಾದ ಪಾರ್ವತಾದೇವಿಯು ಸಂತೋಷವೆಂಬ ಸಮುದ್ರಕ್ಕೆ ರಾಕಾಶಶಾಂಕನಂತಿರುವನಾಗಿಯು, ಅಂದರೆ, ಸರ್ವಮಂಗಳೆಯಾದ ಪಾರ್ವತಿಗೆ ಅಪರಿಮಿತಾನಂದವನ್ನುಂಟುಮಾಡುವ ಪ್ರೇಮಪುತ್ರನಾಗಿಯು, ಉತ್ಪತ್ತಿಯಾದ ಕಾಲದೊಳು ಸ್ತನ್ಯವನ್ನು ಕೊಡುವದಕ್ಕಾಗಿ ಬಂದಷಟ್ಕೃತ್ತಿಕೆಯರಿಗೂ ಮಗನೆಂದೆನಿಸಿ ಕೊಂಡಿರುವದರಿಂದಲೇ ಷಾಣ್ಮಾತುರನೆಂಬ ಹೆಸರನ್ನು ಪಡೆದಿರುವಕುಮಾರ ಸ್ವಾಮಿಗೆ ಅಣ್ಣನಾದ ಶ್ರೀಸಿದ್ಧಿವಿನಾಯಕ ಸ್ವಾಮಿಯನ್ನು, ಮೂಲಾಧಾರದ ಕಮಲದಲ್ಲಿ ಕೇವಲವಾದ ಕುಂಭಕದಿಂದನಿಂತು, ಅಂದರೆ ರೇಚಕ, ಪೂರಕ, ಕುಂಭಕಗಳೆಂಬ ಪ್ರಾಣಾಯಾಮಗಳಿಂದಾದ ಕುಂಭಕವನ್ನು ಆಶ್ರಯಿಸಿ, ಬಳಿಕ.

೫ ಮ॥ ತಾ॥ ಅಮೋಘವಾದ ಧ್ಯಾನದಿಂದ ಪ್ರತ್ಯಕ್ಷನನ್ನಾಗಿಮಾಡಿಕೊಂಡು, ಸಂತೋಷದಿಂದ ತೃಪ್ತಿಯಾಗುವಹಾಗೆ ಮಾನಸಿಕವಾದ ಪೂಜೆಯುಂಮಾಡಿ, ಆದಿನಕ್ಕಿಂತಲು ಪೂರ್ವದಿನದೊಳು ಮಾಡಿದ ಮಂತ್ರಜಪದಲ್ಲಿ ಆರುನೂರು ಲೆಖ್ಖವುಳ್ಳ ಮಂತ್ರಜಪಗಳನ್ನು ಆ ಮಹಾನುಭಾವನಿಗೆ ವಿಶೇಷವಾದ ಭಕ್ತಿಭಾವನೆಯಿಂದ ಸಮರ್ಪಣೆಯನ್ನು ಮಾಡಿ, ತದನಂತರದಲ್ಲಿ. ... *

---

ಪೀಠಾಯಿತಂ। ಖೇಲತ್ಪುಷ್ಕರ ಪದ್ಮಕೇಸರರಜಃ ಪಿಂಗೀಭವದ್ವಕ್ತ್ರನಂ॥

೫ ಮೂ॥ ಮ॥ ಧ್ಯಾನಗೋಚರನಂಗೈದು ಯಥಾವಿಧಿಯಿಂದರ್ಚಿಸಿ ಪ್ರಾಗ್ದಿನಾನುಷ್ಠಿತ ಮಂತ್ರಾವೃತ್ತಿಯುಳ್ಳಾರು ನೂರು ಜಪಮಂ ಸಮರ್ಪಿಸಿದಮೇಲೆ.

೬ ವೃ॥ ತಾ॥ ಕೋಮಲಾಂಗಿಯಾಗಿರುವ ಸಾಕ್ಷಾತ್ ಶ್ರೀ ಶಾರದಾದೇವಿಯು ಹಸ್ತ ಕಮಲದೊಳು ವಿರಾಜಮಾನವಾದ ವೀಣಾಗಾನ ಶ್ರವಣದಿಂದುಂಟಾದ ಆನಂದದಿಂದ ಕೊಬ್ಬಿ ಅವ್ಯಕ್ತಮಾಧುರ್ಯದಿಂ ಧ್ವನಿಸ್ಫುರಿತ ಸ್ಫುಟವಾಗಿ ನರ್ತನಮಾಡುತಲಿರುವ ವಾಹನಭೂತವಾದ ಹಂಸಪಕ್ಷಿಯು ಸಂಸ್ಪರ್ಶದಿಂದ ಅಪಾರವಾದ ವಿಲಾಸಗಳಿಂ ಚಮತ್ಕೃತಿಯುನಾಂತಿರುವ ಗಂಭೀರವಾದ ಮನಸ್ಸುಳ್ಳವನಾಗಿಯೂ, ಆದುದರಿಂದಲೇ ಮಂದಹಾಸದಿಂದೊಡಗೂಡಿರುವ ಮುಖಾರವಿಂದವುಳ್ಳವನಾಗಿಯೂ, ಸುವರ್ಣದಂತೆ ಅನವರತವುಂ ರಾಜಿಸುತಿರುವನಾಗಿಯು, ಸ್ವತಃ ಪ್ರಕಾಶಮಾನವಾದ ಸಕಲೈಶ್ವರ್ಯ ವುಳ್ಳವನಾಗಿಯು, ಲೋಕಕಂಟಕರಾಗಿರುವ ಅಶೇಷರಾದ ದನುಜರನ್ನು ಧ್ವಂಸಮಾಡಿದ ಲಕ್ಷ್ಮೀಪತಿಯಾದ ಶ್ರೀಮನ್ನಾರಾಯಣನ ನಾಭೀಕಮಲದೊಳುದ್ಭವಿಸಿರುವ ಚತುರ್ಮುಖ ಬ್ರಹ್ಮನನ್ನು, ಸ್ವಾಧಿಷ್ಠಾನವೆಂಬ ಚಕ್ರದೊಳು.

೭ ವ॥ ತಾ॥ ಪೂರ್ವದೊಳು ಉದಹರಿಸಿದಂತೆ ಕುಂಭಕದಲ್ಲಿ ನಿಂತು ಸ್ಮೃತಿಯಿಂದ ಸಾಕ್ಷಾತ್ಕಾರವುಂ ಮಾಡಿಕೊಂಡು ಶಾಸ್ತ್ರವಿಹಿತವಾದ ವಿಧಿಯನ್ನು ಅತಿಕ್ರಮಿಸದೆ ಪರಮಾನಂದ ಮುಂಟಾಗುವಂತೆ ಪೂಜೆಯುಂಗೈದು, ಪೂರ್ವದಿನದೊಳು ಅನುಷ್ಠಾನಮಾಡಿದ ಆರುಸಾವಿರ ಜಪಗಳನ್ನು ಶ್ರದ್ಧಾಭಕ್ತಿಗಳಿಂದೊಡಗೂಡಿ ಸಮರ್ಪಿಸಿದ ತರುವಾಯ. ... ... *

---

೬ ಮೂ॥ ವೃ॥ ಸ್ವಾಧಿಷ್ಠಾನದ ಚಕ್ರದಲ್ಲಿಮೃದುವಾಣೀವಲ್ಲಕೀ ಗಾನಸಂ। ಬಾಧೋದ್ರಿಕ್ತಕಲಧ್ವನಿಸ್ಫುಟನಟಚ್ಚಕ್ರಾಂಗಸಂಸ್ಪರ್ಶಲೀ॥ ಲಾಘೌತಿಯುಮನಸ್ಕನಂಸುಮುಖನಂಕಾರ್ತಸ್ವರದ್ಯೋತಿಯಂ। ಸಾಧೂಪಾತ್ತವಿಭೂತಿಯುಂದನುಜಭಿತ್ಕುಕ್ಷ್ಯಬ್ಜಸಂಭೂತಿಯಂ॥

೭ ಮೂ॥ ವ॥ ನೆನೆಹಿಂಕಂಡಾರು ಸಾವಿರಜಪಮಂ ವಿಶ್ರಾಣಿಸಿ ಬಳಿಕ॥

೮ ವ್ಯ॥ ತಾ॥ ನಿರಂತರದಲ್ಲಿಯೂ ನಿಶ್ವಾಸಗಳನ್ನು ಬಿಡುವ ಸಂದರ್ಭದೊಳು ಸಂಕೋಚವನ್ನು ಪಡೆಯುತಲಿರುವ ಅಂದರೆ ಮುಕುಳನವನ್ನು ಹೊಂದುತಿರುವ ಮಂಗಳಕರವಾದ ನಾಭೀಕಮಲವನ್ನು ಅರಳುವಂತೆ ಮಾಡುತಿರುವ ಭೂಷಣವಾಗಿರ್ಪ, ಇಲ್ಲವೆ ಶಯನವಾಗಿರುವ ಶ್ರೀಮದಾದಿಶೇಷನ ಶಿರದೊಳು ಪ್ರಕಾಶವಾನವಾದ ದಿವ್ಯರತ್ನವೆಂಬ ಪ್ರಚಂಡಭಾಸ್ಕರನ ಕಿರಣಗಳ ಮಾಲೆಗಳುಳ್ಳವನಾಗಿಯೂ, ಕಮಲ ವಾಸಿನಿಯಾಗಿರುವ ಶ್ರೀ ರಮಾದೇವಿಯ ಮುಖವೆಂಬ ತಾವರೆಗೆ ದುಂಬಿಯಂತಿರುವ ನೇತ್ರಗಳುಳ್ಳವನಾಗಿಯೂ, ಅಂದರೆ ಇಂದಿರೆಯ ಮುಖವಿಲೋಕನದಿಂದಾ ನಂದಿಸುವ ನಯನವುಳ್ಳವನಾಗಿಯೂ ಚಕ್ರಾಯುಧವು, ಕಮಲವು ಇಲ್ಲವೆ ಶಂಖವು, ಭಕ್ತರಾದವರಿಗೆ ಅಭಯಪ್ರದಾನವನ್ನು ಮಾಡುವ ಅಭಯಹಸ್ತವು, ಇವುಗಳಿಂದ ಒಪ್ಪುತಲಿರುವ ಬಾಹುಗಳುಳ್ಳವನಾಗಿಯೂ ಅಮೋಘವಾದ ತೇಜಸ್ಸುಳ್ಳವನಾಗಿಯೂ ಇರುವ ಸರ್ವವ್ಯಾಪಕನಾದ ಶ್ರೀ ಮಹಾವಿಷ್ಣುವನ್ನು, ಮಣಿಪೂರವೆಂಬ ಕಮಲದಲ್ಲಿ.

೯ ವಚನ॥ ತಾ॥ ಮೊದಲು ವಿವರಿಸಿರುವ ರೀತಿಯಿಂದ ಕುಂಭಕದೊಳುನಿಂತು ಧ್ಯಾನಗೋಚರನನ್ನಾಗಿ ಮಾಡಿಕೊಂಡು ಶಾಸ್ತ್ರೋಚಿತವಾಗಿ ಮಾನಸಿಕ ಪೂಜೆಯಮಾಡಿ ಪರಮ ಪ್ರೀತಿಯಿಂದ ಆರುಸಾವಿರ ಜಪಗಳನ್ನು ಸಮರ್ಪಣವಾಡಿದಮೇಲೆ.

೧೦ ವ್ಯ॥ ತಾ॥ ಸಂತತದಲ್ಲಿಯು ತನ್ನ ಎಡಪಕ್ಕೊಡೆಯಮೇಲೆ ಕೂ

---

೮ ಮೂ॥ ವೃತ್ತ ॥ ಮಣಿಪೂರಾಂಬುಜದಲ್ಲಿನಿಶ್ವಾಶಿತ ಲೀಲಾಸಂಕುಚನ್ನಾಭೀಶೋ। ಭನಪಂಕೇರುಹಬೋಧಕಾಹಿಫಣಿಚೂಡಾರತ್ನಚೂಡಾಂಶುಮ ॥ ದ್ಘೃಣಿನಿತ್ಯಸ್ಫುಟಭಾರ್ಗವೀ ಮುಖಸರೋಜಾತಸ್ಥಿತಾತ್ಮಾಕ್ಷಿಭೃಂ। ಗನಮರ್ಯಬ್ಜವರಾಭಯಾಢ್ಯಕರನಂ ರೋಚಿಷ್ಣುವಂವಿಷ್ಣುವಂ ॥

೯ ಮೂ॥ ವ ॥ ಚಿತ್ತಸಾನ್ನಿಧ್ಯಂ ಗೈದಾರುಸಾವಿರ ಜಪಮಂ ವಿತ್ತರಿಸಿ ಮತ್ತೆ.

ಡಿಸಿಕೊಳ್ಳಲ್ಪಟ್ಟಿರುವ ಸರ್ವಮಂಗಳೆಯು ಮನೋಹರವಾದ ಕೇಶಪಾಶವನ್ನು ಭ್ರಾಂತಿಯಿಂದ ಕಪ್ಪಾಗಿಯೂ, ದೀರ್ಘವಾಗಿಯೂ ಇರುವ ಸರ್ಪವೆಂಬದಾಗಿ ತಿಳದು ವಡನೆ ಉಂಟಾದ ಭಯದದೆಸೆಯಿಂದ ಕೆಳಗಿಳದು ಓಡುತಲಿರುವ ಶಿರೋಭೂಷಣವಾದ ಚಂದ್ರನಿಗೆ ಶರಣ್ಯವಾಗಿ ಅಂದರೆ ಇದು ಕೃಷ್ಣಸರ್ಪವಲ್ಲ, ಪ್ರಾಣಕಾಂತೆಯ ಕುಟಿಲಚಿಕುರವು ಎಂಬದಾಗಿ ಹೇಳಿ ಸಮಾಧಾನ ಮಾಡುವದರಿಂದಲೆ ಪಾಲಕನಾಗಿರುವಂಥ, ವರ್ಷಾಕಾಲದೊಳು ಮೇಘಮಂಡಲದೊಳು ಪ್ರಕಾಶಮಾನವಾದ ಮಿಂಚಿನಂತೆ ಮನೋಹರವಾದ ಜಡೆಗಳ ಸಮುದಾಯದಿಂದ ಗಂಭೀರನಾದಂಥ ಎಣೆಯಿಲ್ಲದ ತೇಜಸ್ಸಿಗೆ ಆಕರವಾಗಿರುವಂಥಾ ಮತ್ತು ಪ್ರಾತಃಕಾಲದೊಳು ಸೊಂಪಿನಿಂದ ವಿಕಸಿತವಾಗಿರುವ ರಮಣೀಯವಾದ ತಾವರೆಯಂತೆ ವಿರಾಜಮಾನವಾದ ಮುಖಮಂಡಲವುಳ್ಳ, ನಿಖಿಲ ಜಗನ್ನಿಯಾಮಕನಾದ ಪರಮೇಶ್ವರನನ್ನು ಅನಾಹತವೆಂಬ ರಾರಾಜಮಾನವಾದ ಕಮಲದಲ್ಲಿ.

೧೧ ವ ॥ ತಾ ॥ ಮೇಲೆ ವಿಶದಪಡಿಸಿರುವಂತೆ ಕುಂಭಕ ಪ್ರಾಣಾಯಾಮದೊಳು ಸ್ಥೈರ್ಯವನಾಂತು ಸ್ಮರಣೆಗೆ ವಿಷಯವಾಗುವಂತೆ ಮಾಡಿಕೊಂಡು ಅಂದರೆ ಧ್ಯಾನವಂಮಾಡಿ ಮನದೊಳಗೆ ಸಾನಂದದಿಂ ಪೂಜಿಸಿ ಭಕ್ತಿಭಾವನೆಗಳಿಂದೊಡಗೂಡಿ ಆರುಸಾವಿರ ಜಪಗಳನ್ನು, ಜಪಿಸಿ ಆ ಭಗವಂತನ ಚರಣ ನಳಿನಗಳಲ್ಲಿ ಸಮರ್ಪಣವನ್ನು ಮಾಡಿದ ತರುವಾಯದೊಳು.

---

೧೦ ಮೂ ॥ ವೃತ್ತ ॥ ರಾಜದನಾಹತಾಂಬುಜದ ಮಧ್ಯದಿ ವಾಮನಿಜೋರುಲಗ್ನಗೌ । ರೀಜಟಿಲೀಭವಚ್ಚಿಕುರಕೃಷ್ಣಭುಜಂಗಭಯಸ್ಖಲಚ್ಛಿರೋ ॥ ರಾಜಶರಣ್ಯಪಾಲಕತಟತ್ಪಟುದೀರ್ಘಜಟಾಕಲಾಪನಂ।ತ್ರೈಜಸನಂಪ್ರಭಾತದರದಂಬುಭವಾಸ್ಯನಂ ಮಹೇಶನಂ ॥

೧೧ ಮೂ॥ ವ॥ ಆಧ್ಯಾನಾಪರೋಕ್ಷನಂ ಮಾಡಿ, ಆರುಸಾವಿರ ಜಪಮಂ ಪ್ರತಿಪಾದನಂ ಗೈದಾತಂಗಾಯನಂತರಂ ॥

೧೨ ವೃ॥ ತಾ॥ ಅಕಾರವೇ ಮೊದಲಾಗಿ ಔಕಾರದವರಿಗಿರುವ ಹದಿನಾರು ಸ್ವರಗಳ ಮಾಲಿಕೆಯಿಂದ ವಿಶೇಷವಾದ ಧಾವಳ್ಯವನ್ನು ಹೊಂದಿ, ಪೃಥಿವ್ಯಾದಿ ಪಂಚಭೂತಗಳ ಸಂಘದಿಂದ ಕಮ್ರ್ಹಗಿಯೂ ಮತ್ತು ಹೊಂಬಣ್ಣವಾಗಿಯೂ ಇರುವ ಕಮಲದಂತೆ ಪ್ರಕಾಶಿಸುತ, ಮತ್ತು ಶುಭ್ರವಾಗಿಯೂ ಹೊಂಬಣ್ಣವಾಗಿಯೂ ಇರುವ ಪರಿವೇಷವೇ ಶರೀರವಾಗಿ ಉಳ್ಳೊಳ್ಳೇಣದರಿಂದ ವಿಕಾರವನ್ನು ಹೊಂದಿ ಹೊಂದದೆಯೂ ಇರುವಂತೆ ಒಪ್ಪುತಲಿರುವ ವಿಶುದ್ಧವಾಗಿರುವ ಚೈತನ್ಯಾಂಶವನ್ನು ಅತ್ಯಂತ ಮನೋಹರವಾಗಿರುವ ವಿಶುದ್ಧವೆಂಬ ಚಕ್ರದ ಮಧ್ಯಭಾಗದೊಳು.

೧೩. ವ॥ ತಾ॥ ಪೂರ್ವದಂತೆ ಕುಂಭಕ ಪ್ರಾಣಾಯಾಮ ದಾರ್ಢ್ಯದಿಂದ ಸ್ಮೃತಿಗೆ ಸಮೀಪದಲ್ಲಿರುವಂತೆ ಮಾಡಿಕೊಂಡು ಅಂದರೆ ಅಮೋಘವಾದ ಧ್ಯಾನಕ್ಕೆ ಗೋಚರಿಸಿರುವಂತೆ ಮಾಡಿಕೊಂಡು ಸಂತೋಷದಿಂದರ್ಚನೆಯಂ ಮಾಡಿ ಪರಮ ಪ್ರಮೋದದಿಂದ ಒಂದು ಸಾವಿರ ಜಪವನ್ನು ಆ ನಿರ್ಮಲ ಚೈತನ್ಯಾತ್ಮನಿಗೆ ಸಮರ್ಪಿಸಿ ಆದರ ಫಲುಗಡೆಯಲ್ಲಿ.

೧೪ ವೃತ್ತ॥ ತಾ॥ ವಿಕಸಿತವಾದ ಕಮಲ ಪತ್ರಗಳಂತೆಸೆವ ನೇತ್ರಗಳ ಯುಗ್ಮವೇ ಹಂ, ಕ್ಷಂ, ಎಂಬ ನಿರ್ಮಲ ವರ್ಣಾತ್ಮಕಗಳಾಗಿರಲು ಪರ್ವತರಾಜ ಪುತ್ರಿಯಾದ ಪಾರ್ವತಾದೇವಿಯೇ ಸಹಾಯವಾಗಿವುಳ್ಳ

---

೧೨ ಮೂ॥ ವೃತ್ತ ॥ ಚಾರುವಿಶುದ್ಧಚಕ್ರದಲಿಷೋಡಶ ಸುಸ್ವರ ಮಾಲೆಯಿಂದೆಪ್ರೊಳ್ಪೇರಿರೆಭೂತಪಂಚಕದಕಾಲಪೊನ್ಕಮಲೋತ್ತರಸ್ಫುರದ್ಗೌರಪಿಶಂಗವರ್ನಪರಿವೇಷಮೆ ವಿಗ್ರಹವಾಗಿರಲ್ಕೆ ವೈ। ಕಾರಿಕಮುಂಟೆ ಯುಂಟದಪ್ರೋಲೊಪ್ಪುವಚೈತನ್ಯಾಂಶದ ಶನಂ ॥

೧೩ ಮೂ॥ ವ॥ ಸ್ಮೃತ್ಯುಪಕಂಠ ಲಗ್ನನಂಗೈದು ಸಾಸಿರಜಪಮಂ ಗೊಟ್ಟತದಗ್ರದಲ್ಲಿ.

೧೪ ಮೂ॥ ವೃತ್ತ॥ ನೇತ್ರದ್ವಂದ್ವಸರೋಜಪತ್ರಯುಗಮೋಹಂ

ಅಂದರೆ ಪ್ರಸನ್ನಪಾರ್ವತಿ ಯೊಡನೊಡಗೂಡಿರುವ, ಮತ್ತು, ಪುನ ರಾವೃತ್ತಿ ರಹಿತವಾಗಿರುವದರಿಂದಲೇ ಶಾಶ್ವತವಾಗಿರುವ ಮುಕುತಿಯ ನ್ನು ಹೊಂದುವ ಪ್ರಾಣಿಗಳ ಸಮುದಾಯಕ್ಕೆ ಶರಣ್ಯನಾಗಿರುತ, ಇ ನ್ನು ಅಬಾಧಿತವಾದ ಸತ್ಯಸ್ವರೂಪನಾಗಿಯು, ಅಲ್ಲದೆ ಉತ್ತಮವಾದ ಕಾಶೀಕ್ಷೇತ್ರದೊಳು ಪ್ರಾಣಿವರ್ಗಕ್ಕೆ ದೇಹಯಾತ್ರೆಯು ಸಮಯ ದೊಳು ಜನನಮರಣ ಪ್ರವಾಹರೂಪವಾಗಿರುವ ಸಂಸಾರವೆಂಬ ಸಮು ದ್ರದಿಂ ಉತ್ತಾರಣ ಮಾಡಿಸುವ ಅಂದರೆ ದಾಟಿಸುವದರಲ್ಲಿ ಸಮರ್ಥ ವಾಗಿರುವದರಿಂದಲೆ ಅಮೂಲ್ಯವಾಗಿರುವ ತಾರಕಮಂತ್ರವನ್ನು ಉಪ ದೇಶಿಸುವಂಥವನಾಗಿಯೂ ಅಶೇಷವಾದ ದೋಷರಾಶಿಯನ್ನು ದೂರ ಮಾಡಿರುವದರಿಂದಲೆ ಶುದ್ಧನಾಗಿರುವಂಥವನಾಗಿಯೂ; ಉತ್ತಮೋ ತ್ತಮನಾಗಿಯೂ ಅಂದರೆ ಪರಮಪುರುಷನಾಗಿಯು, ಸಚ್ಚಿದಾನಂ ದಾತ್ಮನಾಗಿಯೂ ಇರುವ ತೇಜೋಘನ ವಸ್ತುವನ್ನು ಪೂಜ್ಯವಾದ ಕಾಶಿಯಂತೆಯೆ ಸುನಿರ್ಮಲವಾಗಿರುವ ಆಜ್ಞಾಚಕ್ರವೆಂಬ ಕಮಲಕರ್ಣಿ ಕಾ ಮಧ್ಯಭಾಗದೊಳು.

೧೫ ವ॥ ತಾ॥ ಉದಾರವಾದ ಭಾವನೆ ಯೆಂಬ ಮಂದಿರದೊಳಗೆ ಸಂ ಸಾರಿಯನ್ನಾಗಿ ಮಾಡಿ ಅಂದರೆ—ಮೇಲಿನಂತೆ ಕುಂಭಕಪ್ರಾಣಾಯಾ ಮದಿಂದ ಅಖಂಡವಾಗಿ, ಧ್ಯಾನಗೋಚರನನ್ನಾಗಿ ಮಾಡಿಕೊಂಡು ಮಾನಸಿಕವಾದ ಆರಾಧನೆಯನ್ನು ಆನಂದದಿಂದಾಚರಿಸಿ ಒಂದು ಸಾ ವಿರ ಜಪವನ್ನು ಭಕ್ತಿಶ್ರದ್ಧೆಗಳಿಂದ ಅಮಹನೀಯನಿಗೆ ಸಮರ್ಪಿಸಿ ದ ಮುಂದುಗಡೆಯಲ್ಲಿ.

---

ಕ್ಷಂಸ್ವರೂಪಾಗಿರಲ್ । ಗೋತಾಧೀಶಸುತಾಸಹಾಯನೆ ಮು
ಮೂರ್ಷರ್ವಾತಕಂಶ್ಯವೆ । ಕ್ಷೇತ್ರಸಾಧನದಿತಾರದಂವಚ
ಪನಾಸಂಜ್ಞಾಲಸಚ್ಚಕ್ರದೊ । ಳ್ವಾತ್ರಸಾಖಿಲದೋಷನಂ ಪರ
ಮನಂಸಚ್ಚಿತ್ಸುಖಾಕಾರನಂ ॥

೧೫ ಮೂ॥ ವ ॥ ಭಾವನಾಮಂದಿರ ಕುಟುಂಬಿಯಂನ್ಶೈದು ಸಾಸಿರ
ಜಪಮಂ ಸಿಯೋಗಿಸಿ ಮುಂದೆ.

೧೬ ಜಂಪೆ॥ ತಾ॥ ಅಸಮಾನವಾಗಿರುವ ಬ್ರಹ್ಮರಂಧ್ರವೆ ಮುಖವಾಗಿಯು ಶರೀರದೊಳು ಅಧೋಮುಖವಾಗಿರುವ ಹೃದಯವೆಂಬ ಹೆಸರನ್ನು ಹೊಂದಿರುವಂಥಾದ್ದಾಗಿಯು, ಇರುವ ಕಮಲದ ಮಧ್ಯಭಾಗದೊಳಿರುವ ಕರ್ಣಿಕೆಗೆ ಆಭರಣದಂತೆಸೆವ ಓಂಕಾರವೆಂಬ ಪೀಠದ ಮಧ್ಯದೇಶದಲ್ಲಿ ॥ ೧ ॥ ಅತ್ಯಂತಶುದ್ಧವಾಗಿರುವ ವಸ್ತ್ರವು, ಮತ್ತು ಅತಿಧವಳವಾಗಿರುವ ಯಜ್ಞೋಪವೀತವು ಈ ಎರಡರ ವಿಶೇಷವಾದ ಕಾಂತಿಯಿಂದಲು ಇನ್ನು ಪೂರ್ಣಿಮೆಯ ಪೂರ್ಣಚಂದ್ರನ ಬೆಳದಿಂಗಳಂತೆ ವಿರಾಜಮಾನವಾದ ವಿಭೂತಿ ರೇಖೆಗಳಿಂದ ಶೋಭಾಯಮಾನವಾಗಿಯು, ಸ್ಫಟಿಕಶಿಲಾಫಲಕದಂತೆ ಅತಿವಿಶಾಲವಾದ ಫಾಲಪಟ್ಟದಿಂದಲು, ॥೨॥ ಅಮೂಲ್ಯವಾಗಿರುವ ರುದ್ರಾಕ್ಷಿಮಣಿಗಳಿಂದ ವಿರಚಿತವಾದ ಕಿರೀಟದಿಂದಲು, ಮತ್ತು ಅದೇರುದ್ರಾಕ್ಷಗಳಿಂದ ರಚಿಸಲ್ಪಟ್ಟ ಹಸ್ತಕಡಗಗಳಿಂದಲು, ಇನ್ನು ಅಮೋಘವಾದ, ರುದ್ರಾಕ್ಷಿಗಳಿಂದ ಮಾಡಲ್ಪಟ್ಟ ದಿವ್ಯವಾದ ಮಾಲಿಕೆಗಳಿಂದಲು, ಈ ರೀತಿಯಾಗಿರುವದೆಂದು ಹೇಳಲಸದಳವಾದ ತೇಜಶ್ಶರೀರದ ಪ್ರಭೆಯಿಂದಲು ॥೩॥ ರಮಣೀಯವಾಗಿರುವ ಪದ್ಮಾಸನದಲ್ಲಿ ಕುಳಿತುಕೊಂಡು ಜ್ಞಾನಮುದ್ರೆಯಿಂದ ವಿರಾಜಿಸುತಲು, ಶರಣಾಗತರಾದ ಚೇತನ ಸಮುದಾಯಕ್ಕೆ ಉಂಟಾಗುವ ನಾನಾವಿಧವಾದ ಸಂಕಟಗಳನ್ನು ನಿಮಿಷಮಾತ್ರದಲ್ಲಿ ಧ್ವಂಸಮಾಡಲು ಶಕ್ತವಾಗಿರುವ ಬುದ್ಧಿಯಿಂದಲು ಅಮಂದಾನಂದ

---

೩೬ ಮೂ॥ ಜಂಪೆ ॥ ಅನುಪಬ್ರಹ್ಮರಂಧ್ರಾಸ್ಯವಾಗಿಹ ಹೃದಯ।
ವನಜದಲಿಕರ್ಣಿಕಾಪ್ರಣವಪೀಠದಲಿ ॥೧॥
ಶ್ವೇತಪಟಯಜ್ಞೋಪವೀತಗಳರಂಗಿನಿಂ, ಭೂತಿತ್ರಿಪುಂಡ್ರವಿ
ದ್ಯೋತಿತಾಳಿಕದಾ ॥೨॥
ರುದ್ರಾಕ್ಷಮಕುಟದಿಂ ರುದ್ರಾಕ್ಷಕಟಕದಿಂ, ರುದ್ರಾಕ್ಷಮಾಲೆ
ಯಿಂ ರೂಪೆಸೆವತನುವಿಂ ॥೩॥
ಸಿದ್ಧಪದ್ಮಾಸನದಿಚಿನ್ಮುದ್ರೆಯಿಂದ, ಮಾಯಾಬುದ್ಧಿಯಿಂನ
ನುನಗೆಯುಪ್ರೋಗರಂಗುವಮೋಗದಿಂ ॥೪॥

ಕ್ಕೆ ಆಸ್ಪದವಾಗಿರುವ ಕುಂದೇಂದುಗಳಂತೆಸೆವುತಿರುವ ಮಂದಹಾಸಾತಿಶಯದಿಂ ಕೂಡಿಕೊಂಡಿರುವ ಮುಖ ವಿಲಾಸದಿಂದಲು ‖ ೪‖ ವ್ಯಕ್ತವಾಗಿ ಉಚ್ಚರಿಸಲ್ಪಡುತಲಿರುವ ಅಕ್ಷರಗಳಿಂ ಶೋಭಾಯಮಾನವಾದ ವಿಚಿತ್ರವಾಗಿರುವ ಶಬ್ದಜಾಲಗಳಿಂದ ಜನನ ಮರಣ ಪ್ರವಾಹ ರೂಪವಾಗಿರುವ ಸಂಸಾರವೆಂಬ ಸಾಗರದಿಂದ ದಾಟಿಸುವದರಲ್ಲಿ ಅಪರಿಮಿತವಾದ ಸಾಮರ್ಥ್ಯವನ್ನು ಹೊಂದಿರುವ, ಅಜ್ಞಾನವೆಂಬ ಅಂಧಕಾರವನ್ನು ನಿವರ್ತನಮಾಡಿ ಜ್ಞಾನವೆಂಬ ಅಸದೃಶವಾದ ಬೆಳಕನ್ನುಂಟುಮಾಡುವ ನೆಂಬದಾಗಿ, ಯಥಾರ್ಥವಾದ ಅರ್ಥವುಳ್ಳಗುರು, ಶ್ರೀಪಾದವನ್ನು. ... ... ... ... ‖೫‖

೧೭ ವ ‖ ತಾ‖ ಮನಸ್ಸಂಬಂಧವಾಗಿರುವ ಸತ್ವವೆಂಬ ಧೊರೆಯಿರುವ ಪಟ್ಟಣಕ್ಕೆ ಪತಿಯುಂಮಾಡಿ ಅಂದರೆ ಈಮನಸ್ಸಿನ ಪ್ರವೃತ್ತಿಯೆಂಬುವದು ಯಾವಮಾರ್ಗವಾಗಿರುವುದೊ ಆಮಾರ್ಗಕ್ಕೆ ಎದುರಾಗಿರುವಂತೆ ಮಾಡಿ ಅಂದರೆ ? ಅಖಂಡವಾಗಿರುಮನಃ ಪ್ರವೃತ್ತಿಧಾರೆಗೆ ಅವಿಚ್ಛಿನ್ನವಾಗಿ ವಿಷಯವಾಗಿರುವಂತೆಸಗಿ ಅಂದರೆ ತಪ್ಪದೆ ಧ್ಯಾನಮಾಡುತ ಈಹಿಂದೆ ಉದಹರಿಸಿದ ಗುರುವಿಗೆ ಶಾಸ್ತ್ರೋಕ್ತಪ್ರಕಾರವಾಗಿ ವಿಧಿಯನ್ನತಿಕ್ರಮಿಸದೆ ಭಕ್ತಿಭಾವನೆಗಳಿಂದೊಡಗೂಡಿ, ಪೂಜೆಯುಂಮಾಡಿ, ಪೂರ್ವದಿನದೊಳು ಆಚರಿಸಿದ ಮಂತ್ರಾವೃತ್ತಿಗಳೊಳಗೆ ಒಂದುಸಾವಿರ ಜಪವನ್ನು ವಿನಯಪೂರ್ವಕವಾಗಿ, ಕೈಗಾಣಿಕೆಯನ್ನಾಗಿ ಸಮರ್ಪಿಸಿ ಜನನಮರಣ ಸ್ವರೂಪವಾಗಿರುವ ಸಂಸಾರವೆಂಬ ದೊಡ್ಡಬೆಟ್ಟದ ಝರಿಯಮಧ್ಯಭಾಗದೊಳು ಬಿದ್ದಿರುವದರಡೆಸೆಯಿಂದಲೆ ಮೇಲಕ್ಕೇಳಲಾರದೆ ಸಮಸ್ತವಾದ ಸುಖವನ್ನನೀಗಿಕೊಂಡಿರುವ ನನ್ನನ್ನು ಕೈಹಿಡಿದು ಉದ್ಧಾರವಂ ಮಾಡಬೇಕೆಂಬದಾಗಿ,

---

ವ್ಯಕ್ತಾಕ್ಷರವನುಡಿವ ವಾಕ್ಯದಿಂಭವಹರಣಶಕ್ತಿಯಿಂದೊಪ್ಪುವಾಚಾರ್ಯಪುಂಗವನಾ ‖೫‖

೧೭ ಮೂ‖ ವ‖ ಮನಸೊಕ್ಕಂಟರಾಜಧಾನಿವಿಭವಂಗೈದುಸಾಸಿರಜಪಮಂ ಕೈಗಾಣಿಕೆಗೊಟ್ಟು ಸಂಸಾರದುರ್ಗಭ್ರಗುಮಾರ್ಗಪವ

ದೈನ್ಯದಿಂ ಬೇಡಿಕೊಳ್ಳಬೇಕೆಂಬುದೊಂದು ಪಕ್ಷವು. ಅಥವಾ, ಈಧ್ಯಾನಕ್ಕೆ ಆರಂಭಿಸಿದ ಸಂದರ್ಭವೊದಲು ಮಾಡಿಕೊಂಡು ಇದುವರಿಗೆ ಉದಹರಿಸಿರುವ ಮಧ್ಯಭಾಗದ ಸಂದರ್ಭದೊಳು ಆಧಾರ ಚಕ್ರದೊಳಿರುವ ಶ್ರೀಸಿದ್ಧವಿನಾಯಕನಿಗೆ ಆರುನೂರುಜಪಗಳನ್ನು, ತರುವಾಯು ಸ್ವಾಧಿಷ್ಟಾನವೆಂಬ ಚಕ್ರದೊಳು ವಿರಾಜಮಾನನಾದ ಬ್ರಹ್ಮನಿಗೆ ಒಂದು ಸಾವಿರ ಜಪಗಳನ್ನು, ತರುವಾಯು, ಮಣಿಪೂರ ಚಕ್ರದೊಳು ವಿಲಾಸದಿಂದಿರುವ ಸರ್ವವ್ಯಾಪಕನಾದ ಶ್ರೀಮಹಾವಿಷ್ಣುವಿಂಗೆ ಎರಡು ಸಾವಿರ ಜಪಗಳನ್ನು, ಒಳಿಕ ಅನಾಹತ ಚಕ್ರದೊಳು ವಿಕಾಸಮಾನವಾದ ಶ್ರೀಮಹಾರುದ್ರನಿಗೆ ಮೂರು ಸಾವಿರ ಜಪಗಳನ್ನು, ಆಮೇಲೆ ವಿಶುದ್ಧಚಕ್ರದಲ್ಲಿ ಥಳಥಳಿಸುತಲಿರುವ ಪರಮೇಶ್ವರನಿಗೆ, ನಾಲ್ಕು ಸಾವಿರ ಜಪಗಳನ್ನು, ತದನಂತರದಲ್ಲಿ ಆಜ್ಞಾಚಕ್ರದೊಳಗೆ, ಹೊಳೆಯುತಲಿರುವ ಶ್ರೀಸದಾಶಿವನಿಗೆ ಐದುಸಾವಿರ ಜಪಗಳನ್ನು, ಆಬಳಿಕ ಸಹಸ್ರಾರ ಚಕ್ರದಲ್ಲಿ ಪ್ರಕಾಶಮಾನವಾದ ಸಾಕ್ಷಾತ್ ಶ್ರೀಮಹಾಗುರುವಿಗೆ ಆರುಸಾವಿರಜಪಗಳನ್ನು, ವಿಶೇಷವಾದ ಭಕ್ತಿಯು, ಶ್ರದ್ಧೆಯು ಪರಿಶುದ್ಧಿಯು, ಇವುಗಳಿಂದೊಡಗೂಡಿ ಕ್ರಮವಾಗಿ, ಸಮರ್ಪಣೆಯುನ್ನು ಮಾಡಿಸ್ಥೈರ್ಯದಿಂದ ಪ್ರಾರ್ಥನೆ ಮಾಡತಕ್ಕದ್ದೆಂಬುವದು ಇದೊಂದು ಪಕ್ಷವು. ಈ ಎರಡು ವಿಧವಾಗಿರುವ ಪಕ್ಷಗಳಲ್ಲಿ ಅವರವರ ಗುರುವು ಯಾವಯಾವ ಪ್ರಕಾರವಾಗಿ ಉಪದೇಶವನ್ನು ಮಾಡಿರುವನೊ, ಆಮಹಾನುಭಾವನಾದ ಸದ್ಗುರುವಿನುಪದೇಶದ ಸಂಪ್ರದಾಯುವನ್ನು ಅನುಸರಿಸಿ, ಪುರುಷನು ಯಷ್ಟರ ಮಟ್ಟಿಗೆ ಆಯುಃ ಪರಿಮಿತ ಕಾಲವನ್ನುಪಡೆದು ಬಂದಿರುವನೊ, ಅಂದರೆ ಎಷ್ಟುದಿವಸಗಳು ಬದುಕಿರುವನೊ ! ಆಪರ್ಯಂತರವೂ ಈ ಮೇಲೆ ಉದಹರಿಸಿ

---

ನಪರಿಧ್ವಸ್ತಸಂತೋಷನಂ, ಕೈವಿಡಿವುದೆಂದುಂ, ಈ ಪ್ರದೇಶದಲ್ಲಿ ಗಣೇಶಂಗಾರುನೂರು, ಬ್ರಹ್ಮಂಗೆ ಸಾವಿರ, ವಿಷ್ಣುವಿಂಗೆ ಮೂರುಸಾವಿರ, ರುದ್ರಂಗೆ ಮೂರುಸಾವಿರ, ಈಶ್ವರಂಗೆ ನಾಲ್ಕುಸಾವಿರ, ಸದಾಶಿವಂಗೈದುಸಾವಿರ, ಶ್ರೀಗುರುವಿಂಗಾ

ದಂತೆ ಆಯಾಯ ದೇವತೆಗಳಿಗೆ ಕ್ರಮವಾಗಿ ಜಪಗಳನ್ನು ಸಮರ್ಪಣೆಮಾಡಿ ಪೂಜಿಯನ್ನುಮಾಡುತ್ತಿರಲಾಗಿ ತರುವಾಯ ಪ್ರಾರಬ್ಧಕರ್ಮಾನುಗುಣವಾಗಿ ಮುಂದೆಪ್ರಾಪ್ತಿಯಾಗುವ ಶರೀರಗಳು ಅದರ ದೇವತೆಗಳು, ರಾಕ್ಷಸರು, ಮೃಗಗಳು, ಪಶುಗಳು, ಪಕ್ಷಿಗಳು,ಮುಂತಾಗಿ ಯಾವದಾದರೂ ದು ದೇಹದೊಳಗೆ ಇರುವ ಸಮಯದಲ್ಲಿ,ಪೂರ್ವದೊಳು ಉಪಾಸನ ಮಾಡಿದ ಹಂಸಮಂತ್ರಜಪ ಸಮರ್ಪಣೆಮಾಡಿದ್ದರಿಂದ ಸಂತುಷ್ಟರಾಗಿ ಅಪರಿಮಿತವಾದ ಅನುಗ್ರಹಶಾಲಿಗಳಾದ ವಿಘ್ನೇಶ್ವರನೆ ಮುಂತಾದ ಸಮಸ್ತ ದೇವತೆಗಳೂ ಶ್ರೀಗುರು ಮೂರ್ತಿಯಶರೀರವನ್ನು ಆಶ್ರಯಿಸಿಬಂದು.

೧೪ ಜಂಪೆ॥ ತಾ॥ ಎಲೈ ಮಗುವೆ ಅಂಜದಿರು, ಅಜ್ಞಾನದ ವಿಜೃಂಭಣೆಯಿಂದ ಉಂಟಾಗಿದ್ದ ಆಧ್ಯಾತ್ಮಿಕ, ಆಧಿದೈವಿಕ, ಆಧಿಭೌತಿಕ ಸಂತಾಪಗಳನ್ನು ಇಲ್ಲವೆ ಜನನ ಮರಣ ಪ್ರವಾಹರೂಪವಾಗಿರುವ ಸಂಸಾರ ಸಾಗರದಲ್ಲಿ ಸಂಭವಿಸುವ ಇಷ್ಟವಿಯೋಗ ಅನಿಷ್ಟ ಪ್ರಾಪ್ತಿ ಇವುಗಳಿಂದ ಜನಿಸುವ ಸಂತಾಪ ಸಮುದಾಯವನ್ನು ಜಯಿಸಿದಂಥವನಾದೆ. ಅದೆಂತೆಂದರೆ, ವಜ್ರದ ಸಲಾಕೆಗಳಿಂದ ವರ್ತುಲಾಗಿರುವಂತೆ ಅಂದರೆ ಭದ್ರವಾಗಿರುವಹಾಗೆ ರಚಿಸಿರುವ ಪಂಜರದಲ್ಲಿರುವಗಿಳಿಗೆ ಮುದಿಯಾಗಿರುವ ಬೆಕ್ಕಿನಿಂದ ಭಯವು ಸಂಭವಿಸುವದುಂಟೆ? ಒಂದುಕಾಲಕ್ಕು ಸಂಭವಿಸುವದಿಲ್ಲವು ॥೧॥ ಪುನರುತ್ಪತ್ತಿ ರೂಪವಾದ ಸಂಸಾರವು

---

ರುಸಾವಿರ, ಜಪಮಂಸಮರ್ಪಿಸಿ, ಪ್ರಾರ್ಥಿಸುವದೆಂಬುದೊಂದುಪಕ್ಷ ಈ ಪಕ್ಷದ್ವಯಂಗಳೊಳ್ ಯಥಾಸಂಪ್ರದಾಯಮಾಗಿಯಾವಜೀವಮಿಂತಾರಾಧಿಸುತಿರಲ್ಕಾಜನ್ಮೋಪರಿವಿದ್ಯಮಾನಶರೀರಂದೇವಾಸುರತಿರ್ಯಙ್ನರಾದಿಗಳೊಳಾವುದಾಗಲಿ, ಆಕಾಲದಲಿ ಪೂರ್ವಾಚರಿತಹಂಸಮಂತ್ರಜಪಪ್ರಧಾನ ಪ್ರಸನ್ನರಾದ ಗಣೇಶಾದ್ಯಮಹೇಶ್ವರರಾಗುರುಮೂರ್ತಿಯಂಪ್ರವೇಶಿಸಿಬಂದು॥

೧೪ ಮೂ॥ ಜಂಪೆ॥ ಅಂಜದಿರುಮಗನೆತಾಪಂಜಯಿಸಿದೈವಜ್ರಪಂಜರದ ಗಿಳಿಗೆಮುದಿಮಂಜರನಕಿಟುಕೆ ॥೧॥

ಕೊಲಗಿ ಹೋಯಿತು. ಇನ್ನು ಎಂದೆಂದಿಗು ಬರುವದಿಲ್ಲ. ಅದೆಂತೆಂದರೆ ಅಮೋಘವಾದ ನಮ್ಮ ಶ್ರೀಪಾದಧೂಳಿಯ ಸಂಬಂಧ ಮಾತ್ರದಿಂದಲೆ ಜನನ ಮರಣ ಪ್ರವಾಹರೂಪವಾಗಿರುವ ಸಂಸಾರವೆಂಬುವ ಸಮುದ್ರವು ಬತ್ತಿಹೋಯಿತು. ಇನ್ನು ಸಮನಿಸುವದಿಲ್ಲವು. ‖೧‖ ಎಂದೀ ಪ್ರಕಾರವಾಗಿ ಸಂತೈಸಿ ವಿಶೇಷವಾದ ಅಕ್ಕರೆಯಿಂದ ಬಾ ಎಂಬದಾಗಿ ಕರೆದು ಸಮೀಪದಲ್ಲಿ ಕುಳ್ಳಿರಿಸಿಕೊಂಡು ಅತ್ಯಂತ ದಯಾರಸದಿಂದ ಕೂಡಿರುವ ಕಟಾಕ್ಷದಿಂದ ನಿನ್ನನ್ನು ನೋಡಿ ನಿನ್ನ ಯಮಪ್ರಾಣ ವಾಯುವಿನ ಸಂಗಡ ಸೇರಿರುವದೇನು, ‖ ೩ ‖ ಅದನ್ನು ಚನ್ನಾಗಿ ಸ್ಮರಿಸಿಕೊಂಡು ತರುವಾಯು, ಆ ಮಂತ್ರವರ್ಣಗಳನ್ನು ವ್ಯತ್ಯಸ್ತವಾಗಿ ಅಂದರೆ ತಲೆಕೆಳಗಾಗಿ ಮಾಡಿ ಅದನ್ನು ಮನಸ್ಸಿನಿಂದ ತಿಳದುಕೊಂಡು ಆಮೇಲೆ ಈ ಅಕ್ಷರಗಳನ್ನು ವ್ಯತ್ಯಾಸಮಾಡುವದರಿಂದುಂಟಾದ ಶಬ್ದಸ್ವರೂಪವೇನು ? ಅಂದರೆ ಅದರ ರಹಸ್ಯವೇನು? ಎಂಬದಾಗಿ ಚಿಂತಿಸಿ ಪ್ರಶ್ನೆಮಾಡುವಂಥವನಾಗು. ‖೪‖ ಈ ರೀತಿಯಾಗಿ ನೀನು ಆಲೋಚಿಸಿ ಕೇಳಿದ ಸಮಯದೊಳು ಸ್ಪಷ್ಟವಾಗುವದು ಅದೆಂತೆಂದರೆ ? ಮೊದಲು ಹಂಸಃ ಎಂಬದಾಗಿ ಇದ್ದದ್ದನ್ನು ಈಗ ವ್ಯತ್ಯಾಸವಾಗುವಂತೆ ಮಾಡಿದರೆ ಸೋಹಂ, ಎಂಬದಾಗಿ ಶಬ್ದವು ಪರಿಣಮಿಸುವದು. ಅನಂತರದಲ್ಲಿ ಈ ಸೋಹಂ ಎಂಬ ಪದಕ್ಕೆ ಅರ್ಥವೇನಾಗುವದೆಂಬದಾಗಿ ವಿಚಾರಮಾಡು. ಹಾಗೆ ಅರ್ಥವನ್ನು ವಿಚಾರಿ

---

ಪೋದುದಿನ್ನಿರದುಭವಪೊಸತಲ್ಲವೆಮ್ಮ ಶ್ರೀಪಾದರೇಣುವಿನಸಂ
ಪರ್ಕಮಾತ್ರದಲೆ ‖೧‖
ಎಂದುಲಾಲಿಸಿಕರೆದುಮುಂದೆಕುಳ್ಳಿರಿಸಿ ದಯದಿಂದನಿನ್ನನುವಿ
ನೊಡನೊಂದಿರುವದೇನು ‖೩‖
ಆಮನುವಪರಿಯಸ್ತವಾಗಿಭಾವಿಸು ಭಾವಮಿರ್ಗದಬಗೆಯೇ
ನೆಂದುಕೇಳು ‖೪‖
ಆಗಸೋಹಂಪದೆತೆಯ್ದೈದಲದ ಕರ್ಥಮೇನಾಗುದೆನಲ್ ಸತ್ಯನಾ
ದಪುರುಷನೆ ‖೫‖

ಸುವ ಸಂದರ್ಭದಲ್ಲಿ ತ್ರಿಕಾಲಾಬಾಧ್ಯವಾಗಿರುವ ಸತ್ಯಸ್ವರೂಪನಾದ ಪುರುಷಶಬ್ದ ವಾಚ್ಯನಾದ ಆತ್ಮನೇ ಎಂಬದಾಗಿ ತಿಳಿ. ॥೫॥ ಈ ಬಗೆಯಿಂದ ತಿಳಿದುಕೊಂಡನಂತರ ಆ ಆತ್ಮಸ್ವರೂಪವೆ ನಾನು ಎಂಬದಾಗಿ ಸಂದೇಹವಿಲ್ಲದೆ ತಿಳಿದುಕೊಂಡವನೆ ಆದರೆ, ಆ ಸಮಯದಲ್ಲಿ ದೇಹವೇ ಮೊದಲಾಗಿರುವ ಅನಾತ್ಮವಸ್ತು ಸಂಬಂಧವೂ ನಿನಗೆ ಲೇಶವಾದರೂ ಇರುವದಿಲ್ಲ. ಆ ಆನಂದ ಘನವಾಗಿಯೂ, ಅಖಂಡವಾಗಿಯೂ ಇರುವ ಪರಾತ್ಮನನ್ನು ನೀನು ನಿನ್ನ ಸ್ವಂತವಾದ [ಅನುಭವ ಬಲದಿಂದ ತಿಳಿಯುವದಕ್ಕೆ ಯೋಗ್ಯನಾಗುವಿ. ॥೬॥ ಹಾಗೆ ನಿಸ್ಸಂಶಯವಾಗಿ ತಿಳಿದ ತರುವಾಯು ಪರೆಬಿಟ್ಟ ಸರ್ಪಕ್ಕೆ ಹ್ಯಾಗೆ ಆ ಪರೆಯು ಸಂಬಂಧವೆಂಬುವದು ಸುತರಾಂ ಇಲ್ಲವೋ ? ಅದರಂತೆಯೆ ನೀನೂ ಪಂಚಭೂತಗಳು ಮತ್ತು ಇವುಗಳ ಕಾರ್ಯಗಳು, ಇವುಗಳ ಸಂಬಂಧವೆ ಇಲ್ಲದಿರುವಂಥವನಾಗಿ ಸಾಕ್ಷಾತ್ ಪರಮೇಶ್ವರನೇ ಆಗುತಲಿಧೀಯೆ ? ॥೭॥

೧೯ ಗೀತ॥ ತಾ॥ ಮತ್ತು ವಿಶದಪಡಿಸುವೆನು, ಜಾಗ್ರತೆಯಿಂದವಧರಿಸು, ಚನ್ನಾಗಿ ಕಾಸಿರುವ ಚಿನ್ನಕ್ಕೆ ಟಂಕವನ್ನು ಮಾಡುವಾಗ ಸ್ವಲ್ಪವಾಗಿ ಬೆಳುಗಾರವನ್ನು ಸೋಕಿಸಿದರೆ ಹ್ಯಾಂಗೆ ಬಿಡದೆ ಅಂಟಕೊಳ್ಳುವದೋ ? ಅದರಂತೆಯೇ, ನೀನು ಪೂರ್ವದಲ್ಲಿ ಕ್ರಮವಾಗಿ ಅನುಷ್ಠಾನಮಾಡಿದ ಹಂಸಮಂತ್ರ ಜಪದ ಬಲದಿಂದ ಮಾಲಿನ್ಯವೆಂಬುವದೆಲ್ಲ ಶುದ್ಧವಾಗಿ ಹೋಗಿ ನಿರ್ಮಲನಾಗಿರಲು ಆಗ ಮಂತ್ರವನ್ನು

---

ನಾನೆಂಬುದೊಪ್ಪುವದ ನಾತ್ಮಸಂಸರ್ಗವಿರದಾನಂದ ಘನಮಖಂಡಾನುಭವವೇನದಂ ॥೬॥

ಕಂಚುಕಂಜಗುಳ್ದನಾಗಾಧೀಶನಂದದಿ ಪ್ರಪಂಚವಿರಹಿತನಾದಪರಮೇಶನಪ್ಪೆ ॥೭॥

೧೯ ಮೂ॥ ಗೀತ॥ ಕಾದಚಿನ್ನ ಕೆನಸುಬೆಳುಗಾರ ಸೋಕೆಬೆಚ್ಚುಬ
ವಂದದಿಮೊದಲಮಂತ್ರೋಚ್ಚಾರಣೆಯುಕರಣದಿಂ ಶುದ್ಧನಾದ,
ಸೋಂಕಾಬೆನಾನೇ(ಪು)ರುಷನೆಂದೀವಿಕಾರಮಂಪೊಂದೆಮುಂದೆ ॥೧॥

ವ್ಯತ್ಯಸ್ತವಾದ ಸೋಽಹಂ ಯೆಂಬ ಪದಕ್ಕರ್ಥವಾದ ಸತ್ಯಾತ್ಮನು ನಾನೇ ಎಂಬದಾಗಿ ನಿನ್ನ ಸ್ವರೂಪ ಸಾಕ್ಷಾತ್ಕಾರವು ನಿನಗೆ ವಿಶದವಾಗುವದು. ಆ ತರುವಾಯು ಜನನ ಮರಣವುಳ್ಳ ದೇಹವು ನಿನಗೆ ಎಂದಿಗೂ ಬರುವದಿಲ್ಲವು.

೨೦ ವಚನ॥ ತಾ॥ ಈ ಪ್ರಕಾರವಾಗಿ ಅಜಪಾ ಗಾಯತ್ರಿಮಂತ್ರ ಜಪವಿಧಾನವನ್ನು ವಿವರ ಪಡಿಸಿ ತರುವಾಯು ಸಕಲ ಮಂತ್ರ ಸಮುದಾಯಕ್ಕು ಉತ್ತಮವಾಗಿಯೂ ಮತ್ತು ಇತರ ಮಂತ್ರಗಳಿಗೆಲ್ಲ ಶಕ್ತಿಯನ್ನುಂಟುಮಾಡತಕ್ಕದ್ದಾಗಿಯೂ, ಇರುವ ಪಂಚಾಕ್ಷರಿಯೆಂಬ ಮಹಾಮಂತ್ರ ವಿಧಾನವನ್ನು ಮನಃಪ್ರಭುವನುದ್ದೇಶವಾಡಿ ವಿಶದ ಪಡಿಸುತಲಿಧಾನೆ.

ಇಂತು ಅಜಪಾಗಾಯತ್ರೀಮಂತ್ರ ವಿಚಾರಪದ್ಧತಿಯು ಮುಗಿದುದು.

ಪದ್ಧತಿ ೧೩ಕ್ಕೆ ಮಂಗಳಮಸ್ತು.

---

## ೧೪ ಪಂಚಾಕ್ಷರೀ ಮಂತ್ರ ವಿಚಾರ ಪದ್ಧತಿ ಪ್ರಾರಂಭವು.

೧ ತ್ರಿಪುಡೆ॥ ತಾ॥ ಪೃಥಿವ್ಯಾದಿ ಪಂಚಭೂತಗಳಿಗೆ ಕಾರಣಭೂತವಾಗಿರುವ ಅಕ್ಷರದಿಂದ ಸಹಿತವಾದಮೇಲೆ ಉದಹರಿಸಿದ ಮಹಾಮಂತ್ರದ ಅರ್ಥವನ್ನು ಶ್ರದ್ಧಾಭಕ್ತಿಗಳಿಂದೊಡಗೂಡಿ ಸದ್ಗುರುವಿನ ಸ

---

೨೦ ಮೂ॥ ವ॥ ಇಂತ ಜಪಾಗಾಯಿತ್ರೀ ವಿಧಾನಮಂಪೇಳಿ, ಪಂ
ಚಾಕ್ಷರಿ ಮಹಾಮಂತ್ರಮಂ, ಸರ್ವ ಮಂತ್ರೋಜ್ಜೀವನಮಂ,
ತಾರಕಮಂ, ಎಲೈ ಭೂಪನೆ,

ಇಂತ ಅಜಪಾಗಾಯತ್ರೀಮಂತ್ರ ವಿಚಾರಪದ್ಧತಿಯು ಮುಗಿದುದು.

ಪದ್ಧತಿ ೧೩ಕ್ಕೆ ಮಂಗಳಮಸ್ತು.

---

## ೧೪ ಪಂಚಾಕ್ಷರೀ ಮಂತ್ರ ವಿಚಾರ ಪದ್ಧತಿ ಪ್ರಾರಂಭವು.

೧ ಮೂ॥ ತ್ರಿ॥ ಭೂತಕಾರಣವಪ್ಪ ವರ್ಣಸಮೇತವಾದ ಮಹಾ
ಮನುವ, ಸಂಪ್ರೀತಿಯಿಂತಿಳಿವುದು, ತದರ್ಥವರಿಯರಿಂದ॥೧॥

ವಿಶಾಪವನ್ನು ಹೊಂದಿ ಆ ಮಹಾನುಭಾವನ ಸೇವೆಯನ್ನು ಚೆನ್ನಾಗಿ ಮಾಡಿ ಆತನ ಅನುಗ್ರಹವನ್ನು ಸಂಪಾದಿಸಿ ಆಮೇಲೆ ಅನುವಾದ ಪ್ರಶ್ನೆಯ ಮೂಲಕ ತಿಳಿದುಕೊಳ್ಳತಕ್ಕದ್ದು. ‖೧‖ ಅದೆಂತೆಂದರೆ,—ಅನವರತವೂ ಸುಖಸ್ವರೂಪವಾಗಿ, ಮಾಯಾಮಲ ಸಂಬಂಧವೆಂಬುವದು ಲೇಶವಾದರು ಇಲ್ಲದೆ ಇರುವ ಅಖಂಡ ಚಿದಾನಂದ ಸ್ವರೂಪ ವಸ್ತುವೇ ಶಿವಶಬ್ದಕ್ಕೆ ಮುಖ್ಯವಾಗಿ ಹೇಳುವದಕ್ಕೆ ಯೋಗ್ಯವಾದ ಅರ್ಥವು. ಈ ಅಮೋಘವಾದ ಶಿವಶಬ್ದಕ್ಕೆ ಉತ್ತರದಲ್ಲಿರುವ ಚತುರ್ಥ ವಿಭಕ್ತಿಯ ಅಂದರೆ,—ನಾಲ್ಕನೆ ವಚನದಲ್ಲಿರುವ ಪ್ರತ್ಯಯಕ್ಕೆ ಜೀವೇಶ್ವರರಿಗೆ ಯೇಕತ್ವರೂಪವಾಗಿರುವ ಸಂಬಂಧವೆ ಅರ್ಥವು. ‖ ೨ ‖ ತಾನು ಕೋರುವ ಇಷ್ಟಾರ್ಥದ ಪ್ರಾಪ್ತಿಯ ಅರ್ಥದಲ್ಲಿ ನಮಃಪದವು ಶಕ್ತವಾಗಿರುವದು. ಇದು ಜೀವವಾಚಕವಾಗಿ ಯಿರುವದು, ಯಾಕಂದರೆ,—ವ್ಯಾವಹಾರಿಕದಲ್ಲಿ ಜೀವತ್ವದಿಂದೊಡಗೂಡಿರುವ ಜೀವನೆ ಅಥವಾ ಚೇತನನೇ ಪರಮಾರ್ಥದಲ್ಲಿ ಚೈತನ್ಯಾಭೇದವನ್ನು ಕೋರುತಲಿರುವನು. ಆದುದರಿಂದ ಜೀವವಾಚಕ ವಾದದ್ದೆಂಬದಾಗಿ ತಿಳಿಯುತಕ್ಕದ್ದು. ‖೩‖ ಆದರೆ ಈ ಪೂರ್ವಾಪರ ಪದಗಳೊಳಗೆ ಯಾವದು ಮುಖ್ಯವಾದದ್ದೆಂದರೆ? ಮೊದಲನೆಯದಾದ ಪದವೇ ಮುಖ್ಯವಾದದ್ದು. ಆ ಪದಾರ್ಥದಲ್ಲಿ ಯೆತದಿತರವಾದ ಪದಾರ್ಥದ ಅತ್ಯಂತಾಭಾವವೆಂಬುವದು ಸಂಗತವಾಗಿರುವದು, ಆದುದರಿಂದಲೆ ಅಭಿನ್ನವಾಗಿರುವದೆಂಬದಾಗಿ ಭಾವಿಸತಕ್ಕದ್ದು. ‖೪‖ ಈ ರೀತಿಯಾಗಿರುವ ಅಖಂಡಾನಂದ ಸ್ವರೂಪವಾಗಿರುವ ವಸ್ತುವಿನ ಭಾವನೆಯಿಂದ ಅ

---

ನಿತ್ಯಮಂಗಳವಾದ ನಿರ್ಮಲನಿಜವೆ ಶಿವಶಬ್ದೈಕವಾಚ್ಯಂ ಪ್ರ
ತ್ಯಯಕ್ಕೆಚತುರ್ಥಿಗೆ ಸುಸಂಬಂಧಮಾತ್ರ ‖೨‖
ಅಭಿಲಷಿತವಸ್ತುಪ್ರಾಪ್ತಿಯರ್ಥವನಧಿಕರಿಸಿದ, ನಮಃಪದಮೆಜೀ
ವಭವಣೀಯಮೆನಿಪುದು ಪೂರ್ವಾಪರಪದಗಳ ‖೩‖
ಯುಗದೊಳಾವುದು ಮುಖ್ಯಮೆನೆ ಮೊದಲೊಗೆದದರಿಂದವೇನೆನ
ಲ್ಭಾ, ವಗತಭೇದಗಳಿತಭಾವ್ಯಂವಶಿರುವುದು ‖೪‖

ಖಂಡಾದ್ವಿತೀಯನಾ ನಂದಘನ ವಸ್ತುಭಾವವೇ ಬರುವದಲ್ಲದೆ ಭ್ರಮ
ಜನ್ಯವಾಗಿರುವ ಭಿನ್ನಭಾವವು ಸಂಭವಿಸುವದಿಲ್ಲವು. ಆದುದರಿಂ
ದಲೇ ಆಪೂರ್ಣಭಾವವೇ ಭಾವಿಸುವದಕ್ಕೆ ಯೋಗ್ಯವಾಗಿರುವದೆಂದರಿ
ಯತಕ್ಕದ್ದು. ಆದರೆ ಆ ಆನಂದ ಘನವಸ್ತುವಿನ ಅಖಂಡಭಾವನೆ
ಯಿಂದ ಅದರಭಾವವೆ ಬರುವದೆಂದು ಹ್ಯಾಗೆ ನಿಶ್ಚಯಿಸತಕ್ಕದೆಂದು
ಒಂದುವೇಳೆ ಶಂಕೆ ಯುಂಟಾದರೆ ಬೇರೆಬೇರೆ ಉದಾಹರಣಗಳಿಂದ ಆ
ಸಂಶಯವನ್ನು ನಿವೃತ್ತಿಮಾಡುತ್ತಾನೆ. ॥೫॥ ತೇಜೋಮಯನಾದ
ಶ್ರೀ ಸೂರ್ಯಭಗವಂತನನ್ನು ಭಕ್ತಿಯಿಂದ ಆರಾಧನೆಯನ್ನು ಮಾ
ಡಿದರೆ ಆ ಆರಾಧನವು ಅಥವಾ ಆರಾಧನಫಲವು ಕತ್ತಲೆಯನ್ನು ಉಂ
ಟುಮಾಡಿ ಕೊಡುವದುಂಟೆ? ಮತ್ತು ಚಂದ್ರನನ್ನು ಶ್ರದ್ಧೆಯಿಂದ
ಪೂಜೆಮಾಡಿದ ಫಲವು ದೇಹಕ್ಕೆ ಸಂತಾಪವನ್ನುಂಟುಮಾಡುವದೇ?
ಇನ್ನು ಪ್ರಾತಃಕಾಲದಲ್ಲಿಯು ಮತ್ತು ಸಾಯಂಕಾಲದಲ್ಲಿಯು ವಿಧಿ
ಪ್ರಕಾರವಾಗಿ ಅಗ್ನಿಹೋತ್ರೋಪಾಸನೆಯನ್ನು ಮಾಡಲು ಸ್ವರ್ಗಾ
ದಿ ಉತ್ತಮಲೋಕ ಪ್ರಾಪ್ತಿ ಇಲ್ಲದೆ ವ್ಯರ್ಥವಾಗಿ ಹೋಗುವದುಂ
ಟೆ? ॥ ೬ ॥ ದಾರಿದ್ರ್ಯ ನಿವೃತ್ತಿಗೋಸ್ಕರವಾಗಿ ಶ್ರೀಹರಿಯ ಭಜನೆ
ಯನ್ನು ಮಾಡಿದರೆ ಆ ಭಜನಫಲವು ಧೂಮಾದಿ ಮಾರ್ಗವನ್ನು ಕೊ
ಡುವಂಥಾದ್ದಾಗಿ ಪರಿಣಮಿಸುವದೆ? ಅಂದರೆ, ಮಹಾಪಾಪಿಗಳಾಗಿರು
ವವರು ದೇಹತ್ಯಾಗಾನಂತರದಲ್ಲಿ ಹೋಗುವ ಧೂಮಾದಿ ಮಾರ್ಗದಲ್ಲಿ
ಹೋಗುವಂತೆ ಮಾಡುವದೇ? ಪರ್ವತರಾಜನ ಪುತ್ರಿಯಾಗಿ ಸರ್ವ
ಮಂಗಳಗಳಿಗೂ ಆಸ್ಪದಳಾಗಿರುವ ಶ್ರೀ ಪಾರ್ವತಾದೇವಿಯನ್ನು ಉ

---

ಯಾವನಿಜದಿಂದ ಪಡೆವುದು, ಭಾವವಿಾಭಾವಾಕೃತಿತ್ವವ, ಸೇ
ವಿಸದುತದಾ ಭ್ರಮ್ಯಮಿದುಸತ್ಯಾವಬೋಧಂ ॥೫॥
ರವಿಯಪೂಜಾಫಲವು ತಾಮಸಭಾವನವೆ, ಚಂದ್ರಾರ್ಚನೆಯು
ತಾಪವನೊಡರ್ಚುವದೆ ಕ್ರಮಶಾನುಸಪರ್ಯೆಯಹುದೆ ॥೬॥
ದೀನತೆಗೆಹರಿಭಜನೆ, ಧೂಮಾದಿಗತಿದಾಯಕವೆ, ಗಿರೀಂದ್ರಸು
ತಾನುಸರ್ಪಣೆಯಹುದೆ ಪರಿಭವದಾನದುರಿಯಂ ॥೭॥

ಪಾಸನೆ ಮಾಡಿದರೆ ಆ ಫಲವವು ಅಪಜಯುವನ್ನು ಉಂಟುಮಾಡುವದೆ? ||೭|| ಪರಮೇಶ್ವರನಿಗೆ ಪುತ್ರನಾಗಿರುವ ಶ್ರೀವರಸಿದ್ಧಿವಿನಾಯುಕ ಸ್ವಾಮಿಯುನ್ನು ಶ್ರದ್ಧಾಭಕ್ತಿಗಳಿಂದ ಉಪಾಸನೆ ಮಾಡಿದರೆ ಆ ಉಪಾಸನೆಯು ಫಲವು ವಿಘ್ನಗಳಿಗೆ ಮುಖ್ಯಕಾರಣವಾಗಿ ಇರುವಂಥಾದ್ದಾಗಿ ಪರಿಣಮಿಸುವದೆ ? ಯಾಗಾದಿಗಳನ್ನು ಮಾಡುವದರಿಂದಲು, ದೇವಗಂಗೆ ಯೊಳು ಸ್ನಾನ ಪಾನಗಳನ್ನು ಮಾಡುವದರಿಂದಲು, ಉಂಟಾದ ಸುಕೃತವು ಮಹಾ ನರಕ ಯಾತನೆಗಳುಂಟಾಗುವದೆಂಬ ಮಹಾಭಯುವನ್ನು ಉಂಟುಮಾಡುವದೆ? ||೮|| ಅಬದ್ಧವಾಗಿರುವ ಸಂಕಲ್ಪವಿಶೇಷಗಳಿಂದ ಉಂಟಾದ ಇಚ್ಛಾವಿಶೇಷಗಳಿಂದ ಆಯಾಯು ದೇವತೆಗಳನ್ನು ಉದ್ದೇಶಮಾಡಿದ ಉಪಾಸನಾದಿಗಳು ಅದರದರಯೋಗ್ಯತೆಯುನ್ನು ಅನುಸರಿಸಿ ಅಂದರೆ, ಆಯಾಯು ಸತ್ವಾನುಸಾರವಾಗಿ ಫಲಪ್ರದಾನ ಮಾಡುತ್ತಿರುವಲ್ಲಿ ಮತ್ತು, ಅದನ್ನು ಅನುಭವಿಸುವ ಅನುಭವಿಗಳಿಗು ಸಿದ್ಧವಾಗಿರುವಲ್ಲಿ ಪರಮಾರ್ಥ ವಸ್ತುಭಾವನೆಯಿಂದ ಪರಮಾರ್ಥಫಲವು ಹ್ಯಾಂಗೆ ಉಂಟಾಗದೆ ಹೋಗುವದು, ಅಥವಾ ಕಾಮಾನುಗುಣವಾದ ರುಚಿ ಇದ್ದರು ಫಲಪ್ರಾಪ್ತಿಯೆಂಬುವದು ಹಾಗೆಯೆ ಉಂಟಾಗುವದೆ ದು ಹ್ಯಾಂಗೆ ಹೇಳುವಿರೆಂದರೆ ?ಸಮಸ್ತರಾದ ಅನುಭವವಿಶಾರದರೆಲ್ಲರು ಪರಶಿವ ಭಾವನೆಯಿಂದ ಪರಶಿವತ್ವವು ಪ್ರಾಪ್ತಿಯಾಗುವದೆಂದು ತಮ್ಮ ಅಮೋಘವಾದ ಅನುಭವವನ್ನು ವ್ಯಕ್ತಪಡಿಸುತ್ತಿರುವಲ್ಲಿ ಯಾವವಿಧವಾದ ಪ್ರಮಾಣವೂ ಇಲ್ಲದೆ ಇರುವವಚನವನ್ನು ಹ್ಯಾಗೆ ಪ್ರಮಾಣವೆಂಬದಾಗಿ ನಂಬಬಹುದು, ಆಗುವದಿಲ್ಲ ವಾದುದರಿಂದ ಇಂತಪ್ಪ ಸಂದೇಹವನ್ನು ಅವಶ್ಯಕವಾಗಿ ತೊಲಗಿಸತಕ್ಕದ್ದು,||೯||ಇನ್ನು ಆ ಪರಶಿವನ ಬಗೆ ಯೆಂತೆಂದರೆ, ಸಕಲ ಜಗತ್ಕಾರಣವಾಗಿರುವನೇ ಅವನು,

---

ಏಕದಂತೋಪಾಸನೆಯು, ವಿಘ್ನೈಕಕಾರಣಮೆಯುಜನಮಂ ನಾಕನದಿಯಪೇರುವದೆ ದುಷ್ಕೃತಶೀಕರವನು ||೮||

ಯಲ್ಲಫುಳಿಕಾಮಾನುಗುಣರುಚಿಯಿರಲಿ, ಭಜಕರಪಪ್ರಾಪ್ತಿಯಲಿ, ತನ್ನಲ್ಲಿರುವಸತ್ವವನೆಶಿವಪದಮಾಚರಿಪುದು ||೯||

ಪರಬ್ರಹ್ಮವೆಂಬ ಪದಾರ್ಥವೆ ಆತನು, ಅಂಥ ಪರಬ್ರಹ್ಮನೆ ಸ್ವಸ್ವರೂಪವೆಂಬದಾಗಿಯು ಸ್ವಾಭಿನ್ನ ವೆಂಬದಾಗಿಯು ತದ್ವ್ಯತಿರಿಕ್ತ ವು ಶೂನ್ಯವೆಂಬದಾಗಿಯು ಭಾವನೆಯೆಂಬುವದು ಬಲವಾಗಲು ಆಗ ಮೊದಲು ಇಲ್ಲದೆಯು, ಮತ್ತು ಕಡೆಯುಲ್ಲಿಲ್ಲದೆಯು. ಮಧ್ಯಕಾಲದಲ್ಲಿಮಾತ್ರ ಕಾಣಿಸಿಕೊಂಡಿದ್ದ, ||೧೦|| ಆಕಾಶದಲ್ಲಿ ಮಹಾಭೂತಗಳು ಅವುಗಳ ಕಾರ್ಯಗಳು ಇವುಗಳೆಲ್ಲವು ಸುತರಾಂ ನಾಶವಾಗಿ ಹೋದಬಳಿಕ ನಿಖಿಲವಾಗಿಯು ಮಲರಹಿತನಾಗಿ ನೀನು ಮಾತ್ರವಿರುವೆ. ಆ ನೀನೆ ನಾಶರಹಿತನಾಗಿಯು ಸಮಸ್ತ ಪ್ರಮಾಣಗಳಿಗು ಅತೀತನಾಗಿಯು, ಶುದ್ಧನಾಗಿಯು, ಕೇವಲ ಸತ್ತಾಸ್ವರೂಪನಾಗಿಯು, ಅಖಂಡನಾಗಿಯು, ಸರ್ವವ್ಯಾಪಕನಾಗಿಯು, ಸ್ವತಃಪ್ರಕಾಶಮಾನನಾಗಿಯು, ಸಾಕ್ಷಿಯಾಗಿಯು, ನಿರ್ಧರ್ಮಕನಾಗಿಯು, ಆನಂದ ಘನನಾಗಿಯು ಇರುವನೆಂಬದಾಗಿ ತಿಳಿಯತಕ್ಕವನಾಗು. ... ||೧೧||

೨ ವ || ತಾ|| ಈ ಪ್ರಕಾರವಾಗಿ ಮಂತ್ರಯೋಗ ಪದ್ಧತಿಯನ್ನು ಮನಸ್ಸಿಗೆ ಅವಗಾಹನ ವಾಗುವಂತೆ ಪ್ರಮಾಣಾನುಭವಗಳಿಗೆ ಅನುಸಾರವಾಗಿ ಮುಂದೋಪಕಾರಕ್ಕೋಸ್ಕರದ ಯಾದ್ರಭಾವದಿಂ ವಿಶದ ಪಡಿಸಿ ಇನ್ನೊಂದು ಮಾರ್ಗದಿಂ ವಿವರಿಸುತಲಿಧಾನೆ. ಅದೆಂತೆಂದೊಡೆ,

೧೪ ಇಂತು ಪಂಚಾಕ್ಷರೀ ಮಂತ್ರ ವಿಚಾರ ಪದ್ಧತಿಯು ಮುಗಿದುದು.

---

ಅದರಬಗೆಯೇನೆನಲುಕಾರಣ, ಮಾದಪರಬೊಮ್ಮವದುತತ್ಸಂ
ಗದಬಳಿಕೆಯುಂಟಾದುದೆ, ಮಧ್ಯದಲಿಮೆರೆವ ||೧೦||
ಅಭ್ರಮುಖ ಭೂತಂಗಳುಪಸಂಹಾರಮಾಬಳಿಕಾಗಿರುವೆ ನೀಂ,
ಶುಭ್ರನವ್ಯಯನಪ್ರಮೇಯಂಶುದ್ಧಸತ್ವಂ ||೧೧||

೨ ಮೂಲ || ವಚನ|| ಇಂತೆಂದು ಮಂತ್ರಯೋಗಪದ್ಧತಿಯಂ ಚಿತ್ತಗೊಳುವಂತೆ ರಚಿಸಿ ಇನ್ನೊಂದು ಪ್ರಕಾರಮಂ ಪೇಳುತಿರ್ದಪನದೆಂತೆನೆ.

೧೪ ಇಂತು ಪಂಚಾಕ್ಷರೀ ಮಂತ್ರವಿಚಾರ ಪದ್ಧತಿಯು ಮುಗಿದುದು.

## ೧೫ ವೈರಾಗ್ಯ ಪದ್ಧತಿ ಪ್ರಾರಂಭವು.

೧ ಸಾಂಗತ್ಯ॥ ಟೀ ॥ ಭೂತ ಭವಿಷ್ಯದ್ವರ್ತಮಾನಗಳೆಂಬ ಕಾಲತ್ರಯದಲ್ಲಿ ನಡೆಯುವ ವೃತ್ತಾಂತವನ್ನು ತಿಳಿಯತಕ್ಕವರು ಯಾರುಂಟೊ ? ಅಂಥವರೇ ಜ್ಞಾನ ಶೀಲರು ಎಂಬದಾಗಿ ಪೇಳುವರೆಂದು ಮನಃಪ್ರಭುವು ಸಾಮಾನ್ಯಯೋಗಗಳಿಂದ ಸಿದ್ಧಿಸತಕ್ಕವುಗಳಾಗಿಯು, ಅಲ್ಪಸುಖವನ್ನುಂಟು ಮಾಡತಕ್ಕವುಗಳಾಗಿಯು, ಆದುದರಿಂದಲೆ ಅನಿತ್ಯಗಳಾಗಿಯು, ಇರುವ ಸಿದ್ಧಿಗಳಲ್ಲಿ ಇಚ್ಛೆಯುಳ್ಳವನಾಗಿ ಗುರುವನ್ನು ಕುರಿತು ಪ್ರಶ್ನೆಮಾಡಲು, ಎಲೆ ಮನೋರಾಜನೆ ಕೇಳು, ಹಿಂದೆ ನಡೆದು ಈಗ ನಡೆಯುವ, ಮತ್ತು ಮುಂದೆ ನಡೆಯ ಹೋಗುವ ವಿಷಯಗಳನ್ನು ಹೇಳಿದ ಮಾತ್ರದಿಂದಲೆ ಜ್ಞಾನಿಗಳಾಗುವದಿಲ್ಲವು, ಯಾಕಂದರೆ, ಹಾಲೆ ಹಕ್ಕಿಯೆಂಬ ಒಂದಾನೊಂದು ಪಕ್ಷಿಯು ಮುಂದೆ ನಡೆಯುವ ವೃತ್ತಾಂತಗಳನ್ನು ಹೇಳುವದರಲ್ಲಿ ಶಕ್ತಿವುಂಟು. ಲೋಕದಲ್ಲಿಯು ಕೆಲಬರು ಇದರ ನುಡಿಗಳನ್ನು ಅಭ್ಯಾಸದ ಬಲದಿಂದಲು. ಸಂಸ್ಕಾರ ವಿಶೇಷದಿಂದಲು ಸೂಕ್ಷ್ಮದೃಷ್ಟಿಯಿಂದಲು ತಿಳಿದು ಈ ಹಕ್ಕಿಯು ಮುಂದೆ ಬರುವ ಇಂಥ ಸಂದರ್ಭವನ್ನು ಸೂಚಿಸುತಲಿರುವದೆಂಬದಾಗಿ ಹೇಳುವದು ಪ್ರಸಿದ್ಧವಾಗಿಧೆ. ಈ ಪಕ್ಷಿಯು ಇಷ್ಟುಮಾತ್ರ ಹೇಳಿದ ಮಾತ್ರದಿಂದಲೆ ಜ್ಞಾನಿಯಾಗುವದೆ ? ಇಲ್ಲವು. ಆದುದರಿಂದಲೆ ಈ ಸಿದ್ಧಿಯಿಂದ ಪ್ರಯೋಜನವಿಲ್ಲವೆಂದು ಸಂದೇಹವಿಲ್ಲದೆ ತಿಳಿಯುವನಾಗು. ॥೧॥ ಇದರಮೇಲೆ ಎಲೈ ಗುರುವೆ ! ಲಾಲಿಸಬೇಕು ಹಾಲೆ ಹಕ್ಕಿಗೆ ಮುಂದೆ ಬರುವ ವೃತ್ತಾಂತಗಳ ಪರಿಜ್ಞಾನಮಾತ್ರ ವಿರುವದಲ್ಲದೆ ಇದುವರೆಗೆ ನಡೆದಿರುವ ಮತ್ತು ಈಗ ನ

---

## ೧೫ ವೈರಾಗ್ಯ ಪದ್ಧತಿ ಪ್ರಾರಂಭವು.

೧ ಮೂ॥ ಸಾಂಗತ್ಯ॥ ಕಾಲತ್ರಯಜ್ಞಾನಮುಳ್ಳವರೆಜ್ಞಾನಶೀಲರೆಂ
ಬರು ಕೆಲರೇನು ? ಹಾಲೆಹಕ್ಕಿಗೆಮುಂದೆಬರುವ ವೃತ್ತಾಂತವ,
ಹೇಳುವಲ್ಲರಿವುಂಟುನೃಪನೆ ॥೧॥

ಡೆಯುತ್ತಿರುವ ಸಮಾಚಾರಗಳ ಪರಿಜ್ಞಾನವಿಲ್ಲವು. ಆದುದರಿಂದ ತಾವು ಹೇಳಿದ ಉದಾಹರಣೆಯು ದೃಷ್ಟಾಂತಕ್ಕು ದಾಷ್ಟಾರ್ಂತಿಕಕ್ಕು ಸಮಂಜಸವಾಗುವಂತೆ ತೋರುವದಿಲ್ಲವೆಂದು ಮನಃಪ್ರಭುವು ಶ್ರೀಗುರುವನ್ನು ಕುರಿತು ಭಕ್ತಿಭಾವನೆಯಿಂದ ಬೆಸಗೊಳಲು, ಎಲೆ ಮನೋರಾಜನೇ ಕೇಳು, ಲೋಕದಲ್ಲಿ ಭಾರದ್ವಾಜವೆಂಬ ಒಂದಾನೊಂದು ಹಕ್ಕಿಗೆ ಬ್ರಹ್ಮಾಂಡದ ಹೊರಭಾಗದಲ್ಲಿಯು, ಒಳಭಾಗದಲ್ಲಿಯು, ನಡದು ನಡೆಯುತ ನಡೆಯುಹೋಗುವ ವೃತ್ತಾಂಗಳ ಪರಿಜ್ಞಾನವು ಸಂಪೂರ್ಣವಾಗಿ ವುಂಟು, ಅಷ್ಟು ಮಾತ್ರದಿಂದ ಅದು ಜ್ಞಾನಿಯಾಗಲಾರದು. ಇನ್ನು ನಾಯಿಗಳಿಗೂ ಬೂದಿಯ ರಾಶಿಯಲ್ಲಿ ಮಲಗಿದ ಸಮಯದಲ್ಲಿ. ‖೧‖ ಇದುವರಿಗೆ ಹಿಂದೆ ನಡೆದು ಹೋಗಿರುವ ಏಳು ಜನ್ಮಗಳ ವೃತ್ತಾಂತಗಳುನ್ನು ಇನ್ನು ಮುಂದೆ ಬರಹೋಗುವ ಏಳುಜನ್ಮಗಳ ವರೆಗೆ ನಡೆಯುವ ಸಮಸ್ತ ಸಮಾಚಾರಗಳನ್ನು ಲೇಶವಾದರು ಸಂಶಯವಿಲ್ಲದೆ ಆಗಿನ ಸ್ವಪ್ನಾವಸ್ಥೆಯು ಹೋಗಿ ಪುನಃ ಜಾಗ್ರದವಸ್ಥೆ ಬರುವವರೆಗೂ ಸ್ಪಷ್ಟವಾಗಿ ತಿಳಿದುಬರುತಲಿರುವದು. ತಾವನ್ಮಾತ್ರದಿಂದಲೇ ಅದು ಜ್ಞಾನಿಯಾಗಬಲ್ಲದೆ ? ಇಲ್ಲವು. ಆದ್ದರಿಂದ ಈ ಎರಡು ದೃಷ್ಟಾಂತಗಳ ತಿಳುವಳಿಕೆಯಿಂದ ನಿನ್ನ ಸಂಶಯವು ನಿವೃತ್ತಿಯಾಗಿರಬಹುದು. ‖೨‖ ಎಂದ ಗುರುವಿನ ವಚನಾಮೃತದಿಂದ ಉಂಟಾಗಿದ್ದ ಸಂದೇಹವೆಂಬ ರೋಗವು ನಿವೃತ್ತಿಯಾದ ಬಳಿಕ ಮನೋನೃಪಾಲನು ಎಲೈ ಆಚಾರ್ಯನೇ ! ಆಹಾರವನ್ನು ಅಂದರೆ ಭೋಜ

---

ಧರೆಯೊಳಾಭ್ಭರದ್ವಾಜಪಕ್ಷಿಗೆ ಲೋಕದ ಪೊರಗೊಳಗಣವೃತ್ತಾಂತವನ್ನು ಅರಿವಲ್ಲಿಬಲವುಂಟು, ಬೂದಿಯರಾಶಿಯೊಳೊದಗಿದಜಾಯಿಲಗಳಿಗೆ ‖೧‖

ಕನಸಿನಬಿಗುವರುವನ್ನ ಬರಂತನ್ನಜನು ಮಗಳನುಹಿಂದೆಹೋದ ಮನುಜನು ಮಂಗಳನು,ಮುಂದೆಬರುವ ಸಪ್ತಗಳನು ತಿಳಿಯಲುಂಟುಕಕಿ ‖೨‖

ಆಹಾರವಿಜಯಮುಳ್ಳವರೆ ಧನ್ಯರೆಂದೂಹಿಸುವರು ಕೆಲರೇನು ?

ನವನ್ನು ಬಿಟ್ಟಿರುವರು ಯಾರುಂಟೋ ಅಂಥಾವರೇ ಧನ್ಯರೆಂದು ಕೆಲ ಬರು ಹೇಳುವರಲ್ಲ ? ಅದೇನು ಎಂಬದಾಗಿ ಕೇಳಿಕೊಳ್ಳಲು, ಎಲೈ ಮನೋರಾಜನೇ ಕೇಳು, ಚಕೋರಪಕ್ಷಿಗಳು ಬೆಳದಿಂಗಳ ತುಂತು ರನ್ನು ಕುಡಿದು ಜೀವಿಸುವದಿಲ್ಲವೆ ? ಇಷ್ಟು ಮಾತ್ರದಿಂದಲೆ ಇವುಗ ಳು ಜ್ಞಾನಿಗಳಾಗುವದುಂಟೆ ? ಇಲ್ಲವು. ‖ ೪ ‖ ಇದಲ್ಲದೆ ಸರ್ಪಗಳು ಮುಂತಾದ ಕೆಲವು ಕ್ರಿಮಿಗಳು ಕೇವಲ ವಾಯುವನ್ನೇ ಆಹಾರವಮಾ ಡಿಕೊಂಡು ಪ್ರಾಣಯಾತ್ರೆಯನ್ನು ಮಾಡಿಕೊಳ್ಳುತಲಿರುವವು. ಅಲ್ಲ ದೆ ಚಾತಕ ಪಕ್ಷಿಗಳು ವರ್ಷಾಕಾಲದಲ್ಲಿ ಮೇಘದಿಂದ ಬಿಡಲ್ಪಡುವ ಉದಕ ಬಿಂದುಗಳನ್ನು ಮಾತ್ರ ಆಹಾರವಮಾಡಿ ಜೀವಿಸುವದಿಲ್ಲ ವೆ ? ಇವುಗಳುನ್ನು ಜ್ಞಾನಿಗಳೆನ್ನಿಸಿಕೊಳ್ಳಬಲ್ಲವೆ ? ಆಗಲಾರದು. ಆ ದುದರಿಂದಲೆ ಈ ಸಿದ್ಧಿಗಳಿಂದೇನೂ ಪ್ರಯೋಜನವಿಲ್ಲವೆಂದು ತಿ ಳಿಯತಕ್ಕದ್ದು. ‖ ೫ ‖ ಎಂಬದಾಗಿ ವಿಶದಪಡಿಸಿದ್ದರಿಂದ ಎರಡನೆ ಯ ಸಂಶಯವು ನಿವೃತ್ತಿಯಾಗಿ ತದನಂತರದಲ್ಲಿ ಎಲೈ ಸ್ವಾಮಿ ! ಪ್ರಪಂಚದಲ್ಲಿ ಕಣ್ಣು, ಕಿವಿ, ಮೂಗು, ನಾಲಿಗೆ, ಕಿವಿಗಳೆಂಬ ಜ್ಞಾನೇಂ ದ್ರಿಯಗಳು ಪಾಣಿ, ಪಾದ, ವಾಕ್ಕು, ಪಾಯು, ಗುಹ್ಯವೆಂಬ ಕರ್ಮೇಂ ದ್ರಿಗಳು. ಇವುಗಳನ್ನು ಯಾರಾದರೂ ಜಯಿಸಿರುವರೋ ? ಅಂಥವ ರೆ ಭೂಮಿಯಲ್ಲಿ ಮಹೇಂದ್ರರೆನ್ನಲ್ಪಡುವರು. ಅಂದರೆ ಇವರೆ ಸರ್ವೈ ಶ್ವರ್ಯ ಶಾಲಿಗಳು, ಇಲ್ಲವೆ ಸರ್ವಜ್ಞರು ಎಂಬದಾಗಿ ಲೋಕದೊಳು

---

ನೀಹಾರಬಿಂದುಮಾತ್ರದಿ ಜೀವಿತವನವಗಾಹಿಸವೆ ? ಚಕೋ ರಗಳು ‖೪‖

ವಾತಗ್ರಹಣಮಾತ್ರದಿಂಪ್ರಾಣಧೃತಿಯ ಹಿಮಾತ್ರತಮಾಚರಿಸವೆ ಜೀ, ಮೂತನಿರ್ಮುಕ್ತ ಸಲಿಲಕಣಮಾತ್ರದಿ ಚಾತಕವ್ರೊಡಲ ರಕ್ಷಿಸದೆ ‖೫‖

ಇಂದ್ರಿಯವಿಜಯವಿಭೂತಿಯುಳ್ಳವರೆ ಮಹೇಂದ್ರರೆಂಬರು ಕೆಲ ರೇನು ? ತಂದ್ರತೆ ಇಲ್ಲದೆ ಕೇಳವರವಿರುಂದ್ರತೆಯನು ಸಾಹ ಸದಲಿ ‖೬‖

ವ್ಯವಹರಿಸುತ್ತಿರುವರಲ್ಲ? ಇದರ ಸಂದರ್ಭವೆಂತಿಹುದು ಎಂಬದಾಗಿ ಮನಃಪ್ರಭುವು ಇದೊಂದು ಬಗೆಯಿಂದ ವಿನಯಾನ್ವಿತನಾಗಿ ಬೇಡಿಕೊಳಲು ಕರುಣಾಂತರಂಗನಾದ ದೇಶಿಕನು ಎಲೆ, ಚೇತೋನರವರನೇ ಅಂತವರ ಸಂದರ್ಭವನ್ನು ನಿನ್ನಯ ತಿಳುವಳಿಕೆಗಾಗಿ ವಿಶದವಾಗಿ ಉದರಿಸುವೆನು. ಆಲಸ್ಯವಿಲ್ಲದೆ ಚನ್ನಾಗಿ ಗಮನವನ್ನು ಇತ್ತು ಕೇಳುವಂಥವನಾಗು. ನಾನಾಬಗೆಯಾಗಿ ಹೇಳುವಂಥವರ ಸಾಹಸದಲ್ಲಿ ಪರಸ್ಪರ ವಿರೋಧಗಳನ್ನು ನಿರೂಪಿಸುವೆನು. ||೬|| ಕಾಡಿನೊಳು ವಾಸಮಾಡುತ್ತಲಿರುವ ಹಂದಿಗಳಿಗುಂಟು ಯಾವವಿಧವಾದ ಸಿದ್ಧಿಯು ಇಲ್ಲದೆ ಅತ್ಯಂತ ಸೂಕ್ಷ್ಮವಾಗಿರುವಶಬ್ದಗಳನ್ನು ಕೇಳತಕ್ಕ ಶಕ್ತಿಯನ್ನು ಹೊಂದಿ ಇಲ್ಲವೆ? ಮತ್ತು ಮನೆಗಳಲ್ಲಿ ವಾಸಮಾಡುತಲಿರುವ ಕೋಳಿಗಳು ಆಯಾಯಕಾಲದಲ್ಲಿ ಬೀಸುವಗಾಳಿಯ ಸ್ಪರ್ಶಮಾತ್ರದಿಂದ ಈಗ ಇಷ್ಟುವೇಳೆಯಾಯಿತೆಂಬದಾಗಿ ತಿಳದು ಜನಗಳಿಗೆ ಸೂಚನೆಯಾಗುವಂತೆ ಕೂಗುವದಿಲ್ಲವೆ ? ಹಂದಿಗಳು ಸೂಕ್ಷ್ಮಧ್ವನಿಯನ್ನು ಕೇಳಿದ ಮಾತ್ರದಿಂದಲು, ಕೋಳಿಗಳು ವಾಯುಸ್ಪರ್ಶ ಮಾತ್ರದಿಂದ ಸಮಯವನ್ನರಿತದ್ದರಿಂದಲೂ ಜ್ಞಾನಿಗಳಾಗಬಲ್ಲವೆ ? ಆಗಲಾರವು. ||೭|| ಕಣ್ಣಿನಿಂದಲೇ ಪ್ರಪಂಚದೊಳಿರುವ ನಿಖಿಲ ಪದಾರ್ಥಗಳನ್ನು ನೋಡಬಲ್ಲವರೆ ಅಸದೃಶವಾಗಿಹ ಪುಣ್ಯಾತ್ಮರೆಂಬದಾಗಿ ಹೇಳುವರಲ್ಲ ಅದೇನು ? ಎಂದರೆ, ಕಣ್ಣನ್ನು ಮುಚ್ಚಿಕೊಂಡಿದ್ದರೂ ಜತುಕೆಗಳು ಅಂದರೆ, ಬಂಡುಜಾತಿಹುಳಗಳು ಪ್ರಪಂಚದೊಳಿರುವ ನಾನಾಬಗೆಯಾದ ಕ್ಷುದ್ರದ್ರವ್ಯಗಳನ್ನು ಕೂಡ ನೋಡುವ ಸಾಮರ್ಥ್ಯವನ್ನು ಹೊಂದಿರುವವು. ಇ

---

ಅತಿಸೂಕ್ಷ್ಮವಾದ ಧ್ವನಿಯನಾಲಿಸದೆ ಘೋಣಿತತಿಘೋರಾರಣ್ಯ
ಮಧ್ಯದಲ್ಲಿ,ಪ್ರತಿಕಾಲದಲಿತಜ್ಜಾನಿಲಸ್ಪೃಷ್ಟಮಾತ್ರದಿಂರುತ
ಬಿರವೆ ಕುಕ್ಕುಟಗಳೂ ||೭||
ಕಣ್ಣಿಂದನಿಖಿಲವಕಂಡವರೆ ಜಾತಪುಣ್ಯರೆಂಬರು ಕೆಲರೇನೂ ||
ಕಣ್ಣಮುಚ್ಚಿಯೆಜತುಕೆಗಳು ವಿಶ್ವದವಸ್ತು ಪಣ್ಯವನಾಲೋ
ಕಿಸುವವೂ ||೮||

ಷ್ಟಮಾತ್ರದಿಂದಲೇ ಆಗತಕ್ಕಪ್ರಯೋಜನವೇನು. ॥ ಮತ್ತು ಎಲ್ಲೈ ಮನಃಪ್ರಭುವೆಕೇಳು, ಕಾಗಿಗಳು ತಮಗಿರುವ ಒಂದೇಕಣ್ಣಿನಿಂದಲೇ ಪ್ರಪಂಚದ ವಸ್ತುಜಾಲಗಳನ್ನೆಲ್ಲಾ ನೋಡುತಲಿರುವವು. ಅಲ್ಲದೆ ಬೆಕ್ಕುಗಳು ಹಗಲಿನಲ್ಲಿಯು ರಾತ್ರಿಯಲ್ಲಿಯೂ ಸಹ ಲೋಕದ ಪದಾರ್ಥ ಸಮುದಾಯವನ್ನೆಲ್ಲ ಕಾಲಭೇದದಿಂದ ಸ್ವಲ್ಪವಾದರೂ ವ್ಯತ್ಯಾಸವಿಲ್ಲದಂತೆ ಅಂದರೆ ಬೆಳಕಿನಲ್ಲಿಯೂ ಕತ್ತಲೆಯಲ್ಲಿಯೂ ಒಂದೇರೀತಿಯಿಂದ ನೋಡುವದಿಲ್ಲವೆ ? ॥೯॥ ಇದೂ ಅಲ್ಲದೆ ಸರಟಗಳಿಗೆ ಅಂದರೆ ಹೆಂಟೆಗೊದ್ದಗಳೆಂಬ ತಿರ್ಯಗ್ಜಂತುಗಳಿಗೆ ಪಾತಾಳಲೋಕದಲ್ಲಿರುವ ನಿಖಿಲ ನಾಗೇಂದ್ರ ಸ್ಥಾನಗಳೆಲ್ಲವೂ ಕಾಣಬರುವದಿಲ್ಲವೆ ? ಈ ಹೆಂಟೆಗೊದ್ದಕ್ಕೆ ನಾಗಲೋಕಗಳು ಕಂಡು ಬಂದದರಿಂದ ಆಗತಕ್ಕ ಫಲವೇನು ? ಮತ್ತು ಪಾಡ್ಯಮಿಯ ರಾತ್ರಿ ಹುಟ್ಟಿದ ಅತಿಸೂಕ್ಷ್ಮವಾದ ಚಂದ್ರನ ರೇಖೆಯು ಗೋವುಗಳಿಗೆ ಕಂಡು ಬರುವದು. ಹಾಗೆ ಕಂಡು ಬರುವದರಿಂದ ಗೋವಿಗೆಫಲವೇನು? ॥ ಮತ್ತು ಹಾಲಿಗೆನೀರನ್ನು ಬೆರಸಿಟ್ಟರೆ ನೀರಿನ ಭಾಗವನ್ನು ಮಾತ್ರವೆ ಬೇರೆಮಾಡಿಟ್ಟುಕ್ಷೀರಾಂಶವನ್ನು ಮಾತ್ರ ಹಂಸಗಳು ಗ್ರಹಿಸುವವು ಮೂಸಿನೋಡಿ ಆಮರದ ಮೇಲೆ ಇರುವಹಣ್ಣನ್ನು ಕಂಡುಹಿಡಿದು ಇರುವೆಯು ಆ ಮರದ ಕೊನೆ ಕೊಂಬಿನಲ್ಲಿರುವ ಫಲಗಳನ್ನು ಹೊಂದಿ ಅವುಗಳ ರಸವನ್ನು ಆಸ್ವಾದನೆ ಮಾಡುವದಿಲ್ಲವೇ? ಹಾಲು ನೀರನ್ನು ಬೇರೆಮಾಡಿದ ಮಾತ್ರದಿಂದಲು,

---

ವಂದುಕಣ್ಣಿಂದೆರಡರನೋಟವನು ಕಾಕಬೃಂದವು ಪೊಂದಿನಡಿ
ಸದೇ । ವಂದೆತೆರದಿ ಹಗಲಿರುಳಿನೊಳಖಿಳಾರ್ಥವೊದಿನೋಡ
ದೆ ಬೀಡಾಲಗಳೂ ॥೯॥

ಸರಟಂಗಳಿಗೆ ಕಾಣಿಸದೆ ಪತಾಲಸ್ಥಾಹಿ ಪತಿಗಳ ಭುವನಗ
ಳೂ ॥ ಸುರಭಿಗೆಕಾಣಿಸದೆ ಪ್ರತಿಪದ್ವಿಮಕರ ಮಂಡಲಸ್ಯೈಕ
ಕಲೆಯೂ ॥೧೦॥

ಹಾಲಿಗನೀರಬೆರೆಯಲದನೂಕಿ ಮರಾಳಿಮಾಪಯವನೇವಿಸದೇ॥
ಮೂಲವನಾಘ್ರಾಣಿಸಿ ಪಿಪಿಲಿಕೆಫಲಜಾಲವಪೊಂದದೆಮೇಲೆ ॥೧೧॥

ಇರುವೆಯು ಮೂಲವನ್ನು ಮೂಸಿನೋಡಿ ಅಗ್ರದಫಲವನ್ನು ಕಂಡು ಹಿಡಿಯುವದರಿಂದಲೂ ಇವುಗಳು ಮಹಾಜ್ಞಾನಿಗಳೆನ್ನಿಸಿಕೊಳ್ಳಬಲ್ಲವೇ? ॥೧೧॥ ಹಾಗಾದರೆ ಎಲೈ ಗುರುವೆ? ಈ ಲೋಕದೊಳು ಶರೀರವು ಹೋಗದೆ ಇರುವಂತೆ ಸಿದ್ಧಿಯನ್ನು ಮಾಡಿ, ದೇಹವನ್ನು ನಿಲ್ಲಿಸಿಕೊಂಡಿರುವ ಸಿದ್ಧಪುರುಷರೆ ಕೃತಕೃತ್ಯರೆಂಬದಾಗಿ ಅನೇಕರು ಹೇಳುತಲಿರುವರು. ಇದರ ಸಂದರ್ಭವು ಹ್ಯಾಗೆ ಎನಲು, ಎಲೈ ಮನೋವನಿಪಾಲನೇ ಕೇಳು, ನೀನು ಹೇಳಿದ್ದು ಸತ್ಯವೆ ? ಆದಾಗ್ಯು ಕಾಯಸಿದ್ಧರ ಸಮೂಹದಲ್ಲಿ ನಾಗಾರ್ಜುನನೆಂಬ ಕಾಯಸಿದ್ಧನು ಈ ಲೋಕದಲ್ಲಿ ಅನೇಕವಿಧಗಳಾಗಿರುವ ಸಾಹಸ ಕೆಲಸಗಳನ್ನು ಮಾಡಿದನು. ॥೧೨॥ ಈ ನಾಗಾರ್ಜುನನೆಂಬ ಕಾಯಸಿದ್ಧನು ಲೋಕದಲ್ಲಿ ಅನೇಕ ವಿಧವಾದ ಸಾಹಸಗಳನ್ನು ಮಾಡಿ ತರುವಾಯ ತನ್ನ ಅಹಂಕಾರದದೆಶೆಯಿಂದ ಶ್ರೀ ಮಹಾವಿಷ್ಣುವಿನ ಚಕ್ರವೆಂಬ ಆಯುಧಕ್ಕೆ ತನ್ನ ತಲೆಯನ್ನು ಇತ್ತು ಅಡಗಿದನು. ಮತ್ತು ಗೋರಕ್ಷಕನೆಂಬ ಕಾಯಸಿದ್ಧನು ಪ್ರಮಥರಾಗಿಯು ಸಾಮಾನ್ಯ ಯೋಗಿಗಳಾಗಿಯು ಇರುವವರನ್ನು ತನ್ನ ಯೋಗಸಿದ್ಧಿಯ ಅಹಂಕಾರದಿಂದ ಧಿಕ್ಕರಿಸಿ ದೂಷಿಸುತಲಿರಲು, ಕಡೆಯಲ್ಲಿ ನಿನ್ನ ಅಹಂಕಾರವು ಹೆಂಗಸಿನ ಅಧೀನವಾಗಿ ಹೋಗಲಿ ಎಂಬದಾಗಿ ಅಲ್ಲಮ ಪ್ರಭುವು ಶಾಪವನ್ನು ಕೊಡಲು ಅದರಂತೆಯೇ ಗೋರಕ್ಷಕನು ಸ್ತ್ರೀಗೆ ಅಧೀನನಾದನು. ॥ ೧೩ ॥ ಬಂದಾರುವೆಂಬ ಮೂಲಿಕೆಯನ್ನು ತಂದು ಅದರ ರಸವಾತೆಗದು ಆ ರಸ

---

ಇಹದಲ್ಲಿಕಾಯಸಿದ್ಧಿಯ ನುಳ್ಳವರೆ ಧನ್ಯರಹರೆಂಬ ವೃತ್ತಾಂತವೇನೊ ॥ ಅಹುದಯ್ಯಕೇಳುಸಿದ್ಧರಲಿ ನಾಗಾರ್ಜುನ ಬಹು ಸಾಹಸಗಳ ಮಾಡಿದನೂ ॥೧೨॥

ಕಡೆಯಲ್ಲಿ ವಿಷ್ಣುಚಕ್ರಕ್ಕೆತಲೆ ಇತ್ತನು ಬಡಜೋಗಿಗಳನು ಧಿಕ್ಕರಿಸೀ ॥ ಕಡೆಯಲ್ಲಿ ಪ್ರಭುವಿನಿಂಗೋರಕ್ಷಕನಗರ್ವಮಡದಿಯಪಾಲಾಯಿತ್ತೈಸೇ ॥೧೩॥

ಬದ್ಧರಸದದೆಶೆಯಿಂದ ಶರೀರದ ಸಿದ್ಧಿಯ ಪಡೆದುಜೀವಿಸು

ದೊಡನೆ ಪಾದರಸವನ್ನು ಶೇರಿಸಿದರೆ ಆಗಲಾ ಪಾದರಸವವು ಶುದ್ಧಿಯಾಗುವದು. ಹೀಗೆ ಶುದ್ಧಿಯಾದ ರಸವನ್ನು ಮತ್ತೊಂದುಮೂಲಿಕೆಯು ಸಂಗಡ ಸೇರಿಸಿ ಜೋತಿಷ್ಮತಿಯೆಂಬ ಘೃತಿಯನ್ನುಮಾಡಿ ಇದನ್ನು ಸೇವಿಸುವದು ಒಂದುಪಕ್ಷ. ಇದಲ್ಲದೆ ಮೇಲೆ ಹೇಳಿದಂತೆ ಶುದ್ಧಿಯಾದ ರಸವನ್ನೇ ಭಸ್ಮವನ್ನಾಗಲಿ ಇಲ್ಲವೆ ರಸಾಯನವನ್ನಾಗಿ ಮಾಡುವದು ಒಂದು ಪಕ್ಷ ಇವೆರಡರಲ್ಲಿ ಯಾವಬಗೆಯಾಗಿ ಮಾಡಿ ಸೇವನವನ್ನು ಮಾಡಿದಾಗ್ಯು ಸಿದ್ಧರಾಗುವರು. ಇವರಿಗೆ ರಸಸಿದ್ಧರೆಂಬದಾಗಿ ಹೆಸರು. ಈ ರೀತಿಯಾಗಿ ಸಿದ್ಧಿಯನ್ನು ಹೊಂದಿದ ಸಿದ್ಧರ ಸಮುದಾಯವೆಂಬ ಕಾಡಿಗೆ ಅದೃಷ್ಟ, ಮತ್ತು ಕಾಲವೆಂಬ ಅಗ್ನಿಯು ಜಾಜ್ವಲ್ಯವಾಗಿ ಸುಟ್ಟು ಬಿಡುವಂಥಾದ್ದಾಗುವದು. ಅಂದರೆ, ಒಂದುವೇಳೆ ಈ ಪ್ರಕಾರವಾಗಿ ಸಿದ್ಧರಾದಾಗ್ಯು ಅಂಥವರು ಇತರರಿಗಿಂತಲು ಕೆಲವುಕಾಲ ಹೆಚ್ಚಾಗಿ ಬದುಕಿರುವರು. ಅಂತು ಎಷ್ಟು ದಿನಗಳಾದಾಗ್ಯೂ ಅವರೂ ಮೃತ್ಯುವಿನ ಬಾಯಿಗೆ ತುತ್ತಾಗುವ ವಿಷಯದಲ್ಲಿ ಲೇಶವಾದರೂ ಸಂದೇಹವಿಲ್ಲವು. ಎಂಬವಾಗಿ ತಿಳಿಯತಕ್ಕದ್ದು. ||೧೪|| ದೇವತಾಶರೀರವನ್ನು ಹೊಂದಿರತಕ್ಕವರಾಗಿ ದೇವಾದಿ ಲೋಕಗಳಲ್ಲಿ ವಾಸಮಾಡತಕ್ಕವರು ಯಾರುಂಟೊ ? ಅವರೇ ಕೃತಾರ್ಥರು ಯೆಂಬದಾಗಿ ಅನೇಕ ಪುರಾಣಗಳಲ್ಲಿಯು, ಇತಿಹಾಸ ಮುಂತಾದವುಗಳಲ್ಲಿಯು ಹೇಳಲ್ಪಡುತಲಿರುವದಲ್ಲ ? ಇದರ ವೃತ್ತಾಂತವನ್ನು ನನಗೆ ಚನ್ನಾಗಿ ತಿಳಿಸಬೇಕೆಂಬದಾಗಿ ಬೇಡಿಕೊಳ್ಳಲು, ಎಲೊ ಮನೊನ್ಮಾಲನೆ ಕೇಳು ? ಸಮಸ್ತವಾದ ಪ್ರಪಂಚವನ್ನು ಸೃಷ್ಟಿಮಾಡತಕ್ಕವನು ಎಂದೆನಿಸಿ ಇಂದ್ರಾದಿಲೋಕಗಳಿಗಿಂತಲು ಅತ್ಯುನ್ನತವಾದ ಲೋಕವನ್ನುಹೊಂದಿ ದಿವ್ಯದೇಹವನ್ನೂ ಪಡೆದಿರುವ ಐದುಮುಖಗಳುಂಟಾಗಿದ್ದ ಬ್ರಹ್ಮನತಲೆಗಳಲ್ಲಿ ಒಂದು ಪರಮೇಶ್ವರನಿಂದ ಕತ್ತರಿಸಲ್ಪ

---

ವಾ || ಸಿದ್ಧರೆಂತೆಂಬಡವಿಯುಕಾಲವೆಂಬಗ್ನಿವೃದ್ಧವಾಗಿಯೆಡ ಹಿಸಿದುದೂ ||೧೪||

ದಿವ್ಯದೇಹವನುಳ್ಳವರತಿಧನ್ಯರಿಂತೆಂಬ ಕಾವ್ಯದಕಥೆಗಳಿವೇನೂ||

ಟ್ಟು ಹೋಗಲಿಲ್ಲವೆ ? ಇದಲ್ಲದೆ ಸೂರ್ಯಾದಿ ನವಗ್ರಹಗಳಲ್ಲಿ ಒಬ್ಬನಾಗಿ ಶುಕ್ರನೆಂಬದಾಗಿ ಹೆಸರನ್ನು ಪಡೆದು ರಾಕ್ಷಸರಿಗೆಲ್ಲ ಗುರುವಾಗಿ ವಿದ್ಯಾವಂತರೊಳಗೆ ಅಗ್ರಗಣ್ಯನೆಂಬದಾಗಿ ಪ್ರಖ್ಯಾತಿಯನ್ನು ಪಡೆದಿರುವ ಭಾರ್ಗವನಿಗೆ ಬಂದು ಕಣ್ಣು ನಾಶವಾಗಿ ಹೋಗಲಿಲ್ಲವೆ ? ಇನ್ನು ಬೇರೆ ಉದಾಹರಣವನ್ನು ತೋರಿಸಬೇಕೆ ‖ ೧೫ ‖ ಆದರು ವಿವರಿಸುವೆ ನಾಲೈಸು ಜಗತ್ಪ್ರಕಾಶಕನಾದ ಚಂದ್ರನಿಗು ಅನೇಕ ಸಂತತಿಗೆ ಮೂಲಪುರುಷನಾದ ಕಶ್ಯಪಮಹರ್ಷಿಗು, ಸಮಸ್ತ ಪ್ರಾಣಿವರ್ಗಕ್ಕು ಮರಣವನ್ನುಂಟು ಮಾಡುವ ಶಕ್ತಿಯುಳ್ಳ ಮೃತ್ಯುವಿಗು ಸಹಮಾವನೆಂದೆನಿಸಿಕೊಂಡು ಇದ್ದ ದಕ್ಷಪ್ರಜಾಪತಿಯು ಯಜ್ಞವನ್ನು ಮಾಡುವ ಸಮಯದಲ್ಲಿ ತನ್ನ ತಲೆಯನ್ನು ಕಳೆದುಕೊಳ್ಳಲಿಲ್ಲವೆ ? ಇದಲ್ಲದೆ ಅಪ್ತೋರ್ಯಾಮ, ವಾಜಪೇಯ, ಪೌಂಡರೀಕ ಮುಂತಾದ ಯಾಗಗಳನ್ನು ನಡೆಸುವದಕ್ಕೆ ಮೂಲಕಾರಣವಾಗಿರುವ ಯಜ್ಞೇಶ್ವರನ ನಾಲಿಗೆಯು ಏಳುಭಾಗವಾಗಿಸೀಳಿ ಹೋಗಲಿಲ್ಲವೆ ? ಇವರ ಕೃತಾರ್ಥತೆಯು ಇದರಿಂದಲೂ ಸ್ಪಷ್ಟವಾಗಲಿಲ್ಲವೆ ? ಇನ್ನು ವಿಶದ ಪಡಿಸುವೆನು ‖೧೬‖ ಎಲೈ ಬುದ್ಧಿಶಾಲಿಯೆ ಮಾಡಿದುಪಕಾರವನ್ನು ಸ್ಮರಿಸುವ ಸೂರ್ಯನಿಗು ಮತ್ತು ಇಂದ್ರನಿಗು ಸಹಕ್ರಮವಾಗಿ ಅಂದರೆ ಸೂರ್ಯನಿಗೆ ದಂತಗಳು ಸುತರಾಂ ಉದರಿ ಹೋಗಲಿಲ್ಲವೆ ? ಮತ್ತು ಅಹಲ್ಯೆಯ ಸಂಸರ್ಗವೆಂಬ ದೋಷದಿಂದ ಗೌತಮಮಹರ್ಷಿಯು ಶಪಿಸಲು ಅದರಿಂದ ತ್ರಿಲೋಕಾಧಿ ಪತಿಯಾದ ಅಮರೇಂದ್ರನಿಗೆ ಬೀಜಗಳು ಇಲ್ಲದಂತಾಗಲಿಲ್ಲವೆ ? ಜಗತ್ತನ್ನು ಉಂಟುಮಾಡತಕ್ಕವನು, ಸುರೇಶ್ವರನು, ಯ

---

ಭವ್ಯನಾದಜನತಲೆಗೆ ಕೇಡುಬಂದುದು ಕಾವ್ಯನಕಣ್ಣೊಂದಿ
ಳಿದುದೂ ‖೧೫‖
ಯಜ್ಞಪುರುಷನಪೋದುದು ತಲೆಸರ್ವರಯಜ್ಞವನಡಸುವ
ಚಿಯಾ ‖ ಪ್ರಾಜ್ಞನೆನಾಲಿಗೆಯೇಳುಸೀಳಾಯ್ತು ಕೃತಜ್ಞರಾ
ಗಿಹಸುರೇಂದ್ರರಿಗೆ ‖೧೬‖
ದಂತಬೀಜಂಗಳ ಸ್ಥಿತಿಯಿಲ್ಲ ಮಿಕ್ಕವರಂತರವನು ಹೇಳಲೆ

ಜ್ಞೇಶ್ವರನು ಇವರೆ ಮುಂತಾದ ಈ ಪ್ರಮುಖರ ಪಾಡೇಹೀಗಾಗುತಿ
ರುವಲ್ಲಿ ಇನ್ನುಳಿದ ಸಾಮಾನ್ಯರ ಪಾಡನ್ನು ವರ್ಣಿಸತಕ್ಕದ್ದೇನಿರು
ವದು. ಈಹಿಂದೆ ಹೇಳಿದ ಇಂದ್ರನೆ ಮೊದಲಾದ ದೇವತೆಗಳನ್ನು ಸ
ದೆಬಡಿದು ಅಮರಾಧಿ ಪತ್ಯಮುಂತಾದ ಅಸದೃಶವಾದ ಸೌಭಾಗ್ಯವ
ನ್ನು ಹೊಂದಿ ಇದ್ದಂಥಾ ರಾಕ್ಷಸರು ಕೂಡ ಸಮೂಲವಾಗಿ, ನಾಶವ
ನ್ನು ಹೊಂದುವಂಥವರಾದರು. ॥೧೭॥ ಮತ್ತಂನಿಖಿಲ ಲೋಕಾಧಾರ
ವಾದ ಈಭೂಮಿಯನ್ನು ಅನವರತವೂ ಹೊತ್ತು ಕೊಂಡಿರುವನೆಂಬ
ದಾಗಿ ಅನ್ಯಾದೃಶವಾದ ಯಶಸ್ಸನ್ನು ಪಡೆದಿರುವ ಆದಿಶೇಷನು ಅಂ
ತ್ಯಕಾಲದೊಳು ಅಂದರೆ ಮಹಾಪ್ರಳಯದಲ್ಲಿ ನಾಶವಂ ಪಡೆಯುವನು.
ಇವನ ಜತೆಯಲ್ಲಿಯೇ ದಿಗ್ಗಜಗಳು ಮುಂತಾದವುಗಳು ಲಯವನ್ನು
ಹೊಂದುವರು. ಇನ್ನು ಈ ಭೂಮಿಯನ್ನು ಅಖಂಡವಾಗಿ ಬಹುಕಾ
ಲದವರಿಗು ಅಪಗಿಮಿತವಾದ ಧರ್ಮದಿಂದ ಪರಿಪಾಲಿಸುತಲಿದ್ದವಾಂಧಾ
ತನೆ ಮುಂತಾದ ಅವನಿಪಾಲರೆಲ್ಲರು ನಾಮಮಾತ್ರಾವಶೇಷರಾದರು.
ಇನ್ನು ಸಾಮಾನ್ಯವಾದ ಪ್ರಾಭವವನ್ನು ಹೊಂದಿದ್ದು ಸತ್ಪಾತ್ರದಲ್ಲಿ
ಉತ್ತಮವಾದ ದಾನಗಳನ್ನು ಮಾಡಿದವರು ಯಾವ ಮಾರ್ಗವನ್ನು
ಹಿಡಿದು ಹೋದರೊ ಅವರದಾರಿಯನ್ನೆ ಕಂಡವರಿಲ್ಲವು ॥೧೮॥ ಕೇವ
ಲ ಕಪಾಲವು ಒಡೆದು ಅಲ್ಲಿಂದ ಚೈತನ್ಯವು ಹೊರಗೆ ಹೋಗುವಂತೆ
ಮಾಡಿಕೊಳ್ಳಬೇಕೆಂಬ ಕುತೂಹಲದಿಂದ ಯೋಗಶಾಸ್ತ್ರದಲ್ಲಿ ಹೇಳಿ
ರುವಂತೆ ಹಠಯೋಗವನ್ನು ಮಾಡುವದರಲ್ಲಿ ಆಸಕ್ತರಾದವರು ಕೂ
ಪದಂಡಾಯುಮಾನವಾದ ಅಂದರೆ ಅಖಂಡವಾದ ಕಾಲಚಕ್ರವೆಂಬವರ

---

ನೂ ॥ ಇಂತಿವರನು ಜೈಸಿದ ದೈತ್ಯರೊಡಲಿನ ಪಜ್ಜೆಗಳಾವ
ಪಾಡಾಯ್ತು ॥೧೭॥
ಹೊತ್ತವರಳಿದರು ಭೂಮಿಯ ಭೂಮಿಗೆ ತೆತ್ತವರಳಿದರಸುವ
ನೂ ॥ ಬಿತ್ತಿದವರು ಪಾತ್ರದಲಿ ಧರ್ಮಬೀಜವ ನೆತ್ತಪೋದರೊ
ಕಾಣೆನವರಾ ॥೧೮॥
ಕಾಲಚಕ್ರದತಿರುಗಂನಿಣಿಮುಲಿ ಸಿಕ್ಕಿಕಪಾಲಭೇದಕಯೋಗಪ

ಳಿನಲ್ಲಿ ಶಿಲುಕಿದವರಾದ ಕಾರಣವೇ ಇವರುಗಳ ಹೆಸರುಗಳು ಕೂಡ ಮಹಾಕಲ್ಪವೆಂಬ ಅತಿದೃಢವಾದ ಜ್ವಾಲಾಜಾಲದಮಧ್ಯಭಾಗದೊಳು ಬಿದ್ದು ಉರಿದು ಭಸ್ಮೀಭೂತವಾಯಿತೆಂದು ಸಂದೇಹವಿಲ್ಲದೆ ತಿಳಿ ‖೧೯‖ ಹಾಗಾದರೆ ಎಲೈ ಸ್ವಾಮಿಯೆ! ಸಂಧ್ಯಾವಂದನಾದಿ ನಾನಾವಿಧ ಸತ್ಕರ್ಮಾನುಷ್ಠಾನಪರರಾದವರು ಯಾರೊ ಅಂಥಾವರೆ ಕೇವಲ ಕೃತಾರ್ಥರು ಎಂಬದಾಗಿ ಲೋಕಕ್ಕೆ ಉಂಟಾಗಿರುವ ವಿಶೇಷವಾದ ಕುತೂಹಲವು ಯಂಥಾದ್ದು? ಇದನ್ನು ದಯಮಾಡಿ ಹೇಳಬೇಕು. ಅಲ್ಲದೆ ನಾನು ಪ್ರಶ್ನೆಮಾಡುವ ವಿಷಯುಗಳು ನಿಷ್ಪ್ರಮಾಣವಾದವುಗಳಲ್ಲವು. ಮತ್ತೇನಂದರೆ ಪುರಾಣೇತಿಹಾಸಾದಿಗಳಲ್ಲಿ ಪ್ರಮಾಣವಾದವುಗಳಾಗಿ ಉದಹರಿಸಲ್ಪಟ್ಟಿರುವದರಿಂದ ಇಂಥವುಗಳನ್ನು ತಾವು ಘನವಾದಚಿತ್ತದಲ್ಲಿ ತಂದು ಚನ್ನಾಗಿ ಅವಗಾಹನವಾಗುವಂತೆ ಸಯುಕ್ತಿಕವಾಗಿಯು, ಸಪ್ರಮಾಣವಾಗಿಯು ಅನುಭವಾನುಗುಣವಾಗಿಯು, ಸುಬೋಧೆಯಾಗುವಂತೆಯು, ನಿರೂಪಿಸಬೇಕೆಂದು ಬೇಡಿಕೊಳಲು ‖೨೦‖ ಈ ಮನುಷ್ಯನು ಯೋಗ್ಯವಾದ ಕಾಲದಲ್ಲಿ ಯೋಗ್ಯವಾದ ಮನುಷ್ಯನಿಗೆ ಉಚಿತವಾದ ಅನ್ನದಾನವನ್ನು ಮಾಡಿರುವನು. ಮತ್ತು ಈ ಮನುಷ್ಯನು ವಸ್ತ್ರಹೀನರಾದವರಿಗೆ ಯೋಗ್ಯವಾದ ವಸ್ತ್ರದಾನವನ್ನು ಮಾಡಿಧಾನೆ. ಇನ್ನು ಈ ಪುರುಷನು ಶ್ಲಾಘ್ಯವಾದ ಪಾತ್ರೆಯಲ್ಲಿ ಅಮೋಘವಾದ ಭೂದಾನವನ್ನು ಮಾಡಿರುವನು. ಈ ಮನುಜನು ಅನರ್ಘ್ಯವಾಗಿರುವ ಗಜದಾನಗಳನ್ನು ಸಾಲಂಕೃತ ಕನ್ಯಾದಾನಗಳನ್ನು ಮಾ

---

ರರಾ ‖ ಹೇಳುವರಿಲ್ಲದೆ ಹೆಸರುಗೆಟ್ಟರು ಗಾಢಕೀಲಜಾಲದ ಕಲ್ಪಾನಲದೀ ‖೧೯‖

ಸತ್ಕರ್ಮಗಳ ಮಾಡಿದವರೆ ಕೃತಾರ್ಥರೆಂಬೌತ್ಕಂಠ್ಯವೇನು ಕೇಳೈಯಾ ‖ ಸತ್ಕರಿಸಿದಕನ್ನವಾಕ್ಯವಪೌರಾಣಿಕೊತ್ಶ್ಲೋಕಚಕಥೆಯ ಮೂಲದಲೀ ‖೨೦‖

ಇವನನ್ನದಾನವನಿವವಸ್ತ್ರದಾನವಭೂಮಿದಾನವನಿತ್ತಾ ‖ ಇವಗಜದಾನವಕನ್ಯದಾನವನಿವಗ್ರಹದಾನವನಿತ್ತಾ ‖೨೧‖

ಡಿರುವನು. ಈ ಮಾನವನು ಗೃಹವಿಲ್ಲದೆ ತೊಂದರೆ ಪಡುವವರಿಗೆ ಯೋಗ್ಯವಾದ ಮಂದಿರಗಳನ್ನು ದಾನಮಾಡಿರುವನು. ‖೨೧‖ ಈ ನರನು ಜಲಾಶಯಗಳಿಲ್ಲದ ಸ್ಥಲಗಳಲ್ಲಿ ವಿಶಾಲವಾಗಿರುವ ತಟಾಕಗಳನ್ನು ಅಂದರೆ ಕೆರೆಗಳನ್ನು ಪ್ರತಿಷ್ಠೆಮಾಡಿಸಿರುವನು. ಮತ್ತೀಮನುಷ್ಯನು ದೇವತಾರಾಧನೆಗಳಿಗೆ ಅನುಕೂಲವಾದ ಕುಸುಮಾದಿಗಳನ್ನು ಉಂಟುಮಾಡುವದಕ್ಕಾಗಿ ಶ್ಲಾಘನೀಯಗಳಾದ ಅನೇಕ ತೋಟಗಳನ್ನು ಕಲ್ಪಿಸಿರುವನು. ಈ ಮರ್ತ್ಯನು ಬೇಸಿಗೆಕಾಲದಲ್ಲಿ ಕುಡಿಯಲಿಕ್ಕೆ ಜಲವಿಲ್ಲದೆ ಜನರು ತೊಂದರೆ ಪಡುವ ಸಮಯದಲ್ಲಿ ತೃಪ್ತಿಯಾಗುವಂತೆ ಉದಕದಾನವನ್ನು ಮಾಡುವದಕ್ಕೋಸ್ಕರ ಅಲ್ಲಲ್ಲಿ ಅನೇಕ ಅರವಟ್ಟಿಗೆಗಳನ್ನು ಇಡಿಸಿದಂಥವನು. ಈ ಮಾನುಷನು ಜನರು ಯಾವದಾದರೊಂದು ಭಯವನ್ನು ಹೊಂದಿ ನಮಗೆ ದಿಕ್ಕಿಲ್ಲವು. ಈ ಭಯದದೆಸೆಯಿಂದ ನೀನು ಕಾಪಾಡಬೇಕು. ಎಂಬದಾಗಿ ಮರೆಹೊಕ್ಕಂಥ ಜನರನ್ನು ಭಯವನ್ನು ನಿವೃತ್ತಿಮಾಡಿ ಕಾಪಾಡಿದಂಥವನು, ಇನ್ನು ಈತನು ಪಶುಗಳಿಗೆ ಆಹಾರವಿಲ್ಲದೆ ಸಂಕಟಪಡುವ ಕಾಲದಲ್ಲಿ ಬಹುವಿಧವಾಗಿ ಹುಲ್ಲುಗಳನ್ನು ಹಾಕಿಸಿ ಕಾಪಾಡಿದಂಥವನು ಎಂದಿದೆ, ಮೊದಲಾಗಿ ಆಯಾಯ ಸಮಯಗಳಲ್ಲಿ ಅನೇಕದಾನ ಧರ್ಮಗಳನ್ನು ಮಾಡಿ ಮತ್ತು ವಿಧವಿಧವಾದ ಉಪಕಾರಗಳನ್ನು ಮಾಡಿ ತಮ್ಮತಮ್ಮ ಪ್ರಖ್ಯಾತಿಯನ್ನು ಹೊಗಳಿಸಿಕೊಳ್ಳುವಂಥ ‖೨೨‖ ವರು ಇಹಲೋಕದಲ್ಲಿ ತಮ್ಮ ಆಯುಃ ಪರಿಮಿತಿಯು ತೀರಿದ ಬಳಿಕ ಈ ದೇಹತ್ಯಾಗವನ್ನು ಮಾಡಿ ಯಮಲೋಕವನ್ನು ಕುರಿತು ಹೋಗಲು ಆಗಲಾ ಯಮಧರ್ಮನು ಇವರುಗಳು ಮಾಡಿದ ಅಪರಿಮಿತವಾದ ಧರ್ಮಗಳನ್ನು ಕೇಳಿ ಅತ್ಯಂತವಾಗಿ ಶ್ಲಾಘನೆಯನ್ನು ಮಾಡಿ ವಿಶೇಷವಾಗಿ ಗೌರವಿಸಲು

ಕೆರೆಯಕಟ್ಟಿಸಿ ಪೂದೋಟಮಾಡಿಸಿ ಯರವಟಿಗೆಯ ರಚಿಸಿದನೂ ‖ ಮರೆಹೊಕ್ಕವರ ಸಲಹಿದನಿವ ಗೋಗ್ರಾಸಮಿತ್ತನಿವನೆಂದೆನಿಸುವರಾ ‖೨೨‖

ಯಮನಿಂದಸತ್ಕರಿಸಲ್ಪಟ್ಟ ಧರ್ಮಿಗಳ ಮರಲೋಕದಸುಖವು

ಆತನಿಂದ ಸತ್ಕರಿಸಲ್ಪಟ್ಟವನಾಗಿ ಅಲ್ಲಿಂದ ಧರ್ಮ್ಮಾನುಗುಣವಾಗಿ ಸುಖಾ ನುಭವವನ್ನು ಮಾಡುವದಕ್ಕೋಸ್ಕರ ಸ್ವರ್ಗಲೋಕವನ್ನು ಕುರಿತು ಅಲ್ಲಿ ರಂಭಾ ಸಂಭೋಗಾದಿ ಅನೇಕ ಸುಖಗಳನ್ನು ತಮ್ಮ ಧರ್ಮ್ಮಪ ರಿಮಾಣಾನುಸಾರವಾಗಿ ಕ್ಲುಪ್ತಕಾಲದವರಿಗು ಅನುಭವಿಸಿ ತರುವಾ ಯ ಮೂಲಧನವಾದ ಸುಕೃತವು ಮುಗಿದುಹೋಗಲು ಬಳಿಕ ಪ್ರಾರ ಬ್ಧಕರ್ಮ್ಮಾನುಸಾರವಾಗಿ ಭೂಲೋಕದೊಳು ಭೂಪಾಲರಾಗಿ ಹುಟ್ಟಿ ತಾವು ಬದುಕಿ ಇರುವ ಕಾಲದಲ್ಲಿ ಪೇಳಲಸದಳವಾದ ಪರಾಕ್ರಮಗಳ ನ್ನು ಮಾಡಿದಂಥವರಾಗಿ. ॥೧೩॥ ಆಮೇಲೆ ಇವರು ಭೂಮಿಪಾಲರಾ ಗಿ ಹುಟ್ಟುವದಕ್ಕೆ ಉಳಿದಿದ್ದ ಸುಕೃತವೂ ಕಳೆದು ಹೋಗುವಂಥಾ ದ್ದಾಗುತಿರಲಾಗಿ ಆ ಬಳಿಕ ಇವರು ಯಾತನಾಪರಂಪರೆಗಳನ್ನು ಅನು ಭವಿಸಿ ಅದರಿಂದುಂಟಾದ ದುಃಖಗಳನ್ನು ಇಷ್ಟೆಂದು ವರ್ಣಿಸುವದ ಕ್ಕೆ ನಮಗೆಶಕ್ತಿಯಿಲ್ಲವು. ಇವರನಡೆತೆಯು ಹ್ಯಾಗಿರುವದಂದರೆ ಲೋ ಕದಲ್ಲಿ ಸಣ್ಣಮಕ್ಕಳು ಅಣ್ಣೆಕಲ್ಲುಗಳನ್ನು ಇಟ್ಟುಕೊಂಡು ಆಡುವ ಸಂದರ್ಭದಲ್ಲಿ ಒಂದು ಕಲ್ಲುಮೇಲಕ್ಕೆ ಹೋಗುವದು ಮತ್ತೊಂದು ಕಲ್ಲುಕೆಳಕ್ಕೆ ಬರುವದು. ಈ ಮೇರೆ ಇವರು ಅಲ್ಪಸ್ವಲ್ಪ ಸುಖವನ್ನು ಅನುಭವಿಸುವದು ಹಾಗೆ ಅನರ್ಥಗಳನ್ನು ಅನುಭವಿಸುವದು ಈಮೇ ರೆ ಚಕ್ರಾಕಾರವಾಗಿರುವದು. ಅಂದರೆ ಅನವರತವೂ ಇವರು ಸುಕೃ ತದುಷ್ಕೃತಗಳಿಂದ ಸ್ವರ್ಗನರಕ ಭೂಲೋಕಗಳನ್ನು ಅರಸುತಲಿ ರುವರು ಎಂದಾಶಯವು. ॥೧೪॥ ಹಾಗಾದರೆ ಎಲೈ ಗುರುವೇ ! ಭಾವ ನಾರೂಪವಾಗಿರುವ ಅಂತಃ ಕರಣವನ್ನು ಜಯಿಸಿ ಅಂದರೆ ಸ್ವಾಧೀನ

---

ಡು ॥ ಕ್ರಮದಿಂದಭೂಮಿಗಿಳಿದು ರಾಯರಾಗಿವಿಕ್ರಮಗಳ ನ ಡಿಸಿಕಾಲದಲೀ ॥೧೩.॥

ಪುಣ್ಯತೀರಿದಕಾಲದಲಿ ಮೇಣವರುಪಟ್ಟಕಣ್ಣೀರಿನ ಭವಣೆ ಯನೂ ॥ ಗಣ್ಯಮಾಗಲ್ಕೆಂತುಪೇಳ್ವದೈವವಿವರನಣ್ಣೆಯಕಲ್ಲ ನಾಡಿದುದ ॥೧೪॥

ಅಂತಃಕರಣಸಿದ್ಧಿಯುಳ್ಳವರೆಭಾಗ್ಯವಂತರಿಂತೆಂಬುಬೇನ್ಯೆಯ್ಯಾ॥

ಮಾಡಿಕೊಂಡು ಇರುವವರು ಯಾರೋ? ಅಂಥವರೇ ವಿಶೇಷವಾದ ಪುಣ್ಯವಂತರು ಎಂಬದಾಗಿ ಹೇಳುವರಲ್ಲ, ಇದರ ವೃತ್ತಾಂತವೇನು? ದಯಮಾಡಿ ಹೇಳಬೇಕು ಎನಲು, ಆದರೆ ಲಾಲಿಸು, ಭೂಮಿಯು, ಜಲವು, ಅಗ್ನಿಯು, ವಾಯುವು, ಆಕಾಶವು, ಮನಸ್ಸು, ಬುದ್ಧಿಯು. ಅಹಂಕಾರವು, ಎಂಬೀ ತತ್ವಗಳ ಸಮುದಾಯದಿಂದ ||೭|| ಒಂದೊಂದು ತತ್ವವನ್ನು ಜಯಿಸುವದರಿಂದ ಎಂಟೆಂಟುಬಗೆಯಾಗಿರುವ ಸಿದ್ಧಿಗಳು ಉಂಟಾಗುವವು. ಹೀಗಾದರೆ ಈ ಎಂಟು ತತ್ವಗಳನ್ನು ಜಯಿಸುವದರಿಂದ ಅರವತ್ತುನಾಲ್ಕು ಸಿದ್ಧಿಗಳನ್ನು ಹೊಂದಿದವರೊಳಗು ಒಂದು ಇರುವೆಯನ್ನು ಮೊದಲುಮಾಡಿಕೊಂಡು ಚತುರ್ಮುಖನ ಪರ್ಯಂತವಿರುವ ಪ್ರಾಣಿಗಳೊಳಗೆ ಯಾರನ್ನಾದರೂ ಒಬ್ಬರನ್ನು ಎಣಿಸು. ||೮|| ಇವರಿಗೆ ಯಾರಿಗೆ ಆಗಲಿ ರೋಗಾದಿ ಉಪದ್ರವಗಳುಂಟಾಗದೆ ಮತ್ತು ಯಾವವಿಧವಾದ ತೊಂದರೆಗಳು ಬಾರದೆ ವಿನಾಶವನ್ನು ಹೊಂದದೆ ಇರುವವರನ್ನು ಒಬ್ಬರನ್ನಾದರು ತೋರಿಸಿದರೆ ಅಂಥವರನ್ನು ನಾನು ನೋಡಿ ಅಪರಿಮಿತವಾದ ಸಂತೋಷವನ್ನು ಹೊಂದೇನು. ಇವರೊಳಗೆ ಯಾವನಾದರೂ ಒಬ್ಬನು ಎಂದಿಗೂ ನಾಶವನ್ನು ಹೊಂದದೆ ಇರುವನಾಗಲಿ ಇಲ್ಲವೆ ಹೋದವನು ಪುನಃ ಹುಟ್ಟದೆ ಇರುವನೆ ಆಗಲಿ ಇರುವವನನ್ನು ತೋರಿಸಿದರೆ ಅಥವಾ ಇಂಥವನಿರುವನೆಂಬದಾಗಿ ಕೇಳುತ್ತೇನೆಂದು ಹೇಳಿದರೆ ಅದನ್ನು ಕೇಳಿಯಾದರು ಸುಖವನ್ನು ಅನುಭವಿಸುವಂಥವನಾಗುತ್ತೇನೆ. ||೯|| ಎಲೈ ಚತುರನೇ ಕೇಳು, ನಾಯಿಯಬಾಲಕ್ಕೆ ದಬ್ಬೆಯನ್ನು ಹಾಕಿ ನೆಟ್ಟಗೆಮಾಡಬೇ

---

ಅಂತಾಗವನಿಜಲವನ್ಹ್ಯನಿಲಾಕಾಶ ಸ್ವಾಂತಮತ್ಯ ಮಹೋ
ಘದಿಂದಾ ||೭||
ಬೇರೊಂದರೊಂದರಿಂದೆಂಟು ಸಿದ್ಧಿಯು ಬಾರಿಬಾರಿಗು ವೃದ್ಧಿ
ಯಿಂದಾ || ಸಾರಿರುತಿಹಭೂತಮುಖ ಬ್ರಹ್ಮಾವಧಿಕಶರೀರಗಳೊ
ಳಗೊಬ್ಬರೆಣಿಸೂ ||೮||
ಇವರೀಗಪೆಟ್ಟುಬೀಳದೆ ರೋಗಾದಿಗಳಿಂದ ಭವಣಿಗೆಬರದವರೆಂ

ಕೆಂಬದಾಗಿ ಕಟ್ಟಿದ್ದು ಪುನಃ ಬಿಚ್ಚಿದರೆ ಅದು ನಿತ್ಯವಾಗಿ ಡೊಂಕಿಲ್ಲದೆ ನಿಲ್ಲುವದುಂಟೆ? ಹಾಗೆಯೇ ಶರೀರವನ್ನು ಹೊತ್ತಬಳಿಕ ಪ್ರಾರಬ್ಧಕರ್ಮಾನುಸಾರ ಬಂದುಪ್ರೊದಗುವ ಸುಃಖದುಃಖರೂಪವಾದ ಫಲವನ್ನು ಹೊಂದದಿರುವಂಥ ಉತ್ತಮರನ್ನು ಈ ಮೂರುಲೋಕಸಮುದಾಯದಲ್ಲಿ ಯಾರೊಬ್ಬರನ್ನೂ ಕಾಣೆನು. ಅಂಥವರನ್ನು ಖಂಡಿತವಾಗಿ ಇಲ್ಲವೇ ಇಲ್ಲವೆಂದು ನಿಶ್ಚಯಿಸುವನಾಗು. ॥೨೪॥ ಎಲೈ ಪೂಜ್ಯನಾದ ಮಹಾಗುರುವೆ ಲಾಲಿಸಬೇಕು? ಲೋಕದಲ್ಲಿ ಇದುವರಿಗೆ ನಾನು ಉದಹರಿಸಿದ ಸಿದ್ಧಿಗಳನ್ನು ಹೊಂದಿದವರು, ಆಯಾಯ ಸಿದ್ಧಿಗಳನ್ನು ಹೊಂದದೆ ಇರುವವರಿಗಿಂತಲು ಉತ್ತಮರಲ್ಲವೆ? ದಯಮಾಡಿ ಇದಕ್ಕೆ ಉತ್ತರವನ್ನು ಹೇಳಬೇಕೆನಲು, ಅಹುದೈಯ್ಯಾ, ಮನಃಪ್ರಭುವೇ! ಸಿದ್ಧಿಯನ್ನೂ ಪಡೆಯದೆ ಇರುವರಿಗಿಂತಲೂ ಪಡೆದವರು ಉತ್ತಮರು, ಆದಾಗ್ಯೂ ಇವರು ಬ್ರಹ್ಮಾದಿದೇವತೆಗಳಿಗಿಂತಲು ಉತ್ತಮರಲ್ಲ. ಯಾಕಂದರೆ ಈ ಬ್ರಹ್ಮಾದಿದೇವತೆಗಳ ಶರೀರವೆ ಶಾಶ್ವತವಾಗಿ ನಿಲ್ಲುವದಿಲ್ಲವು ಹೀಗಿರುವಲ್ಲಿ ಈ ಸಿದ್ಧಶರೀರವು ನಿಲ್ಲುವದುಂಟೆ? ಇಲ್ಲವು ಆದ್ದರಿಂದಲೇ ಇವರು ದೇವತೆಗಳಿಗಿಂತ ಉತ್ತಮರಲ್ಲ, ಆದರೆ ರಾಗಿ ಬೆಳೆಯುವಂಥ ಭೂಮಿಯಲ್ಲಿರುವವರು ರಾಗಿಯ ಅಂಬಲಿಯನ್ನು ಭೋಜನಮಾಡುತ್ತಾರೆ, ಅದೇ ಸ್ಥಲದಲ್ಲಿ ರಾಗಿಯ ಅಂಬಲಿಯನ್ನು ಉಂಬುವವರಿಗಿಂತಲು ಅದನ್ನು ಉಣ್ಣದವರು ಉತ್ತಮ

---

ದೂ ॥ ಅವರನಾನೋಡುವೆ ನಿಲ್ಲದಿರ್ದಡೆ ನನ್ನ ಕಿವಿಯಾರಕೇಳಿ
ಸುಖಿಸುವೇ ॥೨೩॥
ಸಾವಿಯಬಾಲದಡೊಂಕ ತಿದ್ದಿಕಟ್ಟಿದರೆಕಟ್ಟ್ಯಯಕೆ ಕಡೆಗುನಿಲ್ಲು
ವುದೆ ॥ ಕಾಯುವಪೊತ್ತು ಪ್ರಾರಬ್ಧವನುಣ್ಣದ ರಾಯರಾರುಂ
ಟು ಭುವನದಲೀ ॥೨೪॥
ಇತರಾಪೇಕ್ಷೆಯಿಂದಧಿಕರಲ್ಲವೆ ಯನಲತಿಶಯವಿಲ್ಲ ಬೊಳೆಯ
ರಾ ॥ ವ್ರತತಿಯೊಳ್ರಾಗಿಯ ನೆಲದಿಯಂಬಲಿಯುಂಡರಿತರರಿಗಾ
ರುಪೇಳುವರೂ ॥೨೫॥

ರೆಂದು ಹೇಳಲ್ಪಡುತ್ತಾರೆ. ಅಲ್ಲದೆ ಅಂಬಲಿಯನ್ನೂಟುಮಾಡುವವರೆ ನ್ನು ಉಣ್ಣದವರಿಗಿಂತ ಉತ್ತಮರೆಂದು ಯಾರು ಹೇಳುವರು ‖೨೯‖

ಜೋಳ ಬೆಳಿಯುವ ದೇಶದಲ್ಲಿ ವಾಸಮಾಡುವಂಥವರು ಜೋಳದ ರೊಟ್ಟಿಯನ್ನು ತಿಂದಂಥವರಾಗಿ ತಮಗಿಂತಲು ಇತರರು ಅತಿಶಯವಾ ಗಿರುವರೆಂಬದಾಗಿ ಅವರು ಹೇಳುವರೆ? ಒಂದು ಕಾಲಕ್ಕು ಹೇಳುವ ದಿಲ್ಲ. ಯಾತಕಂದರೆ ಈ ಮನುಷ್ಯಲೋಕದೊಳಗೆ ಸಮಸ್ತ ಫಲಾ ನುಭವಗಳಲ್ಲಿಯು ಸಾಮಾನ್ಯವಾದ ಬುದ್ಧಿಯು ಸರ್ವರಿಗೆ ಆಗಲಿ ಇಲ್ಲ ವೆ ಒಬ್ಬೊಬ್ಬರಿಗೆ ಆಗಲಿ ಒಂದುಕಾಲಕ್ಕು ಉಂಟಾಗುವದೇ ಇಲ್ಲವು. ಈ ಅರ್ಥದಲ್ಲಿ ಲೇಶವಾದರೂ ಸಂದೇಹವಿಲ್ಲವೆಂಬದಾಗಿ ತಿಳಿಯತಕ್ಕ ದ್ದು. ‖೩೦‖ ಹಾಗಾದರೆ ಈ ಹಿಂದೆ ಉದಹರಿಸಿದ ಸಿದ್ಧಿಯನ್ನು ಪಡೆ ದಂಥಾವರಿಗೆ ತಮ್ಮತಮ್ಮ ಸಿದ್ಧಿಯಬಲದಿಂದ ತಮ್ಮ ಶರೀರಕ್ಕೆ ಉಂಟಾ ಗುವ ಹಾನಿಗಳನ್ನು ತಪ್ಪಿಸಿಕೊಳ್ಳುವದಕ್ಕೆ ಶಕ್ತಿಯುಂಟೆ? ಎಂಬ ದಾಗಿ ಕೇಳ್ವಬಂದರೆ ಅದಕ್ಕೆ ಉತ್ತರವೇನೆಂದರೆ, ಸಿದ್ಧಿಯನ್ನು ಪಡೆ ದರೆ ಆಗಲಿ ಇಲ್ಲದವರೆ ಆಗಲಿ ತಮ್ಮತಮ್ಮ ಪ್ರಾರಬ್ಧಕರ್ಮರಾಶಿಗಳ ಆ ನುಗುಣ್ಯದಿಂದ ಕಾಲಕ್ರಮವಾಗಿ ಲಭಿಸುವ ಸುಖದುಃಖಪರಂಪರೆಗಳ ನ್ನು ಇವರು ತಪ್ಪಿಸಿಕೊಳ್ಳುವದಕ್ಕೆ ಆಗುವದಿಲ್ಲ. ಈ ಪೂರ್ವೋಕ್ತವಾ ದ ಕರ್ಮಗಳು ಸಿದ್ಧಿವಂತರು ಹೇಳಿದಂತೆ ಕೇಳಲಿಕ್ಕೆ ಇವರ ಗೌಡಿಯ ರ ಹೊಟ್ಟೆಯಲ್ಲಿ ಹುಟ್ಟಿದಂಥವುಗಳಾಗಿರುವವೆ? ಸಾಮಾನ್ಯವಾಗಿ ಗೌ ಡಿಯಮಕ್ಕಳುಕೂಡ ಹೇಳಿದಮಾತನ್ನು ಕೇಳದಿರುವಲ್ಲಿ ಅವಶ್ಯವಾಗಿ ಅನುಭವಿಸಿಯೋ ತೀರಿಸಬೇಕಾದದ್ದಾಗಿರುವ ಕರ್ಮಗಳು ಇವರು

---

ಜೋಳದ ಸೆಲದಿರೊಟ್ಟಿಯತಿಂದು ಪರರೊಳ್ಪೇಳುವರಾರತಿಶ ಯವಾ ‖ ಭೂಲೋಕದೊಳುಸರ್ವಸಾಧಾರಣದ ಫಲಜಾಲದೊ ಳಿಚ್ಛೆಯಾಗ್ರುಂಟೇ ‖೩೮‖

ಆಧಾರಬಲದಿಂದ ಕೇಡಿಗಪಾಯುವ ಸಾಧಿಸಬಹುದೆನೆಬರುವಾ ‖ ವೋದವಿಷಾದ ಪ್ರಮಾದದಕರ್ಮಗಳಿವನ ದಾದಿಯ ಮಕ್ಕಳೇ ಹೇಳೂ ‖೩೧‖

ಹೇಳುವಂತೆ ಕೇಳಬಲ್ಲವೆ? ಬಾದುಕಾಲಕ್ಕು ನಡೆಯುತಕ್ಕದ್ದಲ್ಲವೆಂಬದಾಗಿತಿಳಿ. ॥ ೩೧ ॥ ಇನ್ನು ಈ ಅಮೋಘವಾದ ಕರ್ಮಫಲಗಳನ್ನು ಅನುಭವಿಸಿಯೇ ತೀರಿದ ಕೆಲಮಹಾಪುರುಷರನ್ನು ವಿವರಿಸುವೆ ನಾಲ್ಕೈಸು, ನಳಮಹಾರಾಯನು, ದಶರಥ ಪುತ್ರನಾದ ಶ್ರೀರಾಮನು, ಯಮಧರ್ಮರಾಯನ ಮಗನಾದ ಧರ್ಮರಾಯನು, ಮಹಿಷಾಸುರನು, ಬಲಿಚಕ್ರವರ್ತಿಯು, ಕಿಷ್ಕಿಂಧಾಧಿಪತಿಯಾಗಿದ್ದ ಇಂದ್ರಪುತ್ರನಾದ ವಾಲಿಯು, ಸೂರ್ಯಪುತ್ರನಾಗಿ ಧರ್ಮರಾಯನಿಗೆ ಅಣ್ಣನಾಗಿದ್ದ ಕರ್ಣನು, ಯಯಾತಿಮಹಾರಾಯನು, ಜಗತ್ಪ್ರಕಾಶಕನಾದ ಸೂರ್ಯನು, ತ್ರಿಲೋಕಾಧಿಪತಿಯಾದ ಅಮರೇಂದ್ರನು, ನಿಶಾನಾಥನಾದ ಚಂದ್ರನು, ಗಾಲವನೆಂಬ ಮಹರ್ಷಿಯು, ಅಷ್ಟಾದಶ ಪುರಾಣಕರ್ತನಾಗಿ ರಾಶಿಭೂತಳಾಗಿದ್ದ ವೇದಗಳನ್ನು ಕೂಡ ವಿಭಾಗಮಾಡಿದ ವ್ಯಾಸಮಹರ್ಷಿಯು, ಇವರುಗಳೊಳಗೆ ಪ್ರಾರಬ್ಧಕರ್ಮವೆಂಬುವದು ಯಾರನ್ನು ಬಿಟ್ಟಿರುವದು. ಇವರಲ್ಲಿ ಒಬ್ಬರನ್ನೂ ಬಿಡಲಿಲ್ಲವು ಈ ಸ್ಥಲದಲ್ಲಿ ಮೇಲೆಉದಹರಿಸಿದ ನಳಮಹಾರಾಯ ಮುಂತಾದವರ ಚರಿತ್ರೆಯನ್ನು ಸರ್ವತ್ರ ಪ್ರಸಿದ್ಧವಾಗಿರುವದರಿಂದಲು ಪ್ರಕೃತಗ್ರಂಥವು ಕೇವಲ ವಿರಕ್ತಿಯನ್ನುಬೋಧಿಸಿ ಪರಮಾರ್ಥವಾದ ಮುಕ್ತಿಯನ್ನು ಜ್ಞಾನದ್ವಾರಾ ಉಂಟುಮಾಡತಕ್ಕದ್ದಾಗಿರುವದರಿಂದ ತತ್ಕಾಲಕ್ಕೆ ಅಷ್ಟು ಉಪಯೋಗಕರವಾಗಿಲ್ಲದ್ದರಿಂದಲು, ಗ್ರಂಥವಿಸ್ತರ ಭಯದಿಂದಲು ನಿರೂಪಿಸಲಿಲ್ಲವು. ॥ ಎಲೈ ಮನೋನನಾರಥನೆ ಮೇಲೆ ವಿವರಿಸಿದ ನಳಮಹಾರಾಯಾದಿ ಮಹಾಪುರುಷರೊಳಗ ಯಾರೊಬ್ಬರೂ ಕರ್ಮವನ್ನು ಅತಿಕ್ರಮಿಸಿ ನಡೆದಂಥವರಲ್ಲ, ಇವರುಗಳಲ್ಲಿ ಲೆಖ್ಖಕ್ಕೆ ಮನುಷ್ಯರೆಷ್ಟುಮಂದಿಯಾದರು, ದೇವತೆಗಳೆಷ್ಟುಮಂದಿಯಾದರು,

---

ನಲರಾಮಧರ್ಮನಂದನ ಮಹಿಷಾಸುರ ಬಲಿಬಾಲಿಕರ್ಣಯಯಾತೀ ॥ ಜಲಜಾಪ್ತಶಕ್ರೇಂದು ಗಾಲವವ್ಯಾಸಾದಿಗಳೊಳಾರನುಳಿದುದೀಕರ್ಮ ॥೩೦॥

ಯಾರುವಿಾರಿದರೀಕರ್ಮವ ನಿವರೊಳಗಿವರಾರಿವರೆಣಿಸೆ ಮಾನ

ಮಹರ್ಷಿಗಳೆಷ್ಟು ಜನಗಳಾದರು ಇದನ್ನೆಲ್ಲಾ ಚೆನ್ನಾಗಿ ಪರಿಭಾವಿಸಿ ನೋಡಿ ರಹಸ್ಯವನ್ನು ನಿಶ್ಚಯವಾಗಿ ತಿಳಿದುಕೊಂಡು ತರುವಾಯ ಭ್ರಾಂತಿಯನ್ನು ತೊರೆದು ಕರ್ಮವೆಂಬುವದು ದಾಟುವದಕ್ಕೆ ಆಗುವದಿಲ್ಲ. ಅಂದರೆ,-ಅದರ ಫಲಾಫಲಗಳನ್ನು ಅನುಭವಿಸಿಯೇ ತೀರಬೇಕೆಂಬದಾಗಿ ನಿರ್ಧರಿಸುವಂಥವನಾಗು ॥ ಹಾಗಾದರೆ ಎಲೈ ಪೂಜ್ಯವಾದ ರಾಜ ಶ್ರೀಗುರುವೆ! ಕರ್ಮಜಾಲಕ್ಕೆ ಕಟ್ಟುಬಿದ್ದಿರುವವರು ಯಾರೊ ಅವರೆ ಕೃತಾರ್ಥರೆಲೈ ಮನೋಧರಣಿಪಾಲನೆ ನಾನು ಹೇಳುವದನ್ನು ಸ್ವಲ್ಪಮಟ್ಟಿಗೆ ಅವಗಾಹನಕ್ಕೆ ತೆಗದುಕೊಳ್ಳು, ಅದೇನೆಂದರೆ,ಈ ಕರ್ಮವೆಂಬುವದು ಲೋಕದಲ್ಲಿ ಯಾರನ್ನು ಬಾಧಿಸುವದು ಎಂಬ ವಿವೇಕವು ನಿನ್ನ ಅಂತರಂಗದಲ್ಲಿ ಹುಟ್ಟದಿರಲು ನಿಮಿತ್ತವೇನು? ಹಾಗೆ ಹುಟ್ಟಿದ್ದರೆ ಬಹಳ ಚೆನ್ನಾಗಿತ್ತು. ॥ ೨೪ ॥ ಈ ಕರ್ಮಜಾಲವೆಂಬುವದು ಯಾರನ್ನು ಬಾಧಿಸುವದೆಂದರೆ ಪೃಥಿವ್ಯಾದಿ ಪಂಚ ಭೂತಗಳ ವಿಕಾರವಾಗಿರುವ ಅಂದರೆ, ಇವುಗಳ ಕಾರ್ಯವಾದ ಜ್ಞಾನೇಂದ್ರಿಯ ಪಂಚಕ, ಕರ್ಮೇಂದ್ರಿಯ ಪಂಚಕ, ಮನೋಬುದ್ಧಿಗಳೆಂಬ ಸಪ್ತದಶಾವಯವಾದ ಲಿಂಗದೇಹವನ್ನು ಬಾಧಿಸುತಲಿರುವದು. ಅಲ್ಲದೆ ಈ ಶರೀರದ ಸಮೀಪದಲ್ಲಿಇರುವ ಸ್ವತಃಪ್ರಕಾಶಮಾನವಾದ ಚಿತ್ಪದಾರ್ಥವನ್ನು ಮುಟ್ಟಲು ಈ ಕರ್ಮಕ್ಕೆ ಲೇಶವಾದರು ಶಕ್ತಿ ಇಲ್ಲವೆಂದು ತಿಳಿಯತಕ್ಕದ್ದು. ॥೨೫॥ ಎಲೈ ಮನಃಪ್ರಭುವೆ ಇನ್ನುಮೇಲಾದರು ಪ್ರತ್ಯಕ್ಷ

---

ವರೂ ॥ ಸಾರಿವಿಚಾರಿಸು ಭ್ರಮೆಗೊಳದಿರದುರ್ನಿವಾರ ವೆಂದರಿದುಕೊಭೂಪಾ ॥೩೩॥

ಅನಿವಾರ್ಯಕರ್ಮಕ್ಕೆ ಸಿಲ್ಕಿದವರುಘನರೆನಿಪರೆ ಪೇಳೈಯ್ಯಾಗುರುವೆ ॥ ಜನಪಕೇಳೈಕರ್ಮವಾರಬಾಧಿಪುದೆಂದು ನಿನಗಿಲ್ಲವಾಯ್ತೆವಿವೇಕಾ ॥೨೪॥

ಪಂಚಭೂತದವಿಕೃತಿಯು ಲಿಂಗದೇಹಪ್ರಪಂಚವ ಬಾಧಿಪುದಿದರಾ ॥ ಅಂಚಿನೊಳ್ಪೊಳೆವಚಿತ್ತನು ಸೋಂಕಲರಿಯದೀಚಂಚಲಕರ್ಮಪ್ರಾರಬ್ಧ ॥೨೫॥

ವಾಗಿ ಪ್ರಕೃತಿ ಸಂಬಂಧವೆಂಬದಾಗಿ ಕಂಡು ಬರುವ ಅಜ್ಞಾನದ ಬಂಧಕ್ಕೆ ಶಿಲುಕದೆ ವಿಚಾರಮೂಲಕ ನಿಸ್ಸಂಶಯವಾಗಿ ಪ್ರಾಕೃತಕರ್ಮವು ಸ್ವತಃ ಪ್ರಕಾಶಮಾನವಾದ ಚೈತನ್ಯಪದಾರ್ಥವನು ಮುಟ್ಟಲರಿಯದೆಂದು ನಿಶ್ಚಯಿಸಿ ಸಾಮಾನ್ಯ ಫಲಗಳನ್ನು ಕೊಡತಕ್ಕಂಥ ಅಲ್ಪಸಿದ್ಧಿಗಳನ್ನು ಸರ್ವಾತ್ಮನಾಬಯಸದೆ ಮತ್ತು ಆತ್ಮಸ್ವರೂಪವಾಗಿರುವ ಸ್ವಸ್ವರೂಪವನ್ನು ಬಿಟ್ಟು ತುಚ್ಛವಾಗಿಯು ಇರುವ ಫಲಗಳನ್ನು ಕೊಡುವ ಇತರ ದೈವಗಳನ್ನು ಭಜಿಸದೆ ವೇದಾಂತಗಳಾದ ಉಪನಿಷತ್ತುಗಳಿಗೆ ಮುಖ್ಯ ತಾತ್ಪರ್ಯವಾಗಿರುವದೆಂಬದಾಗಿ ಶಾಸ್ತ್ರಾನುಭವ ಪಾರೀಣರಾದ ಪಂಡಿತರಿಂದ ನಿಶ್ಚಯಿಸಲ್ಪಟ್ಟಿರುವ ಪರಮಾರ್ಥವನ್ನು ಅಂತಪ್ಪ ಪರಮಾರ್ಥವನ್ನು ತಿಳದಿರುವ ಮಹಾನುಭಾವನಾದ ಗುರುವಿನಿಂದ ಆತನ ಸೇವೆಯನ್ನು ಮಾಡುವದರ ಮೂಲಕ ತಿಳಿದು ಅದೆ ನಾನೆಂಬದಾಗಿ ಅಂತರಂಗಿಕವಾದ ಭಾವನೆಯನ್ನು ಕಾಲಕ್ರಮದಿಂದ ದೃಢವಾಗುವಂತೆ ಮಾಡುತಬಂದರೆ ಆಗಲೇ ನೀನು ಕೃತಾರ್ಥನಾದೆ. ॥೩೬॥ ಲೋಕದಲ್ಲಿ ಯಾವನೇ ಆಗಲಿ ಸ್ವಸ್ವರೂಪವನ್ನು ತಿಳಿದಹೊರತು ಜನನ ಮರಣ ಪ್ರವಾಹರೂಪವಾಗಿರುವ ಸಂಸಾರ ಸಾಗರವೆಂಬುವದು ಬತ್ತಿಹೋಗುವದೇ ಇಲ್ಲವು. ಎಂಬದಾಗಿ ಶೇಷಭೂಷಣನಾಗಿರುವ ಪರಮೇಶ್ವರನು ಶ್ರೀ ಕಾಶೀಕ್ಷೇತ್ರದಲ್ಲಿ ತನ್ನಂಶಭೂತರಾಗಿ ಸುತ್ತಲೂ ಪರಿವೃತರಾಗಿರುವ ಏಕಾದಶ ರುದ್ರರಿಗೂ ಅವಗಾಹನವಾಗುವಂತೆ ಘಂಟಾಘೋಷವಾಗಿ ಉದಹರಿಸುವಂಥವನಾದನು. ಈ ವಾಕ್ಯವೇ ಪರಮಾರ್ಥವೆಂಬದಾಗಿ ತಿಳಿದು ಅ

---

ಇನ್ನೀಪ್ರಾಕೃತಮೋಹಕೆ ಸಿಲುಕದೆಸಿದ್ಧಿಯನ್ನೆಣಿಸದೆಕಟ್ಟ
ಪ್ರೇಮಾ ॥ ತನ್ನಬಿಟ್ಟನ್ಯದೈವವಭಜಿಸದೆ ಗುರುವಿನ್ನೀಪರಮಾ
ರ್ಥವನೆಂಬೂ ॥೩೬॥
ತನ್ನ ತಾನರಿದಲ್ಲದತಿಳಿಯದು ಭವವೆಂದು ಪನ್ನಗಾಭರಣಕಾಶಿ
ಯಲೀ ॥ ಚೆನ್ನಾಗಿವೃತರಾಗಿ ರುದ್ರಾದರಿಗೆಂದನೆನ್ನುವದೇ ಸ
ತ್ಯವಾಕ್ಯ ॥೩೭॥

ದನ್ನೆ ಚನ್ನಾಗಿ ಅನುಸಂಧಾನಮಾಡತಕ್ಕದ್ದು. ||೩೭|| ಈ ಅರ್ಥವೆ ಇತರ ಅನಿತ್ಯಗಳಾಗಿರುವ ಪುರುಷಾರ್ಥಗಳಿಗಿಂತಲೂ, ಅತಿಶಯವಾದ ಪರಮ ಪುರುಷಾರ್ಥವಾಗಿರುವದರಿಂದಲೇ ಹೀನಗಳಾಗಿರುವ ಸಾಮಾನ್ಯ ಸಿದ್ಧಿಗಳಿಂದ ಲಭಿಸಿದ ಸ್ವರ್ಗಾದಿಲೋಕ ಸುಖಗಳಲ್ಲಿ ಲೇಶವಾದರೂ ಆಶೆಯನ್ನು ಇಡದೆ ಇವುಗಳನ್ನು ತ್ಯಾಗಮಾಡಿ ಹೃದಯಾರವಿಂದದೊಳು ಭಾಸಮಾನವಾದ ಅಮೋಘವಾದ ಆನಂದ ಘನವಾಗಿರುವ ಚೈತನ್ಯವನ್ನು ಸ್ವಾಭಿನ್ನವಾಗಿರುವದೆಂಬದಾಗಿ ನಿಧಿಧ್ಯಾಸನವನ್ನು ಮಾಡಿ ಪರಮಸುಖವನ್ನು ಅನುಭವಿಸುವಂಥವನಾಗು. ಇದುವರಿಗೆ ಉಪಪಾದನ ಮಾಡಿದ ಅರ್ಥದಿಂದ ತಿಳಿಯತಕ್ಕ ಮುಖ್ಯವಾದ ಅಂಶವೇನಂದರೆ ? ಶ್ಲೋ|| ಗೋಶತಾದಪಿಗೋಕ್ಷೀರಂ ಪ್ರಸ್ಥಂಧಾನ್ಯಶತಾದಪಿ || ಪ್ರಾಸಾದಾದಪಿಖಟ್ವಾರ್ಧಂ ಶೇಷಾಃಪರವಿಭೂತಯಃ|| ಅಂದರೆ ಲೋಕದೊಳು ಯಾವಪುರುಷನೆ ಆಗಲಿ ಎಷ್ಟು ಕಷ್ಟಪಟ್ಟು ದ್ರವ್ಯವನ್ನು ಆರ್ಜಿಸಮಾಡಿದ್ದರು. ತನ್ನ ಮನೆಯಲ್ಲಿ ನೂರು ಆಕಳುಗಳು ಅಪರಿಮಿತವಾಗಿ ಹಾಲನ್ನು ಕೊಡುತಿರುವ ಸಂದರ್ಭದಲ್ಲಿ ಸಂಪಾದಿಸಿದವನಿಗೆ ಒಂದು ಹಸುವಿನ ಹಾಲಿನಲ್ಲಿಯು, ಒಂದು ಪಾವು ಮಾತ್ರ ಉಪಯೋಗಾರ್ಹವಾಗುವದಲ್ಲದೆ ಉಳಿದದ್ದೆಲ್ಲಾ ಆಗಲಾರದು. ಹೀಗೆಯೆ ನೂರು ಖಂಡಗ ಅಕ್ಕಿಯು ಬೆಳದು ಬಂದರು ಅದರಲ್ಲಿಯು ಒಂದುಪಾವು ಧಾನ್ಯಮಾತ್ರವೆ ಇವನಿಗೆ ಉಪಯೋಗಿಸುವದು, ಒಂದೆರಡು ಯೋಜನದ ವಿಸ್ತಾರವಿರುವಂತೆ ದಿವ್ಯವಾದ ಉಪ್ಪರಿಗೆಯನ್ನು ಕಟ್ಟಿಸಿದ್ದರೂ ಅದರಲ್ಲಿ ಒಂದು ಮೊಳದಷ್ಟು ಭೂಮಿ ಮಾತ್ರವೆ ಸಂಪಾದಿಸಿದವನ ವಾಸಕ್ಕೋಸ್ಕರ ಉಪಯೋಗಿಸುವದು. ಹೀಗೆ ಲೌಕಿಕ ದೃಷ್ಟಿಯಿಂದ ವಿಚಾರಮಾಡಿ ನೋಡಿದರೆ ಸಮಸ್ತ ಸಂಪತ್ತಿಗೂ ಇವನಿಗೂ ಸಂಬಂಧವೇ ಇಲ್ಲ. ಇನ್ನು ಪರಮಾರ್ಥ ದೃ

ಇದರಿಂದಲಖಿಲಸಿದ್ಧಿಗಳಿಂದ ದೊರಕಿದ ಪದದಭೋಗಗಳಚಾಸೆಯನೂ || ವಿದಳಿಸಿನಿನ್ನೊಳಗಿರುವ ಚೈತನ್ಯದಪದವಿಯು ಪಡೆಸುಖಿಯಾಗೂ ||೩೮||

ಷ್ಟಿಯಿಂದ ವಿಚಾರಮಾಡುವದಕ್ಕೆ ಪ್ರಾರಂಭಿಸಿದರೆ ಅನ್ನಮಯ ಕೋಶಕ್ಕು ಆದರ ಒಳಗಿರುವ ಮೇಲೆ ಉದಹರಿಸಿದ ಲಿಂಗಶರೀರಕ್ಕು ಇನ್ನು ಅದರ ಒಳಭಾಗದೊಳಿರುವ ಕಾರಣ ಶರೀರವಾದ ಅಜ್ಞಾನಕ್ಕು ಅದರಲ್ಲಿ ಭಾಸಮಾನವಾದ ಚಿತ್ಪದಾರ್ಥಕ್ಕು ಯಾವವಿಧವಾದ ಸಂಬಂಧವೂ ಇಲ್ಲ. ಯಾತಕ್ಕೆಂದರೆ ತಮಸ್ಸಿಗು ಪ್ರಕಾಶಕ್ಕು ಹ್ಯಾಂಗೆ ಪರಸ್ಪರ ವಿರೋಧಿಗಳಾಗಿರುವದರಿಂದ ಸಂಬಂಧವಿಲ್ಲವೊ ಅದರಂತೆ ಚೈತನ್ಯ ವ್ಯತಿರಿಕ್ತವಾದ ಇತರ ಪದಾರ್ಥಗಳೆಲ್ಲವು ಅನೃತಗಳಾಗಿಯು ಜಡಗಳಾಗಿಯು, ಅಜ್ಞಾನವಿಜೃಂಭಿತವಾಗಿಯು, ಅನಿತ್ಯಗಳಾಗಿಯು, ವ್ಯಾಪ್ಯಗಳಾಗಿಯು, ಇರುವದರಿಂದಲು, ಇವುಗಳಿಗಿಂತ ವ್ಯತಿರಿಕ್ತವಾಗಿರುವ ಚಿತ್ಪದಾರ್ಥವು ಸತ್ಯವಾಗಿಯೂ, ಚೈತನ್ಯ ಸ್ವರೂಪವಾಗಿಯೂ, ಜ್ಞಾನಸ್ವರೂಪವಾಗಿಯೂ, ನಿತ್ಯವಾಗಿಯೂ, ವ್ಯಾಪಕವಾಗಿಯು, ಅಖಂಡವಾಗಿಯು, ಇರುವದರಿಂದಲು ಇವೆರಡಕ್ಕು ಸಂಬಂಧವೆಂಬುವದು ಸಮನಿಸುವದೇ ಇಲ್ಲ. ಆದದರಿಂದಲೇ ಆತ್ಮವ್ಯತಿರಿಕ್ತವಾಗಿರುವ ಪದಾರ್ಥಗಳಿಂದ ಉಂಟಾಗತಕ್ಕ ಫಲಗಳುಕೂಡ ತುಚ್ಛಗಳಾಗಿಯು, ಅಲ್ಪ ಫಲಪ್ರದಗಳಾಗಿಯು, ಅನಿತ್ಯಗಳಾಗಿಯು ಇರುವವಾದಕಾರಣ ಹೇಯಗಳೆಂದು ಚನ್ನಾಗಿನಂಬಿ ಶಾಶ್ವತವಾಗಿ ಅಪರಿಮಿತಾನಂದ ರೂಪವಾಗಿರುವ ಮೋಕ್ಷವು ಅವಶ್ಯವಾಗಿ ಸಂಪಾದಿಸತಕ್ಕದ್ದಾಗಿರುವದರಿಂದ ವಿವೇಕಿಗಳು ಸ್ವರೂಪ ವ್ಯತಿರಿಕ್ತ ಪದಾರ್ಥಗಳಲ್ಲಿ ಅಭಿಲಾಷೆಯನ್ನಿಡದೆ ವಿರಕ್ತಿಯನ್ನು ಹೊಂದಿ ಪರಮಾರ್ಥವನ್ನು ಹೊಂದುವದು ಉಚಿತವೆಂಬುವದು ಇದುವರಿಗೆ ವಿವರಿಸಿದ ಅರ್ಥಸಮುದಾಯಕ್ಕೆ ಸಾರಾಂಶವೆಂದು ಅರಿಯತಕ್ಕದ್ದು. ॥೩೪॥

೧ ವ ॥ ತಾ॥ ಈ ಪ್ರಕಾರವಾಗಿ ನಾನಾವಿಧವಾದ ಸಿದ್ಧಿಸಮುದಾಯಗಳಿಂದ ಲಭಿಸುವ ಸ್ವರ್ಗಸುಖಾದಿ ವಿವಿಧ ಸುಖಪರಂಪರೆಗಳೆಲ್ಲವೂ ಅಲ್ಪಕಾಲ ವಿರುವದರಿಂದ ಕೇವಲ ಅನಿತ್ಯಗಳಾದುದರಿಂದ ಆ ಭೋಗ ಸಮುದಾಯದಿಂದ ವಿರಕ್ತನಾಗಿ ಶಾಶ್ವತಸುಖವನ್ನು ಪಡೆ

---

೧ ಮೂ॥ ವ॥ ಇಂತೆಂದು ಸಕಲ ಸಿದ್ಧಿಸಂಪಾದಿತ ಸರ್ವಲೋಕ

ಯುವ ಪ್ರಯತ್ನವಂ ಮಾಡಬೇಕೆಂಬದಾಗಿ ವೈರಾಗ್ಯ ಪದ್ಧತಿಯಂ ವಿಶದಪಡಿಸಿ ಮಾರ್ಗಾಂತರದಿಂದ ಪೇಳುತಿಧಾನೆ. ಅದೆಂತೆಂದರೆ.

ಇಂತು ವೈರಾಗ್ಯ ಪದ್ಧತಿಯು ಮುಗಿದುದು.

ಪದ್ಧತಿ ೧೫ಕ್ಕೆ ಮಂಗಳಮಸ್ತು.

## ೧೬. ಪ್ರತ್ಯಕ್ಷ ಪ್ರಮಾಣ ಪದ್ಧತಿ ಪ್ರಾರಂಭವು.

೧ ಗೀತ॥ ತಾ ॥ ಎಲೈ ಮನೋನರನಾಥನೆ ಲಾಲಿಸು ! ಭಾವನಾ ರೂಪವಾಗಿರುವ ಅಂತಃಕರಣ ವೆಂಬುವದು ಇದಂ ವೃತ್ತಿಯುಳ್ಳದ್ದಾಗಿ ಯು, ಅಹಂವೃತ್ತಿಯುಳ್ಳದಾಗಿಯು ಎರಡು ಬಗೆಯಾಗಿರುವದು, ಇ ದರ ವಿವರ ವೆಂತೆಂದೊಡೆ ? ಒಂದಾನೊಂದು ಕೆರೆಯಲ್ಲಿರುವ ನೀರು ತೂಬಿನಿಂದ ಹೊರಗೆ ಹೊರಟು ಗದ್ದೆಗಳಿರುವ ಸ್ಥಲವನ್ನು ಹೊಂದಿ ಆಗದ್ದೆಯು ಗುಂಡಾಗಿದ್ದರೆ ಗುಂಡಾಗಿಯು ಚೌಕವಾಗಿದ್ದರೆ ಅದರಂ ತೆಯು ಹ್ಯಾಗೆ ಹರಡಿಕೊಳ್ಳುವದೊ ಅದರಂತೆಯೇ ಅಂತಃಕರಣವೆಂ ಬುವದು ನಿರ್ಮಲವಾಗಿಯು ತೇಜೋಮಯವಾಗಿಯು ಇರುವ ಪದಾ ರ್ಥವಾದಕಾರಣ ಇದು ಯಾವದಾದರೊಂದು ಪದಾರ್ಥ ವಿಷಯವಾ ದ ಪ್ರತ್ಯಕ್ಷವನ್ನು ಹೊಂದಬೇಕಾಗಿದ್ದರೆ ಚಕ್ಷುರಾದಿ ಇಂದ್ರಿಯ ದ ದ್ವಾರಾ ಹೊರಗೆ ಹೊರಟು ಆಯಾಯ ವಿಷಯದ ಬಳಿಗೆ ಹೋಗಿ ಅದರ ಆಕಾರವಾಗಿ ಪರಿಣಮಿಸುವದು. ಆದರೆ ಕನ್ನಡಿಯು

---

ಭೋಗವ್ಯೂಹ ವಿರಾಗ ಪದ್ಧತಿಯಂ ಪೇಳಿ ಇನ್ನೊಂದು ಪ್ರ ಕಾರವಂ ಪೇಳುತಿರ್ದಪನದೆಂತೆನೆ ॥

ಇಂತು ವೈರಾಗ್ಯ ಪದ್ಧತಿಯು ಮುಗಿದುದು.

ಪದ್ಧತಿ ೧೫ಕ್ಕೆ ಮಂಗಳಮಸ್ತು.

## ೧೬. ಪ್ರತ್ಯಕ್ಷ ಪ್ರಮಾಣ ಪದ್ಧತಿ ಪ್ರಾರಂಭವು.

೧ ಮೂ॥ ಗೀತ ॥ ಇರ್ಪುದಂತಃಕರಣಮೇ ತಾನೆರಡು ತೆರದೊ ಳೀಗಹಂ ವೃತ್ತಿಯಿಂದಿದಂವೃತ್ತಿಯಿಂದೊರೂಪಮೆ ವಿವರ್ಣ

ಚನ್ನೆ ಸವಿೂಪಕ್ಕೆ ಅಂದರೆ ಎದುರಿಗೆ ಯಾವವಸ್ತು ಬಂದಾಗ್ಯೂ ಅದ ರ ಪ್ರತಿಬಿಂಬವನ್ನು ಹ್ಯಾಂಗೆ ಗ್ರಹಿಸುವದೋ ಅದರಂತೆಯೇ ಈ ಅಂತಃಕರಣವೂ ಇಂದ್ರಿಯದ್ವಾರಾ ವಿಷಯ ಸಾನ್ನಿಧ್ಯವನ್ನು ಹೊಂ ದಿದ ಬಳಿಕ ತಾನು ಸ್ವತಃ ತೇಜೋದ್ರವ್ಯವಾದಕಾರಣ ಆವಸ್ತುವಿನ ಪ್ರತಿಬಿಂಬ ಗ್ರಹಣವನ್ನು ಮಾಡುವದು. ತರುವಾಯ ಇದು ಇಂಥ ಪದಾರ್ಥವೆಂಬದಾಗಿ ಅಂತರಂಗಕ್ಕೆ ಗೋಚರವಾಗಿ ಪ್ರತ್ಯಕ್ಷವಾಗು ವದು. ಹೀಗಾಗುವದರಲ್ಲಿ ಹೊರಭಾಗದೊಳಿರುವ ಘಟ, ಪಟ, ಕುಡ್ಯ, ಕುಸೂಲಾದಿ ಪದಾರ್ಥಗಳ ಆಕಾರವಾಗಿ ಅಂತಃಕರಣವು ಪರಿಣಮಿಸಿ ಇದು ಘಟವು, ಇದು ಪಟವು, ಇದು ಕುಸೂಲವು, ಎಂದೀ ಪ್ರಕಾರ ವಾಗಿ ಪ್ರತ್ಯಕ್ಷ ವುಂಟಾಗುವದಾದಕಾರಣ, ಇದು ಇದಮಾಕಾರ ವಾಗಿ ಪರಿಣತಾಂತಃಕರಣ ವೃತ್ತಿಯುಂಟಾದ ಅಂತಃಕರಣಕ್ಕೆ ಮನಸ್ಸೆಂಬದಾಗಿಹೆಸರು. ಅಹಮಾಕಾರವಾದ ವೃತ್ತಿಯನ್ನು ಪಟ್ಟಿ ರುವದೇ ಅಹಂಕಾರ ವೆನ್ನಲ್ಪಡುವದು. ಆದರೆ ಈ ಅಹಂಕಾರದೊ ಳಗೆ ಚಿತ್ತಪದಾರ್ಥವು ತಿಳುವಳಿಕೆಗೆ ಬಾರದೆ ಅಡಗಿರುವದೆಂಬದಾಗಿ ತಿಳಿ ಯತಕ್ಕದ್ದು. ಈ ಅರ್ಥವು ಶಾಸ್ತ್ರಜ್ಞರಿಗು ಅನುಭವವಿಶಾರದ ರಿಗು ಸ್ಪಷ್ಟವಾಗಿ ತಿಳಿದು ಬರುವದು.

೧ ಕಂ॥ ತಾ॥ ಮನೋಹಂಕಾರಗಳ ವೃತ್ತಿಗಳು ಬೇರೆಬೇರೆ ವಿ ಧವಾದವುಗಳೆಂಬದಾಗಿ ಉದಹರಿಸಲ್ಪಟ್ಟತಷ್ಟೆ? ಇವುಗಳಲ್ಲಿ ಜಾಗ್ರ ದವಸ್ಥೆಯೊಳಗೆ ಘಟಪಟಾದಿ ಇದಮಾಕಾರವೃತ್ತಿಯನ್ನು ಹೊಂದಿ ರುವದು ಮನಸ್ಸು, ಅಹಮಾಕಾರವಾದ ವೃತ್ತಿಯನ್ನು ಪಡೆದಿರುವ ದು. ಅಹಂಕಾರವೆಂಬಲ್ಲಿ ಈ ಮನೋಹಂಕಾರಗಳಿಗೆ ಲಯವೆಂಬುವ ದು, ಹ್ಯಾಗಂದರೆ,-ಇದು ಮನಸ್ಸು, ಇದು ಅಹಂಕಾರವು, ಇದು

---

ಮಾದ ವೃತ್ತಿಪಡವುದಿದುತ್ಪಮಂ ಚಿತ್ತಮಂ ಹಂಮೆಧರಿಸು ತಿರ್ಕುಂ ॥

೨ ಮೂ॥ ಕಂ॥ ಪೊರಗಣವೃತ್ತಿಯಪಡೆದಿಹ ।

ಕರಣಮೆಮನಮಂತರಂಗವೃತ್ತಿಯಪಡೆದಿಹ ॥

ಮನೋವೃತ್ತಿಯುತ್ಪತ್ತಿಯು, ಇದು ಸ್ಥಿತಿಯು, ಇದು ಲಯವು, ಎಂತಲು, ಇದು ಅಹಮಾಕಾರವೃತ್ತಿಯು, ಇದು ಅದರ ಸ್ಥಿತಿಯು, ಇದು ಲಯವು ಎಂಬದಾಗಿ ತಿಳುವಳಿಕೆಯುಂಟಾದರೆ ಆಗಲೆ ಮನೋಲಯವು, ಅಹಂಕಾರದ ಲಯವು ಎರಡು ಉಂಟಾದಂತೆ ಆಯಿತು. ಅದು ಹ್ಯಾಗಂದರೆ,—ಮನೋವೃತ್ತಿಗಳ ಸ್ವರೂಪಗಳನ್ನು ತಿಳಿದಾಗಲೆ ಮನೋವೃತ್ತಿಯಲ್ಲವೂ ಆಯಿತೆಂದೇ ತಿಳಿಯಬೇಕು. ಅಹಮಾಕಾರವಾದ ವೃತ್ತಿಯನ್ನು ತಿಳಿದಾಗಲೆ ಆ ವೃತ್ತಿಯೊಳು ವ್ಯಾಪಕವಾಗಿರುವ ಸ್ವಸ್ವರೂಪಜ್ಞಾನವೂ ಉಂಟಾಗುತ್ತದೆ ಆದಕಾರಣ ಆಗಲೆ ಅಹಂಕಾರ ಲಯವೂ ಆಯಿತೆಂದೇ ತಿಳಿಯತಕ್ಕದ್ದು.

೩ ಜಂಪೆ॥ ತಾ॥ ಇನ್ನು ಹಿಂದೆ ಹೇಳಿದ ಪ್ರತ್ಯಕ್ಷಾಂಶವನ್ನೆ ಚೆನ್ನಾಗಿ ವಿವರಿಸುತ್ತಾನೆ. ಮನಸ್ಸಿನೊಡನೆ ಆತ್ಮನು ಕೂಡುತಿರಲಾಗಿ ಬಳಿಕ ಆ ಚೈತನ್ಯ ಸ್ವರೂಪವಾಗಿರುವ ಆತ್ಮನೊಡನೆ ಕೂಡಿದ ಮನಸ್ಸು ಎಂಬುವದು ಯಾವದುಂಟೊ ? ಆ ಮನಸ್ಸೇ ಇಂದ್ರಿಯಗಳೊಡನೆ ಸೇರಿದಂಥಾದ್ದಾದರೆ ಆಗಲೆ ಮನಸ್ಸಿನೊಡನೆ ಕೂಡಿದ ಇಂದ್ರಿಯಗಳು ತಮ್ಮಮಷ್ಟಕ್ಕೆ ತಾವೇ ಉಚಿತವಾಗಿರುವ, ।೧॥ ಇಂದ್ರಿಯಾರ್ಥಗಳ ಅಂದರೆ, ವಿಷಯಗಳ ಸಂಗಡ ಸೇರಿ ತರುವಾಯ ಪ್ರಕಾಶಿಸುತ್ತದೆ ಯಾದರೂ ಆ ಪ್ರಕಾಶಿಸುವ ಸಮಯದಲ್ಲಿ ಪ್ರಕಾಶಕವಾದ ವಸ್ತುವಿನ ಯಥಾರ್ಥ ಸ್ವರೂಪವು ತಿಳಿಯದಿರುವ ಕಾರಣ, ॥೨। ಸರ್ವದಾ ಪ್ರತ್ಯಕ್ಷವಾಗಿರುವ ಪರಮಾತ್ಮನನ್ನು ಪರೋಕ್ಷವಾಗಿರುವನೆಂಬರು. ಯಾತಕಂದರೆ,-ಭಾನಸ್ವರೂಪವಾಗಿರುವ ಆ

---

ಕರಣಮಹಂಕೃತಿಮಾನಸ ।
ಮರಣಸಂಜ್ಞಾನಮಿದರಮರಣಂಜ್ಞಾನಂ ॥

೩ ಮಾ॥ ಜಂ॥ ಮನದೊಡನೆಯಾತ್ಮನಾಮನ ಮಿಂದ್ರಿಯಗಳೊಡನೆ ಮಿನಯಮಾಗಲುವೀರ್ಯಗಣ ಮುಚಿತಮಾದಾ ॥೧॥
ಗೋಚರಗಳೊಡನೆತದ್ಗೋಚರಗಳುಂ ಬಳಿಕರೋಚಿಸುವ ವೇಳೆಯಿಂದರೂಪಿಲ್ಲದಿರಲೂ ॥೨॥

ತ್ಮನು ತೋರಿಕೆಗೆ ಗೋಚರವಾಗುವದಿಲ್ಲವು. ಅದು ಯಾತಕ್ಕೆಂದರೆ, ರಾತ್ರಿಕಾಲದೊಳು ಪದಾರ್ಥಗಳು ಪ್ರತ್ಯಕ್ಷದಲ್ಲಿದ್ದಾಗ್ಯೂ, ಮತ್ತು ಆ ಪದಾರ್ಥಗಳ ಪ್ರಕಾಶ ಮಾಡಿಕೊಡತಕ್ಕ ನೇತ್ರೇಂದ್ರಿಯವು ಸಮೀಪದಲ್ಲಿಯೆ ಜಾಗರೂಕವಾಗಿದ್ದರೂ ಕತ್ತಲಿಯೆಂಬ ಪ್ರತಿಬಂಧಕ ಸಾಮಗ್ರಿಯು ಸಮೀಪದಲ್ಲಿರುವದ್ದರಿಂದ ವಸ್ತುವಿನ ಯಥಾರ್ಥಸಿದ್ಧಿಯು ಹ್ಯಾಗೆ ಗೋಚರಿಸುವದಿಲ್ಲವೊ? ಅದರಂತೆಯೇ ನಾವು ಜಾಗ್ರದವಸ್ಥೆಯೊಳು ಬೆಳಕಿನಲ್ಲಿಯೆ ಪದಾರ್ಥಗಳನ್ನು ನೋಡಿದಾಗ್ಯೂ ಸರ್ವತ್ರ ಆತ್ಮ ಪದಾರ್ಥ ಪೂರ್ಣವಾಗಿದ್ದರು ಅಜ್ಞಾನವೆಂಬ ಕತ್ತಲೆ ಪ್ರತಿಬಂಧಕವಾಗಿರುವದರಿಂದ ಪೂರ್ಣಾತ್ಮವಸ್ತು ಸ್ವರೂಪಸ್ಥಿತಿಯು ತೋರಿಬರುವದಿಲ್ಲ. ಆದಕಾರಣ ಭಾವನಾದಾರ್ಢ್ಯದಿಂದ ಆತ್ಮವಸ್ತು ಪ್ರಕಾಶವುಂಟಾಗುತ್ತಿರಲಾಗಿ ಆಗ ಪಂಚಭೂತಗಳು ಮತ್ತು ಇವುಗಳ ಕಾರ್ಯಗಳ ಕಾರ್ಯಗಳು ಸಹ ಪರಬ್ರಹ್ಮಸ್ವರೂಪವನ್ನು ಹಿಂದುಮಾಡಿ ಅಂದರೆ, ಮರೆಮಾಡಿ ತಾವುಮಾತ್ರ ಮುಂದೆಬಂದು ಗೋಚರಿಸುತ್ತಿರಲಾರವು. ॥೩॥ ಚಿದಾತ್ಮಾಭ್ಯಾಸದ ದಾರ್ಢ್ಯದಿಂದ ಸರ್ವತ್ರ ಚಿದಾತ್ಮನೆ ಪ್ರಕಾಶಿಸುತ್ತಿರಲಾಗಿ ದೃಶ್ಯವಾಗಿರುವ ಅಂದರೆ, ಪಿಪೀಲಿಕಾದಿ ಬ್ರಹ್ಮಪರ್ಯಂತವಿರುವ ಸಮಸ್ತ ಪ್ರಪಂಚವೂ ಕೇವಲ ನಿರ್ಮಲಚಿದಖಂಡಾತ್ಮಸ್ವರೂಪವಾಗಿಯೇ ತೋರಿಬರುವದಲ್ಲದೆ ತದ್ವ್ಯತಿರಿಕ್ತವಾಗಿ ಮತ್ತೆ ಯಾವದೊಂದು ಪದಾರ್ಥಲೇಶವೂ ತೋರುವದಿಲ್ಲವು, ॥೪॥ ಈ ಸಚ್ಚಿದಾನಂದಾತ್ಮತೆಯೆ ಪರಬ್ರಹ್ಮ ಸ್ವರೂಪವು ಯೆಂಬದಾಗಿ ನಿರ್ಧರಿಸಿ ಅದಕ್ಕಾಚ್ಛಾದಕವಾಗಿರುವ ಮಾ

---

ಪರಮನಪರೋಕ್ಷನೆಂಬರು ಹುದೃಢವಾಗುವುದು ಅರಿವಪಿಂಡಿಕ್ಕಿಮುಂದಿಡಿದು ಭೂತಗಳೂ ॥೩॥

ಭೂತವೈಕೃತಮಾದ ಧಾತ್ರಕೋಶಂತದನು ಭೂತಿಯಿಂಚಿನ್ಮಯವೆಧಾತುವಂಸರ್ವಂ ॥೪॥

ಈಆತ್ಮನೆಬ್ರಹ್ಮವೆಂದುಜೀವಾಕ್ಯೈತಿಂಬ ಮಾಯೆಯಂ ಮೇಲಾಂತು ಕಾಯಮಾತ್ರದಲಿ ॥೫॥

ಯೆಯನ್ನು ತಿಳುವಳಿಕೆಯೆಂಬ ಪ್ರಕಾಶದಿಂದ ದೂರವಾಗಿ ತೊಲಗಿ ಹೋಗುವಂತೆಸಗಿ ಈ ಆತ್ಮನೆ ಅವಿದ್ಯಾಕಲ್ಪಿತವಾದ ಜೀವತ್ವದ ಸಂಬಂಧದಿಂದ ಸ್ಥೂಲ, ಸೂಕ್ಷ್ಮ ಕಾರಣಗಳೆಂಬ ಶರೀರತ್ರಯದಲ್ಲಿಯೂ, ॥೫॥ ಅವಸ್ಥಾದಿ ಭೇದಗಳಿಂದಲು ಅದಕ್ಕೆ ಅನುಗುಣವಾಗಿರುವ ನಿವಾಸಭೇದದಿಂದಲು ಅನವರತವೂ ಕ್ರೀಡಿಸುತಲಿರುವನು. ಈ ಪ್ರಕಾರವಾಗಿರುವವನು ಆ ಪರಬ್ರಹ್ಮನಲ್ಲದೆ ಅದಕ್ಕಿಂತಲು ವ್ಯತಿರಿಕ್ತವಾದ ಪದಾರ್ಥವಲ್ಲವು. ಆ ಪರಮಾತ್ಮನೆ ನಾನು ಎಂಬ ಪದಾರ್ಥವಾಗಿರುವದು. ಪುರುಷಶಬ್ದ ವಾಚ್ಯನೂ ಆತನೆ ಎಂದೀಪ್ರಕಾರವಾಗಿ ಅಶೇಷವಾಗಿರುವ ಆ ಆತ್ಮಸ್ವರೂಪವನ್ನು, ॥೬॥ ಯಾವನಾದರೆ ವಿಚಾರವಿವೇಕಗಳಿಂದ ನಿಶ್ಚಲವಾಗಿ ತಿಳಿಯುವಂಥವನಾಗುತ್ತಾನೆಯೊ ? ಅಂಥವನಿಗೆ ದೇಹಾತ್ಮ ಭ್ರಮೆಯೆಂಬುವದು ಅಳಿದು ಹೋಗಿರುತದೆ ಯಾದಕಾರಣ ಅಪಾರಮಾರ್ಥಿಕವಾಗಿಯು ಜಡವಾಗಿಯು ಇರುವ ದೇಹಕ್ಕೆ ನಾನಾವಿಧವಾದ ಉಪದ್ರವಾದಿಗಳುಂಟಾದವೆಂದು ಎಂದಿಗಾದರೂ ವ್ಯಥೆ ಪಡುವಂಥವನಾಗುತ್ತಾನೆಯೇ ? ವಿವೇಕಿಯಾಗಿರುವದರಿಂದ ಒಂದುಕಾಲಕ್ಕು ವ್ಯಥೆಪಡುವದಿಲ್ಲವು ॥೭॥ ಈ ರೀತಿಯಾಗಿ ಸಾರಾಸಾರ ವಿವೇಚನೆ ಮಾಡುವದರಲ್ಲಿ ಚತುರನಾದ ಕುಶಲಿಯು ಯಾವ ವಿಧವಾದ ಅಭಿಪ್ರಾಯದಿಂದ ಏನನ್ನು ಇಚ್ಛೆಯಿಸುವಂಥವನಾಗಿ ಯಾವಕಾರ್ಯಗಳನ್ನು ಮಾಡುವನು ? ಶ್ರುತಿಮಸ್ತಕಗಳಾದ ಉಪನಿಷತ್ತುಗಳು ಆನಂದ ಘನಾತ್ಮ ಸ್ವರೂಪಕ್ಕಿಂತಲು ಇತರ ವಸ್ತುವಿಲ್ಲವೆಂಬದಾಗಿಯು ತೋರಿಬರುವದಲ್ಲವು, ಮಾ

---

ವಿಹರಿಸುದದುಬ್ರಹ್ಮವೆಂದು ಈಪುರುಷನೆ ಸಹಜಮಾಗಾನೆನು
ತಸಾರಿ ಆತ್ಮನನೂ ॥೬॥
ಆವಂತಿಳಿವನೆವಂ ಯಾರಕ್ಕಾ ದುಃಖಿ ಬೇವಂತೆ ಮಾಳ್ಪನೆಬೆದರಿ
ದೇಹವನೂ ॥೭॥
ಬಯಸಿಮಾಡುವನೇನ ಭಾವದಿಂದೆಂದುಶ್ರುತಿಚಯವು ಘೋಷಿ
ಪ್ಪುದರಿಂಚತುರನೆಂತೆಂತೂ ॥೮॥

ಯಾ ವಿಜೃಂಭಿತವಾದದ್ದು, ಆದುದರಿಂದಲೇ ಹೇಯವಾದದ್ದೆಂಬದಾಗಿ ಘಂಟಾಘೋಷವಾಗಿಯು ಸಾರುತ್ತಿರಲಾಗಿ ವಿವೇಕಿಯು ಪುನಃ ಆ ದುರ್ಮಾರ್ಗದಲ್ಲಿಯೆ ಪ್ರವರ್ತಿಸಬಲ್ಲನೆ? ಒಂದು ಕಾಲಕ್ಕು ಪ್ರವರ್ತಿಸುವದಿಲ್ಲವು ॥೪॥ ಪೃಥಿವ್ಯಾದಿ ಪಂಚಭೂತ ಕಾರ್ಯವಾಗಿರುವ ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯಾದಿ ಕೋಶಗಳಿಂದ ಆವೃತವಾಗಿ ಅಥವಾ ಪೃಥಿವ್ಯಪ್ತೇಜೋವಾಯ್ವಾಕಾಶಗಳೆಂಬ ಪಂಚಭೂತಗಳಿಂದ ಆವರಿಸಲ್ಪಟ್ಟಿರುವದಾಗಿ ತೋರುವದರಿಂದ ಪರಮಾರ್ಥವಾಗಿ ಶಾಸ್ತ್ರಗಳ ಮೂಲಕವಾಗಿಯು, ಅನುಭವದ ಮೂಲಕವಾಗಿಯು, ವಿಚಾರಮಾಡಿದರೆ ಆವರಣಗಳೆಂದು ಭಾಸಮಾನವಾಗಿರುವ ಸಮಸ್ತವನ್ನು ನುಂಗಿ ಅಂದರೆ, ತನ್ನಲ್ಲಿ ಅಣಗಿಸಿಕೊಂಡು ನಿಷ್ಕಲ್ಮಷವಾಗಿರುವ ಯಾವ ವಸ್ತುವುಂಟೋ? ಅಂತಪ್ಪ ನಿರ್ಮಲಾತ್ಮಸ್ವರೂಪವೇ ನೀನೆಂದು ತಿಳಿಯು. ॥೯॥

೪ ಮ॥ ತಾ॥ ಈ ಪ್ರಕಾರವಾಗಿ ಪ್ರತ್ಯಕ್ಷಪ್ರಮಾಣ ಪದ್ಧತಿಯನ್ನು ಬುದ್ಧಿಗೆ ಅವಗಾಹನ ವಾಗುವಂತೆ ನಿರ್ಮಲವಾಗಿ ವಿಶದಪಡಿಸಿ ತರುವಾಯ ಇನ್ನೊಂದು ಬಗೆಯಿಂದ ಹೇಳುತಲಿದ್ದಾನೆ ಅದೆಂತೆಂದರೆ,

ಇಂತು ಪ್ರತ್ಯಕ್ಷ ಪ್ರಮಾಣ ಪದ್ಧತಿಯು ಮುಗಿದುದು.
ಪದ್ಧತಿ ೧೭ಕ್ಕೆ ಮಂಗಳಮಸ್ತು.

---

ಆವರಣಮುಳಿದುಭುವನಾವಳಿಯನ್ನುಂಗಿ ಜೀರ್ಣಾವಸ್ಥೆಯೆಂದಿರುವುದದುನೀನೇಂ ॥೯॥

೪ ಮೂ॥ ಮ॥ ಇಂತೆಂದು ಪ್ರತ್ಯಕ್ಷಪ್ರಮಾಣ ಪದ್ಧತಿಯಂ ಮತಿಗೆ ಸಮ್ಮತಂಬಡಿಸಿ ಇನ್ನೊಂದು ಪ್ರಕಾರಮಂ ಪೇಳುತಿರ್ದಪನದೆಂತೆನೆ.

ಇಂತು ಪ್ರತ್ಯಕ್ಷಪ್ರಮಾಣ ಪದ್ಧತಿಯು ಮುಗಿದುದು.
ಪದ್ಧತಿ ೧೭ಕ್ಕೆ ಮಂಗಳಮಸ್ತು.

## ೧೩. ಅನುಮಾನ ಪ್ರಮಾಣ ಪದ್ಧತಿ ಪ್ರಾರಂಭವು.

೧ ಅಟತಾಳ॥ ತಾ॥ ಪೂರ್ವದೊಳು ಪ್ರತ್ಯಕ್ಷ ಪ್ರಮಾಣದಿಂದ ವಿಶದಪಡಿಸಿದ ಯಾವಪರಬ್ರಹ್ಮ ಪದಾರ್ಥವುಂಟೊ? ಅಂತಪ್ಪ ಅಮೋಘವಾದ ವಸ್ತುವು ವೇದಶಿರಸ್ಸುಗಳಾದ ಉಪನಿಷದ್ವಾಕ್ಯಗಳಿಗು, ಮತ್ತು ಮನಸ್ಸಿಗು ಅಗೋಚರವಾಗಿರುವದೆಂಬದಾಗಿ ತೈತ್ತಿರೀಯ ಶ್ರುತಿಯು ಭೇರಿಶಬ್ದದಂತೆ ಘೋಷಿಸುತಲಿರುವುದು. ಹೀಗಿರುವಲ್ಲಿ ಅಂಥ ಬ್ರಹ್ಮಪದಾರ್ಥವಿರುವದೆಂದು ಹ್ಯಾಗನಂಬುವದೆಂಬದಾಗಿ ಪ್ರಶ್ನೆ ಬಂದರೆ ಆ ಸಮಯದಲ್ಲಿ ವೇದಪ್ರಾಮಾಣ್ಯವಾದಿಗಳನ್ನು ಕುರಿತು ವೇದವನ್ನು ಪ್ರಮಾಣವಾಗಿ ಉದಹರಿಸಿ ಅವರಿಗುಂಟಾಗಿರುವ ಸಂದೇಹವನ್ನು ನಿವೃತ್ತಿಮಾಡಬಹುದು. ವೇದಪ್ರಾಮಾಣ್ಯವನ್ನು ಹೇಳದ ಇತರ ಮತದವರಿಗೆ ಅನುಮಾನ ಪ್ರಮಾಣದಿಂದಲು ಸಾಧಿಸಿ ಕೊಡಬಹುದೆಂಬದಾಗಿ ಹೇಳುತ್ತಾನೆ. ಅದೆಂತೆಂದೊಡೆ, ಲೋಕದಲ್ಲಿ ಯಾವದೊಂದು ಪದಾರ್ಥವನ್ನು ನೋಡಿದಾಗ್ಯೂ ಪ್ರತಿವಂದಕ್ಕು ಆಯಾಯ ಪದಾರ್ಥವನ್ನು ಕಲ್ಪಿಸಿದವನು ಒಬ್ಬನುಂಟೆಂಬದಾಗಿ ಸಂದೇಹವಿಲ್ಲದೆ ವಿವೇಕಶೂನ್ಯನು ಕೂಡ ಊಹಿಸಬಹುದು. ಆದರೆ ಇಂತು ವಿಚಿತ್ರ ರಚನೆಯಿಂ ದೊಡಗೂಡಿದ ಪ್ರಪಂಚಕರ್ತೃತ್ವ ವೆಂಬುವದು ಸಾಮಾನ್ಯವಾದ ಜೀವನಿಗೆ ಸಮನಿಸುವದಿಲ್ಲ ವಾದಕಾರಣ ಅಂಥಾಕರ್ತನು ಈಶ್ವರನೆಂಬದಾಗಿಯೇ ನಿಶ್ಚಯಿಸಬೇಕು. ಹೀಗೆ ಜಗತ್ತಿನ ಸೃಷ್ಟಿಯನ್ನು ಇದಕ್ಕೆ ಕರ್ತನಾದ ಪರಮೇಶ್ವರನನ್ನು ಸಾಧಿಸಬಹುದು. ಹೀಗೆಯೆ ಈ ಸಮಸ್ತ ಪ್ರಪಂಚದ ಸ್ಥಿತಿಯಿಂದಲು ಪರಬ್ರಹ್ಮನನ್ನು ಅನುಮೇಯಿಸಬಹುದು. ಹಾಗೆಯೇ ಪ್ರಪಂಚದ ಲಯವನ್ನು ಹಿಡಿದು ಅಂದರೆ ಊಹಿಸಲಶಕ್ಯವಾಗಿರುವ ಈ ಪ್ರಪಂಚವನ್ನು ನಾಶಮಾಡಬೇಕಾದರೆ ಸಾಮಾನ್ಯಜೀವನಿಂದ ಅಸಾಧ್ಯವಾಗಿರು

---

೧೩. ಅನುಮಾನ ಪ್ರಮಾಣಪದ್ಧತಿ ಪ್ರಾರಂಭವು.

೧ ಮೂ॥ ಅಟತಾಳ॥ ವಚನಮನಗಳಿಗಳವಡದಪರವಸ್ತುವನ್ನು
ವಿಶ್ವದ ರಚನೆಯಿಂಸ್ಥಿತಿಯಿಂ ವಿಲಯದಿಂದರಿಯಬಹುದೊ ॥೧॥

ವದರಿಂದ ಒಬ್ಬಾನೊಬ್ಬ ಮಹಾಪುರುಷನಿಂದಲೇ ಆಗಬೇಕಾಗಿರುವದು. ಆ ಪುರುಷೋತ್ತಮನೇ ಪರಮಾತ್ಮನೆಂದು ಸಾಧಿಸಬಹುದು. ಹೀಗೆ ಜಗತ್ತಿನ ಸೃಷ್ಟಿ ಸ್ಥಿತಿ ಲಯಗಳೆಂಬ ಮೂರು ಗತಿಗಳಿಂದಲೂ ಅನುಮಾನವನ್ನು ಹೇಳಿ ಪರಮೇಶ್ವರ ಸಿದ್ಧಿಯಾಗುವದು. ಆದರೆ ಪ್ರಪಂಚವನ್ನುಂಟುಮಾಡ ತಕ್ಕವನಾಗಿಯು, ಲಯಮಾಡತಕ್ಕವನಾಗಿಯು, ನಾಶ ಮಾಡತಕ್ಕವನಾಗಿಯು, ಇರುವ ಪುರುಷನು ಪರಮೇಶ್ವರನೆಂಬದಾಗಿ ಊಹಿಸಿ ಹೇಳುವದಾದರೆ ಅವನಿಗೊಬ್ಬ ಕರ್ತನು ಇರಲೆಂದು ಆಶಂಕೆಯುಂಟಾದರೆ ಆಗ ಈ ಪರಮಪುರುಷನಿಗೆ ಮತ್ತೊಬ್ಬಕರ್ತನು ಆತನಿಗೆ ಇನ್ನೊಬ್ಬಕರ್ತನು ಅವನಿಗೆ ಮಗದೊಬ್ಬ ಕರ್ತನೆಂಬದಾಗಿ ಎಲ್ಲಿಗೂ ವಿಶ್ರಾಂತಿಯೆಂಬುವದು ಸುತರಾಂ ಸಂಭವಿಸದೆ "ಅನವಸ್ಥಾ,, ಎಂಬ ಶಾಸ್ತ್ರದೋಷವು ಬಂದು ವದಗುವದಾದ ಕಾರಣ ಒಬ್ಬ ಪುರುಷನಲ್ಲಿಯೆ ಸೃಷ್ಟಿ ಸ್ಥಿತಿ ಲಯಗಳನ್ನು ನಿಲ್ಲಿಸಿಕೊಂಡು ಆತನೆ ಪರಬ್ರಹ್ಮನೆಂಬದಾಗಿ ತಿಳಿಯಬೇಕೆಂಬುವದು ಅಂತರಂಗವು. ‖೧‖ ಈ ಮೇರಿಗೆ ಉದಹರಿಸುವ ಸಂದರ್ಭದಲ್ಲಿ ಒಂದು ಪಕ್ಷನಾಗಿಯು, ಒಂದು ಸಾಧ್ಯವಾಗಿಯು, ಮತ್ತೊಂದು ಹೇತುವಾಗಿಯು, ಇನ್ನೊಂದು ದೃಷ್ಟಾಂತವಾಗಿಯು ಮೇಲೆಮೇಲೆ ಸ್ಪಷ್ಟವಾಗಿ ತೋರಿಬರುವದು. ‖೨‖ ಯಾವ ಬಹ್ಮಾನಂದದ ಲೇಶಮಾತ್ರದಿಂದಲೇ ಈ ಸಮಸ್ತವಾದ ಪ್ರಪಂಚವೂ ಜೀವಿಸುತಲಿರುವದು ಇದರಲ್ಲಿಯು ಮೊದಲನೇಯದು ಶರೀರಗಳಾಗಿಯು, ಎರಡನೆಯದು ಭೂತವಿಕಾರಗಳಾಗಿಯು, ಕಂಡುಬರುವದು. ‖೩‖ ಆದರೆ ಪೃಥಿವಿ, ಜ

---

ಎಂದುನಿಶ್ಚೈಸುವ ದೆಶೆಯೊಳೊಡನೊಂದು ತಿಹುದುಕಾರಣ ।
ಮೊಂದುದೃಷ್ಟಾಂತಂಪ್ರತಿಜ್ಞೆಯುಮೇಲೆಮೇಲೆ ‖೨‖
ಆದರಸುಖದಿಂ ಜೀವಿಸುವದೀ ಸ್ತ್ರಯನಲೂ । ಗಾತ್ರವುಮೊ
ದಲನೆಯದೆರಡನೆಯದೆ ಭೂತದಕೃತಿಯಾ ‖೩‖
ಮಿಕ್ಕನಾಲ್ಕರತೋರಲಭ್ರದಿಮೆರೆಯದಿಂತೂ ದೋಷವಾ । ದ
ಕ್ಕಿದಕ್ಕರದಂತೆಮಾಯೆಯುತಗುಲೆಸೆಯದೂ ‖೪‖

ಲ, ತೇಜಸ್ಸು, ವಾಯು, ಎಂಬ ಭೂತ ಚತುಷ್ಟಯವು ಆಕಾಶವೆಂಬ ಮಹಾಭೂತದಲ್ಲಿ ಇದ್ದಾಗ್ಯೂ ಅವುಗಳ ಸಂಬಂಧವೆಂಬುವದು ಅಂದರೆ, ಇವುಗಳ ದೋಷಗಳಾಗಲಿ, ಗುಣಗಳಾಗಲಿ ಹ್ಯಾಗೆ ಆಕಾಶಕ್ಕೆ ಇಲ್ಲವೊ ಅದರಂತೆ ಈ ಶರೀರಾದಿ ಪದಾರ್ಥಗಳ ಗುಣಗಳಾಗಲಿ ದೋಷಗಳಾಗಲಿ ಆನಂದಘನವಾಗಿರುವ ವಸ್ತುವಿಗೆ ಸುತರಾಂ ಇಲ್ಲವೆಂಬವಾಗಿ ತಿಳಿಯುವದು, ಅಂದರೆ, ಮಾಯಾಸಂಬಂಧವು ಆತ್ಮನಿಗಿಲ್ಲವೆಂದಾಶಯವು. ॥೪॥ ಈ ಮೇಲೆ ಉದಹರಿಸಿದಂತೆ ಹೇಳುವವರಿಂದ ಪೃಥಿವ್ಯಾದಿ ಭೂತ ಚತುಷ್ಟಯಕ್ಕೆ ಆಕಾಶವೆಂಬುವದು ಹ್ಯಾಗೆಆಶ್ರಯವೊ? ಅದರಂತೆ ಪೃಥಿವ್ಯಾದಿ ಪಂಚಭೂತಗಳಿಗೂ ಇವುಗಳ ಕಾರ್ಯಜಾಲಕ್ಕು ಆತ್ಮಪದಾರ್ಥವೇ ಅಧಿಷ್ಠಾನ ಭೂತವಾಗಿರುವ ದೆಂಬದಾಗಿ ಅರ್ಥವಾಗುವದು. ಅದೆಂತೆಂದರೆ,—ಆಧಾರ ವಸ್ತುವಿಲ್ಲದೆ ಆ ಧೇಯವಸ್ತುವಿಗೆ ಪ್ರಕಾಶವೆಂಬುವದು ಸಂಬಂಧಿಸುವದಿಲ್ಲ, ಇದರ ವಿವರವೆಂತೆಂದೊಡೆ, ಲೋಕದಲ್ಲಿ ಯಾವದಾದರೊಂದು ಸ್ಥಳದಲ್ಲಿ ಒಂದು ಕಪ್ಪೆ ಚಿಪ್ಪನ್ನು ನೋಡಿ ಅದರಥಾಳಥಳ್ಯದಿಂದ ಇದುಬೆಳ್ಳಿಯೆಂಬದಾಗಿ ಭ್ರಾಂತಿಯುಂಟಾಗುವದು. ಆ ಸ್ಥಳದಲ್ಲಿ ಬೆಳ್ಳಿಯೆಂಬುವದು ಆಧೇಯವು. ಕಪ್ಪೆ ಚಿಪ್ಪೆಂಬುವದು ಆಧಾರವು. ಆಧಾರ ಭೂತವಾಗಿರುವ ಶುಕ್ತಿಯು ಇಲ್ಲದೆ ಹೋದರೆ ಆ ಧೇಯುನ ಭ್ರಾಂತಿಬರುವದಕ್ಕೆ ನಿಮಿತ್ತವಿಲ್ಲವು. ಹಾಗೆಯೇ ಪ್ರಕೃತದಲ್ಲಿಯೂ ಬ್ರಹ್ಮ ಪದಾರ್ಥವು ಆಧಾರವಾಗಿ ಇಲ್ಲದೆ ಹೋಗಿದ್ದರೆ ಪ್ರಪಂಚದ ಭ್ರಾಂತಿಯೆಂಬುವದು ಉಂಟಾಗುತ್ತಲೆ ಇರಲಿಲ್ಲ. ಆದ್ದರಿಂದ ಬ್ರಹ್ಮ ಪದಾರ್ಥವು ಅಧಿಷ್ಠಾನವೆಂದರಿಯುವದು. ಆದ್ದರಿಂದ ಶಾಸ್ತ್ರಜ್ಞರಾಗಿಯು ಅನುಭವ ಪಾರಗಾಮಿಗಳಾಗಿಯೂ ಇರುವ ಸಾಧುಗಳು ಇದೊಂದಂಗ ವೆಂಬದಾಗಿ ಒಪ್ಪಿಕೊಳ್ಳುತ್ತಾರೆ. ॥೫॥ ಈ ಹಿಂದೆ ಉದಹರಿಸಿದ ಅರ್ಥದಲ್ಲಿ ಶಾಸ್ತ್ರಜ್ಞಾನವುಳ್ಳವರಾಗಿಯು, ವಿಚಾರ ಪರರಾಗಿಯು ಇರುವ ಮಹಾಯೋ

---

ಯೆನುವದೀಪ್ರಕೃತಿಯುತದಧಿಕರಣಿತವೆಂದು । ಪೇಳ್ವದೆಘ
ನರುಮೂರನೆಯಂಗವೆಂದದನನುಕರಿಸಿಪರೂ ॥೫॥

ಗಿಗಳು, ಗುರುಸೇವೆಯಿಂದಲು, ಅನವರತವೂ, ಮಾಡುವ ಉಪದೇಶಾನುಗುಣವಾದ ಅಭ್ಯಾಸದ ಬಲದಿಂದ ಪರಿಪಕ್ವವಾಗಿರುವ ಈರೀತಿಯಾದ ಬುದ್ಧಿಯು ಫಲವಾಗಿ ಸಮನಿಸುವದಲ್ಲದೆ ಇತರರಿಗೆ ಸಂಭವಿಸವಿಸುವದಿಲ್ಲವು. ವಳಹೊಕ್ಕು ವಿಚಾರಮಾಡದೆ ಮೇಲೆಮಾತ್ರ ಶಬ್ದಾಡಂಬರದಿಂದ ವಿಚಾರಮಾಡುವಂಥವರಿಗೆ ಪ್ರತಿಸಂಗತಿಗಳಲ್ಲಿಯು, ಸಂಶಯದ ರಾಶಿಯು ಬಂದುವದಗುವದು. ಯಾರಾದರೆ ನಿಸ್ಸಂದೇಹಿಗಳೋ? ಅವರೇ ಆತ್ಮಜ್ಞಾನಿಗಳೆಂದು ಬಲ್ಲವರು ಹೇಳುತ್ತಿರುವರು. ||೭|| ಆತ್ಮವೆಂಬ ವಸ್ತುವು ಇಂದ್ರಿಯಗಳು ಮತ್ತು ಇವುಗಳ ಸಾಧನಗಳು ಮುಂತಾಗಿ ಯಾವದೊಂದು ಇಲ್ಲದ್ದಾಗಿ ಇರುವದರಿಂದ ಅಂದರೆ, ಕರಣಕಳೇ ಬರಶೂನ್ಯವಾಗಿರುವದರಿಂದ ಇಂತಪ್ಪ ಪರಾತ್ಮನನ್ನು ಮೇಲೆ ಹೇಳಿದ ಮೇರಿಗೆ ಅನುಮಾನ ಪ್ರಮಾಣದಿಂದ ಸಾವಧಾನರಾಗಿ ಸೂಕ್ಷ್ಮದೃಷ್ಟಿಯಿಂದ ಭಾವಿಸಿ ಅಂಥ ಅಭೇದಭಾವನೆಯನ್ನು ಕ್ರಮಕ್ರಮವಾಗಿ ದಾರ್ಢ್ಯನವನ್ನು ಹೊಂದಿಸುತ ಬಂದರೆ ಆಗಲೆ ಸ್ವಾತ್ಮಾನುಭವ ರೂಪವಾಗಿರುವ ಕೈವಲ್ಯವೆಂಬುವದು ಸಮನಿಸಿದುದು ಎಂಬದಾಗಿ ತಿಳಿಯಬಹುದು.

೧ ವಚನ|| ತಾ|| ಈ ಪ್ರಕಾರವಾಗಿ ಅನುಮಾನ ಪ್ರಮಾಣ ಸರಣಿಯನ್ನು ಸುಲಭವಾಗಿ ಬೋಧೆಯಾಗುವಂತೆ ಸಯುಕ್ತಿಕವಾಗಿರು

---

ಇಲ್ಲಿಪರಿಣತಮಾದಮತಿಯೊಳಗಿಲ್ಲಮಾಗೆಸಂದೆನ ! ಮಲ್ಲಸತ್ಫಲ
ಮಿದಕೆನುವರುವಿಬುಧರಹರೂ ||೭||
ಆತುಮನುತಾ ಸತ್ಯಯದೃಷ್ಟಿ ತಾಳಿಯಾದದೆಸೆಯಿಂ । ದೀತೆರ
ದೊಳನುಮಾನವಿಶೇಷುಭವೆಣಿಸಲಕ್ಕುಂ ||೭||

೨ ಮೂ|| ವ|| ಇಂತೆಂದನುಮಾನ ಪ್ರಮಾಣಪದ್ಧತಿಯಂ ಸಮಾಧಿಯಪ್ಪಂತೆ ಬೋಧಿಸಿ ಇನ್ನೊಂದು ಪ್ರಕಾರಮಂ ಪೇಳುತಿರ್ದಪನದೆಂತೆನೆ.

ಇಂತು ಅನುಮಾನ ಪ್ರಮಾಣಪದ್ಧತಿಯು ಮುಗಿದುದು.

ಪದ್ಧತಿ ೧೭ಕ್ಕೆ ಮಂಗಳಮಸ್ತು.

ವಂತೆಯು ವಿಶದಪಡಿಸಿ ಇನ್ನೊಂದು ಮಾರ್ಗದಿಂ ಉದಹರಿಸುತಲಿಫ ನೆ. ಅದರ ಪರಿಯೆಂತೆಂದರೆ,

ಅನುಮಾನ ಪ್ರಮಾಣ ಪದ್ಧತಿಯು ಮುಗಿದುದು.

ಪದ್ಧತಿ ೧೭ಕ್ಕೆ ಮಂಗಳಮಸ್ತು.

## ೧೮ ಉಪಮಾನ ಪದ್ಧತಿ ಪ್ರಾರಂಭವು.

೧ ಜಂಪೆ ॥ ತಾ ॥ ಲೋಕದಲ್ಲಿ ನಿರ್ಮಲವಾಗಿಯು, ನಿರ್ವಿಕಾರ ವಾಗಿಯೂ ಇರುವ ಜಲವು ಬಲವತ್ತರವಾದ ಅಗ್ನಿಯ ಜ್ವಾಲ ಸಂಯೋಗದಿಂದ ಹ್ಯಾಗೆ ಉಷ್ಣತ್ವವೆಂಬುವ ತನ್ನಲ್ಲಿಲ್ಲದ ಗುಣವ ನ್ನು ಹೊಂದುವದೋ ? ಅದರಂತೆಯೇ ನಿರ್ಮಲವಾಗಿಯು ನಿರ್ವಿಕಾ ರವಾಗಿಯೂ ಇರುವ ಅಧಿಷ್ಠಾನಭೂತವಾದ ಪರಬ್ರಹ್ಮವೆಂಬ ಅಮೋ ಘವಾದ ಪದಾರ್ಥದ ಸಂಬಂಧದ ದೆಸೆಯಿಂದ, ॥೧॥ ನಾನಾವಿಧವಾದ ದೇಹಗಳು, ಇಂದ್ರಿಯಗಳು, ಮನಸ್ಸು, ಅಹಂಕಾರವು, ಇವುಗಳು ಕ್ರಮವಾಗಿ ವಾಸನಾತಿಶಯದಿಂದ ಪರಂಪರೆಯಿಂದ ಕೂಡಿಕೊಂಡಿರು ವದೆಂದು ತಿಳಿಯತಕ್ಕದ್ದು. ॥೨॥ ಸ್ವತಃ ಪ್ರಕಾಶಮಾನವಾದ ಚಿತ್ಪ ದಾರ್ಥದೊಳಗೆ ಕಲ್ಪಿತವಾದ ಅಧ್ಯಾಸವೆಂಬುವದು ನಾಲ್ಕು ಬಗೆಯಾ ಗಿರುವದು. ಆದರೆ ಈ ನಾಲ್ಕು ಬಗೆಯಾದ ಅಧ್ಯಾಸಗಳೊಳಗೆ ಮೂ ರುವಿಧವಾದ ಅಧ್ಯಾಸಗಳು ಸ್ವಲ್ಪವಾದ ಪ್ರಯತ್ನದಿಂದ ನಿವೃತ್ತಿಗ ಳಾಗಬಹುದು. ಮತ್ತೊಂದು ಆರೋಪ ನಿವೃತ್ತಿಯಾದರೋ ವಿಶೇ ಷಾಕಾರವಾಗಿ ಬುದ್ಧಿಯು ಸಾಪೇಕ್ಷಿಕವಾಗಿರುವದು. ॥೩॥ ಇದರ ವಿ

---

೧೮ ಉಪಮಾನ ಪದ್ಧತಿ ಪ್ರಾರಂಭವು.

೧ ಮೂ॥ ಜಂಪೆ॥ ಶುಚಿಯುಸಂಪರ್ಕದಿಂಶುದ್ಧಜಲವುಷ್ಣಭಾ ।
ವಜೆಯುಮಾದಂತೆಪರವಸ್ತುಸಂಗತಿಯಿಂ ॥೧॥
ಕಾಯೇಂದ್ರಿಯಹೃದಯಹಂಕಾರಂಗಳಲಿಕ್ರಮದಿ । ಸೌಯ
ಸವಿಲ್ಲದೆಪ್ರಸಕ್ತವಾಗಿಹವು ॥೨॥
ಅಧ್ಯಾಸಗಳುನಾಲ್ಕು ಆದ್ಯವಾದವುಮೂರು ಬುದ್ಧ್ಯಪೇಕ್ಷಿತ
ವೊಂದುಪೊಂದಿರುತಿಹುದು ॥೩॥

ವರವೆಂತೆಂದರೆ ? ಆತ್ಮನಲ್ಲಿಯೇ ಪ್ರಥಮದೊಳು ಅಹಂಕಾರವೆಂಬ ಅಧ್ಯಾಸವುಂಟಾದುದು. ಈ ಸ್ಥಲದಲ್ಲಿ ಕ್ರಮವಾಗಿಯಾವದನ್ನು ಉದಾಹರಣವಾಗಿ ಹೇಳಬೇಕೆಂದರೆ ಬಹುಶಃ ರಜ್ಜುಸರ್ಪವನ್ನು ಹೇಳಬಹುದಾಗಿದೆ. ಅದು ಹ್ಯಾಗಂದರೆ ಯಾವದಾದರೊಂದು ಸ್ಥಲದಲ್ಲಿ ಹಠಾತ್ತಾಗಿ ಹಗ್ಗವನ್ನು ನೋಡಿದರೆ ಇದು ಸರ್ಪವೆಂಬದಾಗಿ ಭ್ರಾಂತಿಯುಂಟಾಗುವದು. ಈ ಸ್ಥಲದಲ್ಲಿ ಸರ್ಪರೂಪವಾದ ಆರೋಪವು ಹಗ್ಗದಲ್ಲಿ ಯಾವಮೇರಿಗೆ ಉಂಟಾಯಿತೋ ಇದೆ ಪ್ರಕಾರವಾಗಿ ಆತ್ಮ ಪದಾರ್ಥದಲ್ಲಿಯೂ ಪ್ರಪಂಚ ರೂಪವಾಗಿರುವ ಅಧ್ಯಾಸವುಂಟಾಯಿತೆಂದು ತಿಳಿಯತಕ್ಕದ್ದು. ॥೪॥ ಅಂತಃಕರಣ ಸಂಬಂಧವಾದ ಕಾಮವು, ಸಂಕಲ್ಪವು, ಸಂದೇಹವು, ಧೈರ್ಯವು, ಹರ್ಷವು, ಶೋಕವು, ಇವೇ ಮುಂತಾದ ಧರ್ಮಗಳನ್ನು ಆತ್ಮನಲ್ಲಿ ಆರೋಪಿಸುವ ಸಂದರ್ಭದಲ್ಲಿ ಸ್ಫಟಿಕಮಣಿಯು ಮತ್ತು ದಾಶವಾಳದ ಹುವ್ವು ಇವೆರಡು ಒಂದೆಡೆಯೊಳಿರುವಾಗ ಲೋಹಿತವಾಗಿರುವ ಕುಸುಮ ಸಾನ್ನಿಧ್ಯದಿಂದ ಸ್ಫಟಿಕಮಣಿಯು ಲೋಹಿತವು ಎಂಬದಾಗಿ ಹ್ಯಾಗೆ ಹೇಳಲ್ಪಡುವದೋ ? ಅದರಂತೆಯೇ ಅಂತಃಕರಣ ಧರ್ಮಗಳಲ್ಲಿ ಆತ್ಮನಲ್ಲಿ ಆರೋಪಿಸುವಿಕೆಯು ಎರಡನೆಯದಾದ ಅಧ್ಯಾಸವೆಂದು ತಿಳಿಯಬೇಕು,॥೫॥ಇದಲ್ಲದೆ ನಾನು ಕುರುಡನು, ನಾನು ಕಿವುಡನು ನಾನು ಮೂಗನು ಎಂಬಲ್ಲಿ ಇಂದ್ರಿಯಗತವಾದ ಕುರುಡುತನವು, ಕಿವುಡುತನವು, ಮೂಕತನವು ಎಂಬಿವೆ ಮೊದಲಾದ ಧರ್ಮಗಳು ಆತ್ಮನಲ್ಲಿ ಆರೋಪಿಸಲ್ಪಡುತ್ತಿಯಾಗಿ ಇದು ಮೂರನೆಯ ಅಧ್ಯಾಸವು ಇವು ಸೋಪಾಧಿಕಾಧ್ಯಾಸವೆಂಬದಾಗಿ ಅರಿ

---

ಅವುದೆನಲಾತ್ಮನೆಹಂಪಡುದುದಾಬಳಿಯು । ಭಾವಿಸಲುರಜ್ಜುಸ
ರ್ಪನ್ಯಾಯಯೋಗ್ಯಂ ॥೪॥
ಮನವಾತ್ಮನಾದಲ್ಲಿಮಹಿತರಕ್ತಸ್ಫಟಿಕ । ಮೆನಿಪಪ್ರಲೋಹಿತವೀ
ರ್ಯವೆಂತಾನೆಸಿಪ್ಪ ॥೫॥
ಬಳಿಯೋಳ್ಪ್ರಾಣಜಲಪತಿತ [illegible]
ಸೂತ್ರಲತನುವೆಂಬಾ ॥೬॥

ಯುವದು. ಅದೆಂತೆಂದರೆ, ಒಂದಾನೊಂದು ಹೊಳೆಯಲ್ಲಿ ಆಕಾಶದೊಳು ಪ್ರಕಾಶಮಾನವಾದ ಸೂರ್ಯ ಬಿಂಬವು ಪ್ರತಿಫಲಿತವಾಗಿರುವಲ್ಲಿ ಹೊಳೆಯ ಜಲದಲ್ಲಿರುವ ಚಾಂಚಲ್ಯಮೊದಲಾದ ಧರ್ಮಗಳು ನಿಶ್ಚಂಚಲನಾಗಿರುವ ಸೂರ್ಯನಲ್ಲಿ ಆರೋಪಿಸಲ್ಪಡುವದು. ಪೂರ್ವೋಕ್ತವಾದ ಆರೋಪಕ್ಕೆ ಇದನ್ನು ದೃಷ್ಟಾಂತವನ್ನಾಗಿ ಭಾವಿಸಬೇಕು. ॥ ೬ ॥ ಇನ್ನು ಅನ್ನಮಯ ಕೋಶವಾಗಿರುವ ದಪ್ಪವಾಗಿರುವಿಕೆ ಕೃಶವಾಗಿರುವಿಕೆ ಮುಂತಾದ ಧರ್ಮಗಳನ್ನು ನಾನು ದಪ್ಪವಾಗಿರುವೆನು, ನಾನು ಬಡವಾಗಿರುವೆನು ಎಂಬದಾಗಿ ವ್ಯವಹರಿಸುತ್ತಾರಾಗಿ ಇದು ಶರೀರ ಧರ್ಮಗಳನ್ನು ಆತ್ಮನಲ್ಲಿ ಹೇಳುವ ಆರೋಪವನ್ನಾಗಿ ಅರಿಯುವದು. ಇದಕ್ಕೆ ಹೊಳೆಯಲಿ ನಡೆಯುವ ಹರಿಗೋಲನ್ನೇ ದೃಷ್ಟಾಂತರವನ್ನಾಗಿ ಭಾವಿಸುವದು. ॥೭॥ ಈ ಮೋರಿಗಿರುವ ಅಂದರೆ ನಿರುಪಾಧಿಕಾಧ್ಯಾಸ, ಸೋಪಾಧಿಕಾಧ್ಯಾಸ, ಅನ್ಯಧರ್ಮಾಧ್ಯಾಸ, ಸಂಬಂಧಮಾತ್ರಾಧ್ಯಾಸಗಳೆಂಬ ಮಹಾ ಶಿಲುಕೆಗಳೊಳ್ಳಗೆ ಸೇರಿರುತಿರುವಲ್ಲಿ. ಕ್ರಮವಾಗಿ ಗುರುಕುಲವಾಸಮಾಡಿ ಶಾಸ್ತ್ರಾಧ್ಯಯನಾನಂತರದಲ್ಲಿ ಶ್ರವಣ, ಮನನ, ನಿಧಿಧ್ಯಾಸನಾದಿಗಳಿಂದ ಚರಮಸಾಕ್ಷಾತ್ಕಾರವನ್ನುಹೊಂದಿರುವ ಮಹಾನುಭಾವನಾದ ಸದ್ಗುರುವಿನ ಉಪದೇಶದಿಂದಲೂ, ಅನವರತವೂ ಶಾಸ್ತ್ರವನ್ನು ಆಗ್ರಹವಿಲ್ಲದೆ ಮತ್ತು ಮಾತ್ಸರ್ಯವಿಲ್ಲದೆಯು, ವಿಚಾರಮಾಡುವದರ ಮೂಲಕವೂ ಪ್ರತಿಬಂಧಕಗಳಾಗಿರುವ ಆರೋಪಗಳನ್ನು ಕ್ರಮವಾಗಿ ಅಪವದಿಸಲು ತರುವಾಯ ಉತ್ಪತ್ತಿಯನ್ನಾಗಲಿ, ನಾಶವನ್ನಾಗಲಿ ಪೊಂದದೆ ಅಂದರೆ ಎಂದಿಗೂ ಸಂಸಾರ ಸಮುದ್ರಕ್ಕು ಬೀಳದೆ ಪರಮಾತ್ಮಸ್ವರೂಪನೆ ಆಗಿ ಆತ್ಮಾನಂದ ಪರಾಯಣನಾಗಿರುವಿ. ॥೮॥ ಈ ಪ್ರಕಾರವಾಗಿ ಘನವಾದ ಬೋಧೆಯುಂ

---

ದಿಕ್ಕಿನಲಿಹರಿಗೋಲಹಕ್ಕ್ಯಮೋಭಾವ್ಯವಿಹಾ ಸಿಕ್ಕಿನಿಂತನ್ನು ಕಡೆಸಿ
ಡಿವಂತೆಶಳೆಯೊ ॥೭॥

ಗುರುನಯವಿಚಾರಗಳಕರಣದಿಂನೀನಪ್ಪೆ ಮರಳಿದೋಷಭ್ರಮೆ
ಗೆಬರದಪರತತ್ವಂ ॥೮॥

ಹೋಗುವಿಕೆಯೋ ಜನನಮರಣ ಪ್ರವಾಹರೂಪವಾಗಿರುವ ಸಂಸಾರವೆಂಬ ವಿಷಪೂರಿತವಾದ ಫಲವನ್ನು ಕೊಡುವ ಶುದ್ಧತಮೋಗುಣ ಪ್ರಧಾವಾಗಿರುವ ಬಳ್ಳಿಯನ್ನು ಆ ಮೂಲಾಗ್ರವಾಗಿ ಛೇದನಮಾಡತಕ್ಕ ಮೊನೆಯಾಗಿರುವ ಕುಡುಗೋಲೆಂಬದಾಗಿ ಅಶೇಷರಾದ ಸಾಧುಗಳಿಗೂ ಹೃದಯಂಗಮವಾದ ಅರ್ಥವೆಂದರಿಯತಕ್ಕದ್ದು. ॥೯॥ ಆಕಾಶವೆಂಬುವದು ಸರ್ವತ್ರವಿರುವದಾಗಿಯೂ, ತಾನು ಎಲ್ಲಕ್ಕೂ ಆಧಾರವಾಗಿರುವದಾಗಿಯೂ, ಅದಾಗ್ಯೂ ಹ್ಯಾಗೆ ನಿರ್ಮಲವಾಗಿರುವದೋ ಅದರಂತೆ ಆತ್ಮಪದಾರ್ಥವೂ ಸರ್ವತ್ರ ವ್ಯಾಪಕವಾಗಿರುವದಾಗಿಯು ಪ್ರಪಂಚವು, ಮತ್ತು ಪ್ರಾಪಂಚಿಕವು ಎಂಬ ವಿವಿಧಕಲ್ಪನೆಗಳಿಗೆಲ್ಲ ಆಧಾರ ಭೂತವಾಗಿದ್ದರೂ, ನಿರ್ವಿಕಾರವಾಗಿರುವದಾಗಿಯೂ, ಅಂದರೆ ಮಾಯಾಸಂಬಂಧಶೂನ್ಯವಾಗಿಯೂ, ಅಆಕಾಶದೊಳುಭಾಸಮಾನವಾದ ಸೂರ್ಯನಂತೆ ರಾರಾಜಿಸುತಲೂ ಇರುವದು. ॥೧೦॥ ಇನ್ನು ಬಣ್ಣದಲ್ಲಿ ಹೆಚ್ಚು ಕಡಿಮೆ ಇಲ್ಲದ ಕುಂದಣದಂತೆ ಏಕರೂಪವಾಗಿ ಪ್ರಕಾಶಿಸುತ್ತಿರುವದು. ಅಮರ ವಾಹಿನಿಯಾದ ಮಂದಾಕಿನಿಯಂತೆ ಅತ್ಯಂತನಿರ್ಮಲವಾಗಿಯೂ ಇರುವದು. ॥ ೧೧ ॥ ಇದಲ್ಲದೆ ಸಮುದ್ರನಂತೆ ಗಾಂಭೀರ್ಯದಿಂದ ಶೋಭಿಸುತಲಿರುವದು, ಇನ್ನು ಅತ್ಯುತ್ತಮವಾದ ಸುಗಂಧವು ಹ್ಯಾಗೆ ಸುಖಾಧಾಯಕವಾಗಿರುವದೋ ? ಅದರಂತೆ ಅಪರಿಮಿತಾನಂದಾಸ್ಪದವಾಗಿರುವುದು. ॥ ೧೨ ॥ ನಿಖಿಲರಾದ ದೇವತೆಗಳ

---

ಇದುಸಂಸರಣವಿಷಫಲದತಾಮಸಿಲತಾ। ವಿದಳನಲವಿತ್ರವೆಂಬು
ದುಸಾಧುಹೃದ್ಯಂ ॥೯॥
ಗಗನದಂದದಿನಿರ್ವಿಕಾರವಾಗಿರುತಿಹುದು । ಖಗಪನಂದದಿಭಾ
ಸಕವೆನಿಸುತಿಹುದೂ ॥೧೦॥
ಕುಂದನದಪರಿಹೆಚ್ಚುಕುಂದಿಲ್ಲದೊಪ್ಪುವುದು ಮಂದಾಕಿನಿಯು
ವೋಲುನಿರ್ಮಲವಾಗೆಸೆವುದೂ ॥೧೧॥
ಶರಧಿವೋಲುಗಂಭೀರಶಕ್ತಿಯಿಂಮೆರದಿಹುದು ಸುರಭಿಯಿಂದ
ದಿಸುಖಸ್ಫುರಣೆಯಂತಿಹುದೂ ॥೧೨॥.

ಆವಾಸಕ್ಕೆ ಆಸ್ಪದವಾಗಿರುವ ಮೇರುಪರ್ವತದಂತೆ ನಿಶ್ಚಾಂಚಲ್ಯವ
ನ್ನು ಅಳವಟ್ಟಿರುವದು. ಅಶೇಷಭುವನಾಧಿಪನಾದ ಸಾರ್ವಭೌಮನ
ವ್ಯಾಪಕತೆಯಂತೆ ಅಮೋಘವಾದ ವ್ಯಾಪಕತ್ವವನ್ನು ಹೊಂದಿರುವ
ದು. ||೧೩|| ಘನವಾದ ಮಾಂಸಪಿಂಡದೋಪಾದಿಯಲ್ಲಿ ಥಾಳಥಳ್ಯವನ್ನು
ಇಲ್ಲವೆ ಚಾಕಚಕ್ಯವನ್ನು ಅಥವಾ ಶಕ್ತ್ಯತಿಶಯವನ್ನು ಹೊಂದಿರು
ವುದು. ಹಂಸಪಕ್ಷಿಯು ಹ್ಯಾಗೆ ಮಾನಸ ಸರೋವರದಲ್ಲಿ ವಾಸಮಾ
ಡುತಲಿರುವುದೋ ? ಅದರಂತೆಯೇ ಅಶೇಷ ಪ್ರಾಣಿವರ್ಗದ ಮಾನ
ಸವೆಂಬ ಮಾನಸ ಸರಸ್ಸಿನಲ್ಲಿ ಈ ಹಂಸವೂ ವಾಸಮಾಡುತಲಿರುವದೆಂ
ದರಿವುದು. ||೧೪|| ಇದುವರಿಗೆ ಉದಹರಿಸಿದ ದೃಷ್ಟಾಂತಪರಂಪರೆಗ
ಳಲ್ಲಿರುವ ಒಂದೊಂದು ಸಾರವಾದ ಗುಣವನ್ನು ದಾರ್ಷ್ಟಾಂತಿಕವಾದ
ಆತ್ಮಪದಾರ್ಥದಲ್ಲಿ ಸಾಮುದಾಯಕವಾಗಿ ಇರುವದೆಂದು ಭಾವಿಸಿ,
ಮೆಲ್ಲಮೆಲ್ಲನೆ ಪಂಚಕೋಶ ವ್ಯತಿರಿಕ್ತವಾಗಿರುವ ಚಿತ್ಪದಾರ್ಥವನ್ನು
ನಾನೆಂಬದಾಗಿ ನೋಡುವಂಥವನಾಗು. ಇಲ್ಲಿ ತಿಳಿಯಬೇಕಾದ ಮ
ತ್ತೊಂದು ವಿಶೇಷವಿರುವದು, ಅದೇನೆಂದರೆ ? ಆತ್ಮನು ಅನುಪಮ
ನಾಗಿಯೂ, ನಿರ್ಧರ್ಮಕನಾಗಿಯೂ ಇರುವನೆಂಬದಾಗಿ ಸಮಸ್ತ
ವೇದಾಂತಗಳೂ ಐಕಕಂಠ್ಯದಿಂದ ಸೂಚಿಸುತಲಿರುವವು. ಹೀಗಿರುವಲ್ಲಿ
ಈ ಮೇಲೆ ಹೇಳಿದ ಉಪಮಾನಗಳು ಹ್ಯಾಂಗ ಸಮನಿಸುವವು, ಮ
ತ್ತು ಆ ಅತ್ಯುತ್ತಮವಾದ ವಸ್ತುವಿಗೆ ಇಂತಪ್ಪ ಹೀನಪದಾರ್ಥಗಳ
ನ್ನು ಉಪಮಾನವನ್ನಾಗಿ ಹೇಳಿದರೆ ಹೀನೋಪಮಾದೋಷವು ಬರು
ವದೆಂಬದಾಗಿ ಪೂರ್ವಪಕ್ಷವು ಬಂದರೆ, ಬುದ್ಧಿವಂತರು ಈರೀತಿಯಿಂ

---

ವಿಬುಧಾಲಯದತೆರದಿವಿಚನವನುಳಿದಿಹುದು ಪ್ರಬಲನಂದದಿಜ
ಗದ್ಭರಿತವಾಗಿಹುದೂ ||೧೩||
ಮಾಂಸಪಿಂಡದವೋಲತಿಮಜ್ಜಿಯುತಳದಿಹುದು | ಹಂಸನಂದ
ದಿಮಾನಸಾವಾಸಿಯುಹುದೂ ||೧೪||
ದೃಷ್ಟಾಂತದೊಳಗೇಕದ್ವೃಥಗುಣವಪಿಡಿದಲ್ಲದ್ವಪಿಷ್ಟಸಂತಸ್ತವು
ಹದೇವನಾನೆಂದೂ ||೧೫||

ದ ಉತ್ತರವನ್ನಿತ್ತು ಸಮಾಧಾನಮಾಡಬೇಕು, ಅದೆಂತೆಂದರೆ, ಲೋಕದೊಳು ವಿವಾಹಾದಿ ಸಮಯದೊಳು ಅರಿಯದ ಬಾಲಕರಿಗೆ ಅರುಂಧತಿಯೆಂಬ ತಾರೆಯನ್ನು ತೋರುವ ಸಮಯದೊಳುಹ್ಯಾಗೆ ಅಂತರಿಕ್ಷದಲ್ಲಿ ಮೊದಲು ದೂರವಾಗಿರುವ ದೊಡ್ಡ ದೊಡ್ಡ ನಕ್ಷತ್ರಗಳನ್ನು ತೋರಿಸಿ ಬಳಿಕ ಸೂಕ್ಷ್ಮವಾಗಿರುವ ಅರುಂಧತಿಯನ್ನು ಕಾಣುವಂತೆ ಮಾಡುವರೋ ? ಅದರಂತೆ ಪ್ರಕೃತದಲ್ಲಿಯೂ, ಲೋಕ ವ್ಯವಹಾರ ವಿಷಯವಾದ ಪ್ರಸಿದ್ಧ ಪದಾರ್ಥಗಳನ್ನು ಸುಲಭವಾಗಿ ಬುದ್ಧಿಗೆ ಗೋಚರಿಸುವದಕ್ಕಾಗಿ ದೃಷ್ಟಾಂತವನ್ನು ಹೇಳುತಬಂದು ಕಡೆಗೆ ಅಖಂಡವಾಗಿಯೂ,ನಿರೂಪವಾಗಿಯೂ ಇರುವ ವಸ್ತುವದೆಂದು ಸೂಚಿಸಬಹುದು. ಅದಕ್ಕಾಗಿಯೇ ಈ ಮಾರ್ಗವು ಅವಲಂಬಿಸಲ್ಪಟ್ಟಿರುವದು. ಮತ್ತು ಮೊದಲಿನಲ್ಲಿಯೆ ನಿರ್ಗುಣವಸ್ತುವೆಂಬುವದು ಆರುರುಕ್ಷುಗಳ ಬುದ್ಧಿಗೆ ವಿಷಯವಾಗುವದಿಲ್ಲವಾದಕಾರಣ ಸಗುಣವನ್ನೇ ಸುಬೋಧಗಾಗಿಮೊದಲು ತಿಳಿಯಪಡಿಸಿ ಒಳಿಕ ಅದರ ಭಾವನಾಬಲದಿಂದ ನಿರ್ಧರ್ಮಿಕವಸ್ತುವು ನಿರಾಯಾಸವಾಗಿ ಧ್ಯಾನವಿಷಯವಾಗಬಹುದೆಂದು ಈ ಪ್ರಣಾಳಿಕೆಯನ್ನು ಅಂಗೀಕರಿಸಿ ನಿರೂಪಿಸಲ್ಪಟ್ಟಿತೆಂದರಿವುದು ಹೀಗೆ ಹೇಳಿದ್ದರಿಂದ ಹಿಂದೆ ಕೇಳಿದ ಎರಡು ಕೇಳ್ವಿಗಳಿಗುಸಮಾಧಾನವು ಸುಗಮವಾಗಿರುವದು.

೧ ವಚನ ॥ ತಾ ॥ ಈ ಪ್ರಕಾರವಾಗಿ ಉಪಮಾನ ಪ್ರಮಾಣಪದ್ಧತಿಯನ್ನು ಸುಲಭಶೈಲಿಯಿಂದ ಹೃದಯಂಗಮವಾಗುವಂತೆ ಮಾಡಿ ಪ್ರಕಾರಾಂತರದಿಂದ ಪೇಳುತಲಿಧಾನೆ. ಅದೆಂತೆಂದೊಡೆ ?

ಇಂತು ಉಪಮಾನ ಪದ್ಧತಿಯು ಮುಗಿದುದು.

ಪದ್ಧತಿ ೧೮ಕ್ಕೆ ಮಂಗಳಮಸ್ತು.

---

೧ ಮೂ॥ ವ ॥ ಇಂತೆಂದುಪಮಾನ ಪ್ರಮಾಣಪದ್ಧತಿಯಂ ಸಿದ್ಧಪಡಿಸಿ ಇನ್ನೊಂದು ಪ್ರಕಾರಮಂ ಪೇಳುತಿರ್ದಪನದೆಂತೆನೆ.

ಇಂತು ಉಪಮಾನ ಪ್ರಮಾಣಪದ್ಧತಿಯು ಮುಗಿದುದು.

ಪದ್ಧತಿ ೧೮ಕ್ಕೆ ಮಂಗಳಮಸ್ತು.

## ೧೯ ಶಬ್ದ ಪ್ರಮಾಣ ಪದ್ಧತಿ ಪ್ರಾರಂಭವು.

೧ ವೃತ್ತ॥ ತಾ॥ ಲೋಕದಲ್ಲಿ ವಿಶೇಷಾಕಾರವಾಗಿ ನಂಬುವದಕ್ಕೆ ಯೋಗ್ಯವಾದದ್ದು ಯಾವದಂದರೆ ? ಅನೃತವಾಗದೆ ನಿಜವಾದ ಅರ್ಥವನ್ನು ಹೇಳುವ ವಾಕ್ಯವು ಯಾವದುಂಟೋ ? ಅದೊಂದೇ ವಿಶ್ವಸನೀಯವಾಗಿರುವದು. ಅಂಥ ನಿಜವಾದ ಮಾತುಗಳಲ್ಲಿಯೂ ವಿಶ್ವಾಸ ಮಾಡುವದಕ್ಕೆ ಅರ್ಹವಾದದ್ದು ಯಾವದಂದರೆ, ಪೌರುಷೇಯಗಳಾಗದೆ ಅಂದರೆ ಪುರುಷ ಕರ್ತೃಕವಾಗದೆ, ಅಥವಾ ಸಜಾತೀಯೋಚ್ಚಾರಣಾ ನಪೇಕ್ಷೋಚ್ಚಾರಣ ವಿಷಯವಾದ, ಅಂದರೆ ಆ ಪೌರುಷೇಯಗಳಾಗಿರುವದರಿಂದಲೇ ಪುರಾತನಗಳಾಗಿರುವ ಋಗಾದಿವೇದಗಳೇ ನಂಬುವದಕ್ಕೆ ಉಚಿತಗಳಾಗಿರುವವು. ಈ ಋಗಾದಿ ನಾಲ್ಕುವೇದಗಳಲ್ಲಿಯು ವಿಶೇಷವಾಗಿ ನೆಚ್ಚುವದಕ್ಕೆ ಸಂಪನ್ನವಾಗಿರುವಂಥಾವುಗಳು ಯಾವಂದರೆ, ಕೇವಲ ಸಚ್ಚಿದಾನಂದಾ ಖಂಡಾದ್ವಿತೀಯಾತ್ಮ ವಸ್ತುವನ್ನು ಮಾತ್ರ ಹೇಳುವ ವೇದಶಿರೋಘಟಕವಾದ ವಾಕ್ಯಗಳು ಯಾವೋ ಅಂಥ ತತ್ತ್ವಮಸಿ, ಎಂಬ ಪದತ್ರಯದಿಂ ಸಂಶೋಭಿಸುತಲಿರುವ ಅತ್ಯಂತ ಶುಭವನ್ನುಂಟುಮಾಡತಕ್ಕದ್ದಾದ ಮಹಾ ವಾಕ್ಯವೇ ಪರಮವಿಶ್ವ ಸನೀಯವಾದದ್ದಾಗಿರುವದು.

೨ ವ॥ ತಾ॥ ಇಂತಪ್ಪ ಮಹಾವಾಕ್ಯದ ಅವಯವಗಳು ಯಾವವು ? ಮತ್ತು ಅವುಗಳ ವಿವರವೇತೆಂದರೆ ?

---

## ೧೯ ಶಬ್ದ ಪ್ರಮಾಣಪದ್ಧತಿ ಪ್ರಾರಂಭವು.

೧ ಮೂ ॥ ವೃ ॥ ವಿಶ್ವಸನೀಯಮಾವುದು ಯಥಾರ್ಥಮನೊಂದುವವಾಕ್ಯವಲ್ಲಿಯು । ವಿಶ್ವಸನೀಯಮಾವುದು ಸನಾತನ । ಮಾಗಿಹವೇದಮುಲ್ಲಿಯೋ ವಿಶ್ವಸನೀಯಮಾವುದು ನಿಜಪ್ರತಿಪಾದಕಮಾದುದಲ್ಲಿಯುವಿಶ್ವಸನೀಯಮಾವುದದು ತತ್ತ್ವಮಸೀತಿಪದತ್ರಯಂಶಿವಂ ॥

೨ ಮೂ॥ ವ॥ ಅದರಂಗ ಮೆಂತೆನೆ.

೩ ಜಂಪೆ॥ ತಾ॥ ತತ್, ತ್ವಂ, ಅಸಿ, ಎಂದು ಮೂರುಬಗೆಯದಾಗಿರುವ ಅವಯುವ ಪದಗಳಲ್ಲಿ ಮೊದಲನೆಯು ತತ್ ಎಂಬ ಪದಕ್ಕು ಮತ್ತು ತ್ವಂ ಎಂಬ ಎರಡನೆಯು ಪದಕ್ಕು ಕ್ರಮವಾಗಿ ಎರಡು ವಿಧವಾದ ಅರ್ಥವು ಸಂಘಟಿಸುವದು. ॥ ೧ ॥ ವಾಚ್ಯವೆಂಬ ಉಪಪದದಿಂದ ಕೂಡಿದ ವಾಚ್ಯಾರ್ಥವೆಂತಲೂ ಲಕ್ಷ್ಯವೆಂಬುವದೇ ಉಪಪದವಾಗಿಯುಳ್ಳ ಲಕ್ಷ್ಯಾರ್ಥವೆಂತಲು, ಪೂರ್ವೋಕ್ತ ತತ್ಪದಕ್ಕೆ ಅರ್ಥವಾಗುವದು. ಇದರಂದೆ ತತ್ಪದಕ್ಕೆ ಈಶ್ವರತ್ರಯುವು ವಾಚ್ಯಾರ್ಥವಾಗಿರುವದೆಂದರಿವುದು. ॥೨॥ ಇನ್ನು ಈ ತತ್ಪದಕ್ಕೆ ಲಕ್ಷ್ಯಾರ್ಥ ಕ್ರಮವೆಂತೆಂದರೆ, ವಿರಾಟ್, ಹಿರಣ್ಯಗರ್ಭ, ಅವ್ಯಾಕೃತರೆಂಬ ಈಶ್ವರತ್ರಯುದ ಲಕ್ಷಣವಿಲ್ಲದೆ ಇರುವಂಥಾದ್ದಾಗಿಯು, ಆದ್ದರಿಂದಲೇ ಜಾತಿನಾಮಕ್ರಿಯುಗಳಿಲ್ಲದಿರುವದಾಗಿಯು ಇರುವ ಶುದ್ಧಪದ ಬ್ರಹ್ಮಪದಾರ್ಥವೆ ಲಕ್ಷ್ಯಾರ್ಥವೆಂದು ತಿಳಿಯಬೇಕು. ಆದರೆ, ಇದರಂತೆಯೆ ತ್ವಂಪದಕ್ಕು ವಿಶ್ವ, ತೈಜಸ, ಪ್ರಾಜ್ಞರೆಂಬ ಜೀವತ್ರಯುವು ವಾಚ್ಯಾರ್ಥ ವೆಂಬದಾಗಿಯು, ಈ ಜೀವತ್ರಯುದ ಲಕ್ಷಣವಿಲ್ಲದೆ ಶುದ್ಧಚೈತನ್ಯವೆಂಬುವದು ಲಕ್ಷ್ಯಾರ್ಥವೆಂಬದಾಗಿಯು ತಿಳಿಯತಕ್ಕದ್ದು. ॥೩॥ ಹೀಗಿರುವಲ್ಲಿ ಈ ಮೇಲೆ ಉದಹರಿಸಿದ ಜೀವತ್ರಯಾತ್ಮಕವಾಗಿರುವ ತ್ವಂಪದಕ್ಕೆ ವಾಚ್ಯವಾದ ಅರ್ಥಕ್ಕಿಂತಲು ಬೇರಾಗಿ ಅಂದರೆ, ಉಕ್ತಜೀವತ್ರಯು ಲಕ್ಷಣವಿಲ್ಲದೆ ನಿಗಸ್ತವಾದ ಚಾಂಚಲ್ಯವುಳ್ಳ ಜೀವಾತ್ಮನೆನಿಸಿ ಕೊಂಡಿದ್ದ

೩ ಮೂ॥ ಜಂಪೆ॥ ತತ್ತ್ವಂಬೊಪದದೊಳರ್ಥಂಘಟಿಪುದೀತೆರದಿಮ
ತ್ವಮಾತ್ವಂಪದದೊಳೊತ್ತರಿನುದಿಂತೂ ॥೧॥
ವಾಚ್ಯಲಕ್ಷ್ಯೋಪಪದಪೂರದಿಂ ತತ್ಪದಕೆ ವಾಚ್ಯಾರ್ಥರೀಶ್ವರರ
ವರ್ಗವೊಂದಾಗೀ ॥೨॥
ಲಕ್ಷ್ಯಾರ್ಥವಿವರಂ ವಿಲಕ್ಷಣಶಿದಾಬೊಮ್ಮ ವೀಕ್ಷವಿನಾತೆರದಿಂದ
ವಿಶ್ವಾದಿಗಳಲೀ ॥೩॥
ತ್ವಂಪದದಿಸಂಶ್ರಯುವೆವಾಚ್ಯಾರ್ಥವಿವರಿಂದಲುಂ ಪೆರತೆನಿಸಿಗ
ಳಿತಲೋಲನಾದಾತ್ಮಂ ॥೪॥

ಶುದ್ಧಚೇತನನಿಗು, ॥೪॥ ಪೂರ್ವೋಕ್ತ ಪ್ರಕಾರವಾಗಿಯೆ ಶುದ್ಧ ಪ್ರತ್ಯಗಾತ್ಮನೆನಿಸಿ ಕೊಂಡಿರುವ ಪರಮಾತ್ಮನಿಗೂ ಪರಮಾರ್ಥರೂಪವಾಗಿರುವ ಅದ್ವೈತವನ್ನು ಹೇಳುವದು ಬಹು ಸುಲಭವಾಗಿರುವುದು. ॥೫॥ ಎಲೈ ಮನೋಜನನಾಥನೆ ಕೇಳು ! ತ್ವಂಪದಕ್ಕೆ ವಾಚ್ಯಾರ್ಥವಾಗಿರುವ ವಿಶ್ವ, ತೈಜಸ, ಪ್ರಾಜ್ಞರೆಂಬ ಜೀವತ್ರಯಕ್ಕು. ॥೬॥ ಇನ್ನು ಹಿಂದೆ ಉದಹರಿಸಲ್ಪಟ್ಟ ವಿರಾಟ್, ಹಿರಣ್ಯಗರ್ಭ, ಅವ್ಯಾಕೃತರೆಂಬ ತತ್ಪದಾರ್ಥವಾದ ಈಶ್ವರತ್ರಯಕ್ಕು ವ್ಯಾವಹಾರಿಕ ಸಂಬಂಧವಾಗಿ ಉಂಟಾಗಿರುವ ಗುಣಸಮುದಾಯ ಸಂಬಂಧವನ್ನು ಕಳೆದ ತರುವಾಯ, ॥೭॥ ಪೂರ್ವೋಕ್ತವಾದ ಮಹಾವಾಕ್ಯಾವಯವ ಭೂತವಾಗಿರುವ ಅಸಿ, ಎಂಬ ಪದವು ಅತ್ಯಂತ ರಮಣೀಯವಾಗಿರುವ ಭಾಗತ್ಯಾಗ ಲಕ್ಷಣ, ಅಂದರೆ, ಜಹದ ಜಹಲ್ಲಕ್ಷಣೆಯಿಂದ ಮೇಲೆ ಹೇಳಿದಂತೆ ಶುದ್ಧವಾದ ಚೈತನ್ಯಕ್ಕೆ ಐಕ್ಯವನ್ನು ಬೋಧಿಸುತಲಿರುವದು. ॥೮॥ ಈ ಅರ್ಥವೆಂತು ಸಮನಿಸುವದೆಂಬದಾಗಿ ಇತರ ಮತಪ್ರವಿಷ್ಟರಾದ ವಾದಿಗಳು ಪ್ರಶ್ನೆಮಾಡಿದರೆ ಅವರಿಗೆ ( ಸೋಯಂದೇವದತ್ತಃ ) ಎಂಬ ವಾಕ್ಯಾರ್ಥವೆ ಉತ್ತರವಾಗಿರುವದು, ಮತ್ತು ಇದರ ವಿವರವೆಂತೆಂದರೆ,—ಸೋಯಂದೇವದತ್ತಃ ಎಂಬಲ್ಲಿ ಸಃ, ಅಯಂ, ದೇವದತ್ತಃ, ಎಂಬದಾಗಿ ಮೂರು ಪದಗಳಿರುವವು. ಇದರ ಅರ್ಥವೇನಂದರೆ,-ಸಃ, ಆ,ದೇವದತ್ತಃ, ದೇವದತ್ತನೆಂಬಾತನು, ಅಯಂ ಇ

---

ಪ್ರತ್ಯಗಾತ್ಮನೆನಿಪಪರಬೊಮ್ಮಕ್ಕೀತಗಂಸತ್ಯಮಾದದ್ವೈತಸಾರಲ್ಕೆಸುಲಭಂ ॥೫॥

ತ್ವಂತತ್ಪದಂಗಳಿಗೆವಾಚ್ಯಾರ್ಥರಾಗಿರ್ಪ ನೃಪಂತಭೂಪತಿಯೆ ವಿಶ್ವಾದಿಜೀವರಿಗೂ ॥೬॥

ಆ ವಿರಾಟ್ಪುರುಷಾದಿಯಾದೀಶ್ವರತ್ರಯಕ್ಕು ವ್ಯಾವಹಾರಿಕಗುಣದವರ್ಗಮಂಕಳೆದೂ ॥೭॥

ವಸ್ತುಮಾತ್ರಕ್ಕೈಕ್ಯವಂ ಪೇಳ್ವದಸಿಪದಂಶಸ್ತಭಾಗತ್ಯಾಗಚಾರುಲಕ್ಷಣೆಯಿಂ ॥೮॥

ಪನು, ಎಂತಲಾಗಲಿ, ಇಲ್ಲವೆ, ಅಯಂ, ಈ ದೇವತ್ತಃ, ದೇವದತ್ತನು, ಸಃ ಅವನು ಅಂದರೆ, ಹಿಂದೆ ಯಾವದಾದರೊಂದು ಸಮಯದಲ್ಲಿ ಯಾವದಾದರೊಂದು ಸ್ಥಲದಲ್ಲಿ ದೇವದತ್ತನೆಂಬ ಒಬ್ಬ ಮನುಷ್ಯನನ್ನು ನೋಡಿರುತ್ತೇವೆ, ಅವನನ್ನೇ ಕೆಲವುಕಾಲ ಕಳೆದನಂತರ ಮತ್ತೊಂದು ಗ್ರಾಮದಲ್ಲಿ ನೋಡಿದಾಗ ಸೋಽಯಂ ದೇವದತ್ತಃ, ಎಂಬ ವಾಕ್ಯವನ್ನು ಉಪಯೋಗಿಸುವೆವು. ಹ್ಯಾಂಗದರೆ, ಅಂದು ನಾವು ನೋಡಿದ್ದ ದೇವದತ್ತನು ಈತನು ಎಂಬದಾಗಿ ಈ ವಾಕ್ಯಕ್ಕೆ ಅರ್ಥವಾಗುವದು, ಹಾಗಾದರೆ,-ಅಂದು ನಾವು ನೋಡಿದ್ದ ದೇವದತ್ತನಿಗು, ಅಂದರೆ,- ಆದೇಶ, ಆಕಾಲಗಳಿಂದೊಡಗೂಡಿದ ದೇವದತ್ತನಿಗೂ ಈ ಕಾಲ ದೇಶಗಳಿಂದ ಕೂಡಿದ ದೇವದತ್ತನಿಗೂ ಭೇದವುಂಟು. ಅದು ಹ್ಯಾಗಂದರೆ,-ಪೂರ್ವಕಾಲವು ಈ ಕಾಲವು ಇವೆರಡು ಒಂದಲ್ಲದ್ದರಿಂದಲು, ಮತ್ತು ಪೂರ್ವದೇಶವು ಈ ದೇಶವು ಇವೆರಡು ಒಂದಲ್ಲದ್ದರಿಂದಲೂ ಆಯಾ ಕಾಲದೇಶಗಳಿಂದ ಕೂಡಿರುವ ದೇವದತ್ತನು ಭಿನ್ನನಾಗುವನು. ಆದರೆ ವ್ಯಕ್ತಿಗಳೆರಡು ಇಲ್ಲದಿರುವದರಿಂದ ವಿಶೇಷಣಾಂಶವಾದ ದೇಶಕಾಲಗಳನ್ನು ಹಿಡದು ಮಾತ್ರ ಭೇದವನ್ನು ಹೇಳಬೇಕಾಗಿರುವದು. ವ್ಯಕ್ತಿಭೇದವಿಲ್ಲದ್ದರಿಂದ ಅಭೇದವನ್ನು ಹೇಳುವದು ಅವಶ್ಯಕವಾಗಿರುವದರಿಂದ ಪೂರ್ವೋಕ್ತವಾದ ಭಾಗತ್ಯಾಗಲಕ್ಷಣವನ್ನು ಉಪಯೋಗಿಸಿಕೊಳ್ಳಬೇಕು. ಅದರ ಸ್ವರೂಪವೆಂತೆಂದೊಡೆ,-ಸಃ, ಎಂಬಪದಕ್ಕೆ ಆಕಾಲದದೇಶವಿಶಿಷ್ಟನಾದ ದೇವದತ್ತನು ವಾಚ್ಯಾರ್ಥವು, ಅಯಂ ಎಂಬ ಪದಕ್ಕೆ ಈ ಕಾಲದೇಶಗಳಿಂದ ಕೂಡಿದ ದೇವದತ್ತನು ವಾಚ್ಯಾರ್ಥವು ಈಇಬ್ಬರಿಗು ವಿಶೇಷಾಂಶಗಳಿಂದ ಐಕ್ಯವು ಕೂಡದಿರುವದರಿಂದ ಎರಡು ಸ್ಥಲದಲ್ಲಿಯು ವಿಶೇಷಣಾಂಶವಾಗಿರುವ ಆಕಾಲಶದೇಶ, ಈ ಕಾಲದೇಶ, ಈ ಎರಡು ಭಾಗಗಳನ್ನು ತ್ಯಾಗಮಾಡಿದರೆ ತರುವಾಯ ಶುದ್ಧವಾಗಿರುವ ದೇವದತ್ತ ವ್ಯಕ್ತಿಯೊಂದೇ

ಮತ್ತೆ ಸೋಽಯಂದೇವದತ್ತಯಂಬಪದವಾಗಿಗಂತ್ತರ ವಿಂದರಬ
ಗೆಯೊಳೊಂದುಪದಭೇದಂ ॥೯॥

ಅಭಿನ್ನವಾಗಿ ನಿಂತಿರುವದು. ಈ ರೂಪವಾಗಿರುವ ವಾಕ್ಯಾರ್ಥ ದೃಷ್ಟಾಂತದಿಂದೀ ತತ್ತ್ವಮಸಿ ವಾಕ್ಯಾರ್ಥವನ್ನು ತಿಳಿದುಕೊಳ್ಳಬಹುದು. ಇನ್ನು ಮುಂದೋಪಕಾರಕ್ಕೋಸ್ಕರ ಮತ್ತೊಂದು ವಿಧವಾಗಿ ವಿವರಿಸಲ್ಪಡುವದು. ಅದೆಂತೆಂದರೆ,—

ಚೆನ್ನಾಗಿ ಬೆಂಕಿಯಲ್ಲಿ ಕೆಂಪಗೆ ಕಾದಿರುವ ಎರಡು ಕಬ್ಬಿಣದ ಗುಂಡುಗಳನ್ನು ಬಂದು ಕಡೆಯಲ್ಲಿಟ್ಟು ಇರುವಲ್ಲಿ ಅವೆರಡರಲ್ಲಿರುವ ಕಬ್ಬಿಣದ ಭಾಗಗಳಿಂದ ಕೂಡಿರುವ ಅಗ್ನಿಯು ಬೇರು ಬೇರಾಗಿಯೇ ಕಂಡು ಬರುತಲಿರುವದು, ಪರಮಾರ್ಥ ದೃಷ್ಟಿಯಿಂದ ವಿಚಾರಮಾಡಿ ನೋಡಿದರೆ ಭೇದವಿಲ್ಲವು. ಅದರಬಗೆ ಎಂತೆಂದೊಡೆ ? ಎರಡು ಗುಂಡುಗಳಲ್ಲಿಯು ಇರುವ ಕಬ್ಬಿಣದ ಅಂಶವನ್ನು ಬೇರಾಗಿ ತೆಗದಿಟ್ಟರೆ ಉಳಿಯುವ ತೇಜೋಂಶಗಳೆರಡು ಬಂದಾಗಿಯೇ ಇರುವದು ಈ ವಿಷಯದಲ್ಲಿ ಯಾವ ವಿಧವಾದ ಆಕ್ಷೇಪವೂ ಬರುವದಕ್ಕೆ ಆಸ್ಪದವಿಲ್ಲವು. ಹೀಗೆಯೇ ಪ್ರಕೃತದಲ್ಲಿಯು, ತತ್, ತ್ವಂ, ಅಸಿ, ಎಂಬಲ್ಲಿ ತತ್ಪದಕ್ಕೆ ಪೂರ್ವೋಕ್ತವಾದ ಸ್ಥೂಲ, ಸೂಕ್ಷ್ಮ, ಕಾರಣಗಳೆಂಬ ಶರೀರತ್ರಯಕ್ಕೆ ಅಭಿಮಾನದೇವತೆಗಳಾಗಿರುವ ವಿರಾಟ್, ಹಿರಣ್ಯಗರ್ಭ, ಅವ್ಯಾಕೃತೇಶ್ವರರೆಂಬ ಈಶತ್ರಯವು ಅರ್ಥವಾಗುವದು, ತ್ವಂಪದಕ್ಕೆ ಜಾಗ್ರತ್, ಸ್ವಪ್ನ, ಸುಷುಪ್ತಿಗಳೆಂ ಅವಸ್ಥಾತ್ರಯಗಳಿಗಭಿಮಾನಿಗಳಾಗಿರುವ ವಿಶ್ವ, ತೈಜಸ, ಪ್ರಾಜ್ಞರೆಂಬ ಜೀವತ್ರಯವು ಅರ್ಥವಾಗಿರುವದು. ಆದರೆ ಈ ಎರಡು ಸ್ಥಲದಲ್ಲಿಯು, ಕ್ರಮವಾಗಿ ಮಾಯಾವಿದ್ಯಗಳು ಉಪಾಧಿಗಳಾಗಿರುವವು, ಅಂದರೆ, ಉಭಯಸ್ಥಲಗಳಲ್ಲಿಯು ಸರ್ವಜ್ಞತ್ವವು ಕಿಂಚಿಜ್ಞತ್ವವು ಉಪಾಧಿಗಳು ಈ ಉಭಯೋಪಾಧಿಗಳಿಂದ ಕೂಡಿರುವ ಚೇತನರಿಗೆ ಐಕ್ಯವನ್ನು ಹೇಳುವದಕ್ಕೆ ಆಗುವದಿಲ್ಲವಾದುದರಿಂದ ಭಾಗತ್ಯಾಗ ಲಕ್ಷಣದಿಂದ ಉಭಯಸ್ಥಲದಲ್ಲಿಯೂ ವಿಶೇಷಣಾಂಶಗಳಾಗಿ ಐಕ್ಯಬಾಧಕವಾಗಿರುವ ಸರ್ವಜ್ಞತ್ವ, ಕಿಂಚಿದ್ಜ್ಞತ್ವಗಳೆಂಬ ಉಪಾಧಿಗಳ ಭಾಗಗಳನ್ನು ತ್ಯಾಗಮಾಡಲು, ಉಳಿದ ಶುದ್ಧಚೈತನ್ಯವು ಏಕವಾಗಿಯೇ ಇರುವದು. ಆ ಐಕ್ಯಾರ್ಥ

ವನ್ನು ಅಸಿಪದವು ಹೇಳುತಲಿರುವದು. ಇದೇ ಛಾಂದೋಗ್ಯೋಪ ನಿಷತ್ತಿಗೆ ಮುಖ್ಯತಾತ್ಪರ್ಯ ಭೂತವಾಗಿರುವ ಅರ್ಥವಾಗಿರುವದು. ಹೀಗೆ ಹೇಳಿದ್ದರಿಂದ ಈ ಅರ್ಥವು ಸಪ್ರಮಾಣವಾದದ್ದೆಂದು ಸೂಚಿ ಸಲ್ಪಟ್ಟಿತು. ಹಿಂದೆ ಹೇಳಿದ ಲಕ್ಷಣವು ಜಹಲ್ಲಕ್ಷಣೆ ಯೆಂತಲೂ, ಅ ಜಲ್ಲಕ್ಷಣ ವೆಂಬದಾಗಿಯು, ಜಹದ ಜಲ್ಲಕ್ಷಣ ವೆಂಬದಾಗಿಯೂ, ಮೂ ರು ಬಗೆಯಾಗಿರುವದು. ಪ್ರಕೃತದಲ್ಲಿ ಮೂರನೆಯದಾದ ಜಹದ ಜ ಲ್ಲಕ್ಷಣೆಯು ಉಪಯುಕ್ತವಾಗಿರುವದೆಂದರಿವುದು.

೪ ಕಂದ॥ ತಾ॥ ಈ ಪ್ರಕಾರವಾಗಿರುವ ಐಕ್ಯಾನು ಸಂಧಾನವೇ ಜ ನನ ಮರಣ ರೂಪವಾಗಿರುವ ಸಂಸಾರವೆಂಬ ಘೋರವಾದ ಅರಣ್ಯಕ್ಕೆ ಹೊಂದಲು ಅತ್ಯಂತ ಅಶಕ್ಯವಾಗಿರುವ ಕಾಲಾನಲವೆಂಬದಾಗಿ ಸಾ ಮವೇದಕ್ಕೆ ಶಿಖರವಾಗಿರುವ ಛಾಂದೋಗ್ಯೋಪನಿಷತ್ತಿನಲ್ಲಿ ಈತ ತ್ತ್ವಮಸಿ ವಾಕ್ಯಾರ್ಥವನ್ನು ಉದ್ದಾಲಕನೆಂಬ ಮಹರ್ಷಿಯು ತ ನ್ನ ಮಗನಾದ ಸ್ವೇತಕೇತುವೆಂಬಾತನಿಗೆ ಸುಖಬೋಧೆ ಆಗುವದ ಕ್ಕು ದಾರ್ಢ್ಯವನ್ನುಂಟುಮಾಡುವದಕ್ಕು ಒಂಭತ್ತಾವರ್ತಿ ಉಪದೇಶ ವನ್ನು ಮಾಡಿರುವನು. ಪ್ರಬಲವಾದ ಬಂಧರೂಪವಾಗಿರುವ ಈ ಸಂ ಸಾರ ಸಮುದ್ರವನ್ನು ದಾಟಬೇಕೆಂಬ ಇಚ್ಛೆಯುಳ್ಳ ವಿವೇಕಿಗಳೆಲ್ಲ ರೂ ಈ ಮೇಲೆ ಉದಹರಿಸಿದ ಅರ್ಥವನ್ನು ಸದ್ಗುರು ಸೇವಾಮೂಲ ಕದಿಂದ ತಿಳಿದು ಕೃತಾರ್ಥರಾಗಬೇಕೆಂಬುವದು ಗ್ರಂಥಕರ್ತರಿಗೂ ಮುಖ್ಯತಾತ್ಪರ್ಯವು.

೫ ವ ॥ ತಾ॥ ಮತ್ತು ಪರಶಿವದ್ರೋಹಿಗಳಾದ ಪುರುಷರು ಯಾರಿ ರುವರೊ? ಅಂಥವರು ವ್ಯಾವಹಾರಿಕರಾಗಿದ್ದುಕೊಂಡು ಯಮಲೋ

---

೪ ಕಂ॥ ಇದುಸಂಸಾರಾಟವಿಗದುರಾ ।
ಸದದವಮೆಂತೆಂದುಸಾಮರಸದಿಂತೆ ॥
ಗೆದೊಪ್ಪದೊಮುದ್ದಾಲಕನೊರೆದಂ।
ಮುದದಿಂಸ್ವೇತಕೇತುವಿಗೆನವವಾರಂ ॥

೫ ಮಾ॥ ವ॥ ಮತ್ತುನೀ ಅರ್ಥದಲ್ಲಿ ಪರಮಶಿವದ್ರೋಹಿಗಳಾಗಿ

ಕದೊಳು ತಾಮಿಶ್ರ ಅಂಧ ತಾಮಿಸ್ರಾದಿ ಮಹಾತಾರವ ನರಕಯಾತನೆಗಳನ್ನು ಅನುಭವಿಸಬೇಕಾದ್ದು ಅವಶ್ಯಕವಾಗಿರುವದರಿಂದ ಅಂಥವರಿಗೆ ಪರಮಸುಂದರಿಯರಾದ ಲಲನೆಯರೊಡನೆ ಕ್ರೀಡಿಸುವದರಲ್ಲಿ ಯಾವರೀತಿಯಾದ ಮನಃಪ್ರವೃತ್ತಿಯು ಪ್ರಮಾಣ್ಯವು ಉಂಟೊ? ಅದರಂತೆ ಈ ಅರ್ಥದಲ್ಲಿ ಇಲ್ಲವು. ಮತ್ತೆ ಯಾವ ಬಗೆಯಾಗಿರುವದೆಂದರೆ,— ಮಂದಾರವೆಂಬ ಕಲ್ಪವೃಕ್ಷದಲ್ಲಿರುವ ಹುವುಗಳ ಗೊಂಚಲಿನಿಂದ ಸುರಿವ ಮಕರಂದ ಪ್ರವಾಹವೆಂಬ ಮಂದಾಕಿನೀ ನದಿಯತೀರದಲ್ಲಿರುವ ಕಲ್ಪವೃಕ್ಷಗಳ ವನವೆಂಬದಾಗಿ ಹೇಳುವಿಕೆಯು ಹ್ಯಾಗೆ ಅರ್ಥವಾದವೊ ಅದರಂತೆ ಪುಸಿಯು !! ಈ ಮೇಲೆ ಉದರಿಸಿದ ಮಹಾವಾಕ್ಯಾರ್ಥವು ಅದರಂತೆ ಯೆಂದು ತಿಳಿಯುವದು. ಯಾವದಾದರು ಮತ್ತೊಂದರ್ಥವನ್ನು ಸ್ತೋತ್ರ ಮಾಡತಕ್ಕದ್ದಾಗಿರುವ ದಲ್ಲದೆ ತನ್ನ ಸ್ವಂತವಾದ ಅರ್ಥದಲ್ಲಿ ತಾತ್ಪರ್ಯವು ಯಿಲ್ಲವೆಂಬುವದಕ್ಕೆ ಅರ್ಥವಾದವೆಂದು ಹೆಸರು. ||೧||

೬ ವ|| ತಾ|| ಲೋಕದಲ್ಲಿ ಶಿಲೆಗಳಿಂದಲು, ದಾರುಗಳಿಂದಲೂ, ಇನ್ನು ಮೃತ್ತು ಮೊದಲಾದವುಗಳಿಂದಲೂ, ಹರಿಹರ ವಿರಿಂಚ್ಯಾದಿ ಅವತಾರ ರೂಪದಿಂದ ಇರುವ ವಿಗ್ರಹಗಳನ್ನು ಉದ್ದೇಶಿಸಿ ಆಯಾಯ ದೇವತಾಬುದ್ಧಿಯಿಂದಲೇ ಬುದ್ಧಿಭೇದವಾಗದಂತೆ ಆಚರಿಸುವ ಉಪಾಸ

---

ಯೇಷ್ವದೌರ್ಭಾಗ್ಯಮಹಾನರಕಯಾತನಾ ಫಲಭೋಕ್ತೃಗಳಾದ ಪುರುಷರ್ಗೆನೋಡಲಿದು ಯೌವ್ವತನಿಭಾವರಮ್ಯವಾದ ನಗರವೆಅಲ್ಲ, ಮತ್ತೆನ್ನೆಯಾಯಂದೊಡೆಮಂದಾರಗುಚ್ಛಸ್ಯಂದಮಾನಮಕರಂದ ಮಧುರಮಂದಾಕಿನೀತೀರಬೃಂದಾರಕವಾಟಿಯಂಬಂತರ್ಥವಾದವೆಂದು ತೋರುವದೂ ||೧||

೬ ಮೂ|| ವ|| ತತ್ತದ್ದೇವತಾಚಿಹ್ನಚಿಹ್ನಿತಶಿಲಾಪ್ರತಿಮಾಚಯದಲ್ಲಿ ಸಾಕ್ಷಾತ್ತತ್ತದ್ದೇವತಾ ಬುದ್ಧಿಯು ಅವ್ಯಭಿಚರಿತವಾಗಿ ಬಂದಂತೆ ವುಪಾಸನಾಪರತೆಯಿಂದೆಂದು ತಿಳಿವುದೂ||೭||

ನಾಪರವೆಂಬದಾಗಿಯೇ ಈ ಸಂದರ್ಭದ ವಾಕ್ಯವನ್ನು ತಿಳಿದುಕೊಳ್ಳ ತಕ್ಕದ್ದೆಂತಲೂ ಅರ್ಥವ ಕೊಡುವದು. ‖೧‖

೭ ವಚನ‖ ತಾ‖ ಈ ಬ್ರಹ್ಮಚಾರಿಯೇ ಯಜ್ಞೇಶ್ವರನು ಎಂಬ ದಾಗಿ ಒಬ್ಬನೊಬ್ಬ ತೇಜಸ್ವಿಯಾದ ವಟುವನ್ನು ನೋಡಿ ಹೇಳು ವ ಸಂದರ್ಭದಲ್ಲಿ ಅಗ್ನಿಯಲ್ಲಿರುವ ಪಾರಶುದ್ಧ್ಯಾದಿ ಗುಣಗಳನ್ನು ಹಿಡಿ ದು ಬ್ರಹ್ಮಚಾರಿಯಲ್ಲಿಯೂ ಅಥವಾ ನೈರ್ಮಲ್ಯಾದಿ ಗುಣಗಳಿರುವದರಿಂ ದ ಈ ಗುಣಸಾಮ್ಯದಿಂದ ಮೇಲೆ ಉದರಿಸಿದಂತೆ ಈ ಬ್ರಹ್ಮಚಾರಿಯೆ ಅಗ್ನಿಯು ಎಂಬದಾಗಿ ವಾಕ್ಯವು ಹೇಳಲ್ಪಡುವದು. ಅದರಂತೆಯೇ ಪ್ರಕೃತವಾಕ್ಯವು ಆಗಬಹುದು ಅಂದರೆ,—ಜೀವನಿಗೆ ಆತ್ಮಜ್ಞಾನಾ ನಂತರದಲ್ಲಿ ಪರಾತ್ಮಗುಣಗಳು ಬರುತ್ತವೆಯಾಗಿ ಗುಣಸಾಮ್ಯವು ಬಂದುದು, ಆದಕಾರಣವೇ ಜೀವನೇ ಬ್ರಹ್ಮನೆಂಬದಾಗಿ ಹೇಳಲ್ಪಡು ವದು. ಆದದ್ದರಿಂದಲೆ ಗುಣ ಸಾದೃಶ್ಯವೆಂತಲು ಮನಸ್ಸಿಗೆ ತೋ ರಬಹುದು. ‖೩‖

೪ ವಚನ ‖ ತಾ ‖ ಅನೇಕ ವಿಧವಾದ ಮೃಗಗಳ ಸಮುದಾ ಯದಲ್ಲಿ ಅಸಾಧಾರಣ ಲಕ್ಷಣದಿಂದ ಇದು ಪಶುವು ಎಂದು ಹಿಡಿಯು ವಂತೆ ಅಂದರೆ, ಕೊಂಬು ಮತ್ತು ಗಂಗೆದೊಗಲು ಇವೆರಡು ಯಾವದ ಕ್ಕೆ ಉಂಟೋ ಅದೇ ಆಕಳು ಎಂಬದಾಗಿ ಕಂಡು ಹಿಡಿಯುವಂತೆ ಈ ಪ್ರಕೃತ ವಾಕ್ಯವನ್ನು ಜಾತಿ ವ್ಯಕ್ತಿಗಳಿಗಧೀನವಾದ ವಾಕ್ಯವೆಂಬ ದಾಗಿಯು ವ್ಯವಹರಿಸಬಹುದು. ‖೪‖

---

೩ ಮೂ‖ ವ‖ ಈತಂಬ್ರಹ್ಮಚಾರಿಯೆವೀತಿಹೋತ್ರನಲ್ಲವೆ ಯಂ ಬವಾಕ್ಯದಂತೆಗುಣಸಾದೃಶ್ಯವೆಂದು ಚಿತ್ತಕ್ಕಭ್ಯುಪಗಮಂ ಸೇರುವುದೂ ‖೩‖

೪ ಮೂ‖ ವ ‖ ಈಚತುಷ್ಪಾತ್ಪಶುವ್ಯೂಹಮಧ್ಯದೊಳಿದುಗೋ ವಿನದೇಹವೆ ಸರಿಯೆಂದು ಅಸಾಧಾರಣ ಲಕ್ಷಣದಿಂನಿರ್ಧರಿ ಸುವಂತೆ ಜಾತಿವ್ಯಕ್ತಿ ಪರೋಕ್ತಿಪಯಂಬರಿವು ತಲೆಯುತ್ತು ವದೂ ‖ ೪ ‖

೯ ವಚನ ॥ ತಾ॥ ಲೋಕದಲ್ಲಿ ಘಟವೆಂಬುವದು ಹ್ಯಾಗೆ ಪೃಥ್ವಿಕಾರವೊ ಅಂದರೆ,—ಗಡಿಗೆ ಯೆಂಬುವದು ಕೇವಲ ಮಣ್ಣಿನಿಂದಲೇ ಉಂಟಾಗಿರುವದರಿಂದ ಗಡಿಗೆಯು ತನಗೆ ಕಾರಣವಾಗಿರುವ ಮಣ್ಣಿಗಿಂತಲೂ ಬೇರೆ ಹ್ಯಾಗೆ ಅಲ್ಲವೊ ಅದರಂತೆಯೆ ತ್ವಂಪದಾರ್ಥವಾದ ಜೀವನು ತತ್ಪದಾರ್ಥವಾದ ಈಶ್ವರ ಕಾರ್ಯವೇ ಆಗಿರುವದರಿಂದ ಕಾರಣಭೂತನಾದ ಪರಮೇಶ್ವರನಿಗಿಂತಲೂ ಈತನು ಕಾರ್ಯರೂಪದಿಂದಬೇರಲ್ಲ. ಎಂಬದಾಗಿಯು, ಈ ರೀತಿಯಾಗಿರುವ ದುರ್ವಿವಾದಕ್ಕು ಪ್ರಕೃತವಾಕ್ಯವು ಆಸ್ಪದವನ್ನು ಕೊಡುವುದು. ॥೯॥

೧೦ ವಚನ॥ ತಾ॥ ನೀಲೋತ್ಪಲ, ಅಂದರೆ, ಕನ್ನೈದಿಲೆ ಎಂಬಲ್ಲಿ ನೈದಿಲೆ ಎಂಬ ಪದಕ್ಕೆ ವಿಶೇಷಣವಾಗಿರುವ ಕಪ್ಪು ಎಂಬ ಪದಾರ್ಥವು ತನಗೆ ಉತ್ತರದಲ್ಲಿ ವಿಶೇಷ್ಯವಾಗಿರುವದಕ್ಕೆ ಹ್ಯಾಗೆ ಗುಣವನ್ನು ಸಂಪಾದಿಸಿ ಕೊಡುವದೊ ಅದರಂತೆಯೇ ದುಷ್ಟಸಮಾಸಮಾಡುವದರಿಂದ ತತ್ಪದಾರ್ಥದ ಅರ್ಥವನ್ನು ತಲೆದೋರುವಂತೆ ಮಾಡುವದು ॥೧೦॥

೧೧ ವಚನ ॥ ತಾ ॥ ಲೋಕದೊಳು ಹಾಲಿಗೆ ಹುಳಿ ಪದಾರ್ಥದ ಸಂಸರ್ಗದಿಂದ ಸ್ವಸ್ವರೂಪವು ತಪ್ಪಿ ಬೇರೆ ವಿಧವಾಗಿ ಹ್ಯಾಂಗೆ ಪರಿಣಮಿಸುವದೋ ? ಅದರಂತೆಯೇ ತತ್ಪದಾರ್ಥವಾದ ಆತ್ಮನಿಗೆ ಸದಸದ್ವಿಲಕ್ಷಣ ವಾಗಿರುವ ಪ್ರಕೃತಿಯು ಸಂಬಂಧವೆಂಬುವದು ಉಂಟಾಗಲು ತರುವಾಯ ಅದು ಜೀವರೂಪವಾಗಿ ಪರಿಣಮಿಸುವದು ಎಂ

---

೯ ಮೂ॥ ವ॥ ಆತತ್ವಂಪದಂಗಳಿಗರ್ಥಂಗಳಾದೀಶ್ವರಜೀವರುಮೃತ್ತಿಕಾಘಟಂಗಳಂತೆಕಾರಣ ಕಾರ್ಯಸಂಬಂಧ ಮುಳ್ಳವರೆಂಬುದುಸ್ತರ್ಕಕೆವಿಸ್ತರಮಾದಹಸ್ತಾವಲಂಬನಮುಂಟಾಗುವುದೂ॥೯॥

೧೦ ಮೂ॥ ವ॥ ನೀಲಶಬ್ದಮುತ್ಪಲಕ್ಕೆಗುಣತೆಯಂಸಂಪಾದಿಸುವಂತೆತಚ್ಛಬ್ದ ಗುಣಮಿಾತ್ವಂಪದಾರ್ಥವೆಂಬದುಸ್ಸಮಾಸಜ್ಞಾನಂಪುಟ್ಟುವದೂ ॥೧೦॥

೧೧ ಮೂ॥ ವ॥ ಅವಿಕಾರವಾದಹಾಲಿಗೆಮೊಸರಾಗುವ್ರದೆಂತುವಿಕಾರವ್ರೋಹಾಗೆತತ್ಪದಕ್ಕು ಪಾಧಿಯಿಂತ್ವಂಪದರೂಪವಿಕಾರವಿಾವರ

ತಲೂ, ಒಂದು ಬಗೆಯಾದ ರೀತಿಯುನ್ನು ಮನಸ್ಸಿಗೆ ತೋರ್ಪಡಿ ಮಾಡುವದು. ... ... ... ॥೭॥

೧೨ ವಚನ॥ ತಾ॥ ಇನ್ನು ಸಮುದ್ರದಲ್ಲಿ ಉದಕದ ಬಿಂದುವಿಗೆ ತನ್ನ ಆಕಾರಭೇದದಿಂದ ಸಮುದ್ರಕ್ಕು ತನಗು ಭೇದವೆಂಬುವದು ಉಂಟು ಎಂಬದಾಗಿ ಭಾವನೆಯುನ್ನುಂಟು ಮಾಡುವಂತೆಯೇ ಜೀವ ನೂ ತತ್ಪದಾರ್ಥವಾದ ಈಶ್ವರನಿಗಿಂತಲೂ ಆಕೃತಿ ಭೇದದಿಂದ ಬೇ ರಾಗಿರುಹನು, ಎಂತಲೂ ಒಂದು ಬಗೆಯಾದ ಶಾಬ್ದಬೋಧೆಯುನ್ನು ಉಂಟುಮಾಡತಕ್ಕದ್ದಾಗುವದು.

೧೩ ವಚನ॥ ತಾ॥ ಜಗತ್ತಿನಲ್ಲಿ ಅಂತರಿಕ್ಷದೊಳು ಭಾಸಮಾನವಾ ಗಿರುವ ಸೂರ್ಯಬಿಂಬವು ಭೂಮಿಯಲ್ಲಿರುವ ಜಲದಲ್ಲಿ ಪ್ರತಿಫಲಿಸು ವದು. ಈ ರೀತಿಯಾಗಿ ಬಿಂಬಪ್ರತಿ ಬಿಂಬಭಾವ ವುಂಟಾಗುವ ಸಂ ದರ್ಭದಲ್ಲಿ ಬಿಂಬಕ್ಕಿಂತಲು ಪ್ರತಿಬಿಂಬವು ಬೇರೆಯಾಗಿ ಇಲ್ಲದಿದ್ದರು ಮತ್ತೊಂದು ದೇಶದಲ್ಲಿರುವಿಕೆ ಯೆಂಬರ್ಥವುಳ್ಳ ಅನ್ಯದೇಶ ಸ್ಥಿತತ್ವ ವೆಂಬ ಸಂಬಂಧದಿಂದ ಹ್ಯಾಗೆ ಭೇದವೊ, ಅದರಹಾಗೆಯೇ ಪ್ರಕೃತ ದಲ್ಲಿ ತತ್ಪದಾರ್ಥವಾದ ಈಶ್ವರನಿಗಿಂತಲು ತ್ವಂಪದಾರ್ಥವಾದ ಜೀವ ನು ಬೇರಲ್ಲದಿದ್ದರೂ ಬಿಂಬ ಪ್ರತಿಬಿಂಬ ಭಾವದ ಮೂಲಕವಾಗಿ ಪ್ರ ಕೃತಿಸಂಸರ್ಗದಿಂದ ಅನ್ಯದೇಶ ಸ್ಥಿತತ್ವವೆಂಬ ಸಂಬಂಧ ಮೂಲಕ

---

ರ್ಥಂಗಳಾದೀಶ್ವರಜೀವರ್ಗೆಬಂದುದೆಂದು ಪರಿಣಾಮತ್ವಮುಳವ ಡುವುದೂ ॥೭॥

೧೨ ಮೂ॥ ವ॥ ವಾರಿಯುಲ್ಲಿಕಣಕ್ಕೆಭಾವಭೇದವೆಂತುಂಟಾತತ್ಪದಾ ರ್ಥನಾದೀಶ್ವರಂಗೆ ತ್ವಂಪದಾರ್ಥನಾದ ಜೀವನಭೇದವಹಾಯಿತೆಂ ಬಶಾಶ್ವತಪ್ರಶಂಸೆಗೊಡಲಾಗುವುದೂ ॥೮॥

೧೩ ಮೂ॥ ವ॥ ಬಿಂಬಕೆ ಪ್ರತಿಬಿಂಬವೆಂತನನ್ಯಸಬಂಧಮುಳ್ಳದಾ ದಾದೊಡಂಭಿನ್ನದೇಶಸ್ಥಿತಿವೆಂತುಂಟಂತುತತ್ಪದಾರ್ಥೇಶ್ವರದಾ ಕೋಪಜೀವ್ಯವಾದ, ತ್ವಂಪದಾರ್ಥಜೀವನಿವನಾತಂ ಗಭಿಮು ಖಭಿನ್ನದೇಶಸ್ಥಿತನೆಂಬದಾಷ್ಟಾರ್ಂತಿಕತ್ವಂಬೊಂದುವದೂ॥೯॥

ವಾಗಿಯೇ ಮೇಲಿನ ದೃಷ್ಟಾಂತದಾರ್ಷ್ಟಾಂತಿಕವು ಸಮನಿಸುವದೆಂಬ ದಾಗಿಯು ಶಾಬ್ದಬುದ್ಧಿಯನ್ನು ತಲೆಹಾಕುವಂತೆ ಮಾಡುವದು. ॥೯॥

೧೪ ವಚನ॥ ತಾ॥ ಪೂರ್ವದೊಳು ತತ್ತ್ವಮಸಿವಾಕ್ಯಾರ್ಥವಿಚಾರದಲ್ಲಿ ಶ್ವೇತಕೇತುವೆಂಬ ಮಹಾಮುನಿಯು ತನ್ನ ಮಗನಾದ ಉದ್ದಾಲಕನಿಗೆ ಬ್ರಹ್ಮವಿದ್ಯಾಭ್ಯಾಸವನ್ನು ಮಾಡಿಸುವ ಸಂದರ್ಭದಲ್ಲಿ ತನ್ನ ಮಗನಿಗೆ ಪ್ರತ್ಯಗ್ಬ್ರಹ್ಮೈಕ್ಯ ಜ್ಞಾನವುಂಟಾಗುವದಕ್ಕೋಸ್ಕರ ತತ್ತ್ವಮಸಿಯೆಂಬದಾಗಿ ಛಾಂದೋಗ್ಯೋಪನಿಷತ್ತಿನಲ್ಲಿ ಒಂಭತ್ತುಬಾರಿ ಉಪದೇಶ ಮಾಡಿರುವನು ಎಂಬದಾಗಿ ನಿರೂಪಿಸಲ್ಪಟ್ಟಿತು. ಆ ಸ್ಥಲದಲ್ಲಿ ಒಂದು ಆವರ್ತಿಯೆ ವಿಶದವಾಗಿ ಉಪದೇಶ ಮಾಡುವದರಿಂದ ಇಷ್ಟಸಿದ್ಧಿಯಾಗುತ್ತಿರಲಾಗಿ ಒಂಭತ್ತಾವರ್ತಿ ಉಪದೇಶ ಮಾಡುವಿಕೆಯು ನಿರರ್ಥಕವೆಂಬದಾಗಿ ಆಕ್ಷೇಪವು ಬಂದೊದಗಿದರೆ ಅಂತಪ್ಪ ಆಕ್ಷೇಪವು ನಿವೃತ್ತಿಯಾಗುವ ದಕ್ಕೋಸ್ಕರವಾಗಿ ಈ ಮೇಲಾಭಾಗದೊಳು ವಿವರಿಸಿದ ಒಂಭತ್ತು ಬಗೆಯಾದ ದುರ್ಯುಕ್ತಿಗಳಿಂದ ಭಿನ್ನಭಿನ್ನವಾಗಿವಾಕ್ಯಾರ್ಥ ಜ್ಞಾನವು ತೋರುತ ಬಂದರೆ ಆಯಾಯ ದುರೂಹೆಯೆಂಬ ಕಾಡನ್ನು ಸದ್ಯುಕ್ತಿಯೆಂಬಮೊನೆಯಾದಕೊಡಲಿಯಿಂದ ಛೇದಿಸಿ ಮುಖ್ಯಾರ್ಥವನ್ನು ಸಾಧಿಪಿಸುವದಕ್ಕೋಸ್ಕರ ಒಂಭತ್ತಾವರ್ತಿ ನಿರೂಪಿಸಲ್ಪಟ್ಟಿತೆಂದು ಆ ಶಂಕಾನಿವೃತ್ತಿ ಪೂರ್ವಕವಾಗಿ ನಿರೂಪಿಸಲ್ಪಟ್ಟಿತು. .. ... ... ॥೧೦॥

೧೫ ವ॥ ತಾ॥ ಎಲೈ ಮನಸ್ಸೆಂಬವನಿಪಾಲನೆ ಲಾಲಿಸು ಹಿಂದೆಹೇಳಿದ ಒಂಭತ್ತು ವಿಧಗಳಲ್ಲಿ ದೋಷವು ಹ್ಯಾಗೆಬಂದುದು ಅದಕ್ಕೆದೋಷತ್ವವು ಸಂಭವಿಸುವದಕ್ಕೆ ನಿಮಿತ್ತವೇನು? ಎಂದರೆ ವಿವರಿಸುವೆನು. ಸಾವಧಾನದಿಂದ ಗಮನಿಸುವನಾಗು, ಪ್ರತಿಯೊಂದು ಉಪನಿಷತ್ತಿನ ಆ

---

೧೪ ಮೂ॥ ವ॥ ಈವಂಭತ್ತುದೋಷಗಳಂಕಳೆಯಲಾಗಿತತ್ತ್ವಮಸಿಯೆಂಬವಾಕ್ಯವೊಂದನೆ ವಂಭತ್ತುವೇಳೆಪೇಳಿದುದೂ ಆದರೀದೋಷನಿವಾರಣಪ್ರಕಾರವೆಂತೂ ॥೧೦॥

೧೫ ಮೂ॥ ವ॥ ಕೇಳೆಲೆಪರಿವೃಢನೆ ಅರ್ಥವಾದದಲ್ಲಿ ಮೋಹದಿಂದತಿಶಯಂಬಂದುದು । ಉಪಾಸನಾಪರತೆಯಲ್ಲಿ ಕಾರ್ಯದಿಂದಾಕೋ

ಖ್ಯಾಯಿಕೆಯಲ್ಲಿಯೂ ಅರ್ಥವೆಂಬುವದುಂಟು. ಅರ್ಥವಾದವೆಂದರೆ ಆವಾಕ್ಯಾರ್ಥಕ್ಕೆ ಸ್ವಾರ್ಥದಲ್ಲಿ ತಾತ್ಪರ್ಯವಿಲ್ಲವೆಂದರ್ಥವು, ಅದು ಅಮುಖ್ಯಾರ್ಥವೆಂದರಿವುದು, ಆದಕಾರಣ ಆ ಅರ್ಥವಾದಾನುಸಾರವಾಗಿ ಪ್ರಕೃತವಾಕ್ಯಕ್ಕೆ ಅರ್ಥವನ್ನು ಹೇಳಿ ಅದನ್ನೆ ಮುಖ್ಯಾರ್ಥವನ್ನಾಗಿ ಹೇಳಿದರೆ ಭ್ರಾಂತಿಯೆಂಬುವದೇ ದೋಷ,ಹಾಗಿಲ್ಲದೆಈವಾಕ್ಯವುಉಪಾಸನಾಪರವೆಂದು ಅರ್ಥವನ್ನು ಹೇಳಿದರೆ ಅದುಕಾರ್ಯರೂಪವಾಗಿರುವದರಿಂದ ಆರೋಪರೂಪವಾದ ದೋಷವು ತಲೆದೋರುವದು. ಅದನ್ನು ಬಿಟ್ಟುಕಾರಣ ಕಾರ್ಯಸಂಬಂಧವನ್ನು ಉಪನ್ಯಾಸಮಾಡಿದರೆ ನಾಮರೂಪ ಸಂಬಂಧರೂಪವಾದ ತೊಂದರೆಯು ಸಂಭವಿಸುವದು. ಅಥವಾ ವಿಕಾರ ವಿಕಾರಿದೋಷವು ಸ್ಫುಟವಾಗುವದು. ವಿಶೇಷಣ ವಿಶೇಷ್ಯ ಸಂಬಂಧವನ್ನು ಹೇಳುವ ಸಂದರ್ಭದಲ್ಲಿ ಪ್ರಧಾನೋಪಸರ್ಜನತ್ವವೆಂಬ ದೋಷವು ಮುಂದಕ್ಕೆ ಬರುವದು. ಇದನ್ನು ತ್ಯಜಿಸಿ ಹಾಲು ಮೊಸರಿನದೃಷ್ಟಾಂತವನ್ನು ಹೇಳತೊಡಗಿದರೆ ಪರಿಣಾಮ ಪರಿಣಾಮಿಯೆಂಬ ದೋಷವು ವ್ಯಕ್ತವಾಗುವದು. ಇದನ್ನುದಾಟಅಂಶಾಂಶಿಗಳೆಂಬದಾಗಿ ಹೇಳಲುದ್ಯುಕ್ತರಾದರೆ ಉಚ್ಚತ್ವನೀಚತ್ವಗಳು ಸಿದ್ಧವಾಗಿರುವವು. ಬಿಂಬಪ್ರತಿಬಿಂಬ ಭಾವವನ್ನಾಶ್ರಯಿಸಿದರೊವ್ಯಾವಹಾರಿಕವಾಗಿ ದೇಶಭೇದದಿಂದ ಭಾಸಕತ್ವ, ಭಾಸ್ಯತ್ವಗಳೆಂಬಿವು ಸಮನಿಸುಸವು. ಆದುದರಿಂದಲೇ ವಿವೇಕದಿಂದ ಕ್ರಮವಾಗಿ ಆಯಾಯದೋಷಗಳನ್ನು ಕಂಡು ಹಿಡಿದು ಅವುಗಳನ್ನೆಲ್ಲಾ ಕಳೆಯುತ ಬರಲಾಗಿ ॥

---

ಪಂಬಂದುದು? ಗುಣಸಾದೃಶ್ಯದೊಳಗೇಕಧರ್ಮಂ ಬಂದುದು! ಕಾರಣಕಾರ್ಯಸಂಬಂಧದಲ್ಲಿ ನಾಮರೂಪಂಗಳು ಬಂದವು । ವಿಶೇಷಣ ವಿಶೇಷ್ಯಸಂಬಂಧದಲ್ಲಿ ಪ್ರಧಾನೋಪಸರ್ಜನತ್ವಂ ಬಂದುದು । ಕ್ಷೀರದಧಿತ್ವದಲ್ಲಿ ಪರಿಣಾಮಂ ಬಂದುದು । ಅಶಾಂಶಿಕತ್ವದೊಳಗುಚ್ಚನೀಚತ್ವಂಬಂದುದು । ಬಿಂಬಪ್ರತಿಬಿಂಬಭಾವದಲ್ಲಿ ದೇಶಭೇದನಿಮಿತ್ತದಿಂಭಾಸಕಭಾಸ್ಯತ್ವಂಬಂದುದು । ಈದೋಷಗಳಂ ಕಳೆಯಲಾಗಿ ॥೧೧॥

೧೬ ಶ್ಲೋ॥ ತಾ॥ ದ್ರವ್ಯಕ್ಕೆ ತನಗಿಂತಲು ಇತರವಾದ ದ್ರವ್ಯದೊಡನೆ ಸಂಯೋಗ ಸಂಬಂಧವೆಂಬ ಸಂಸರ್ಗವು, ಮತ್ತು ವಿಶೇಷಣವಿಶೇಷ್ಯ ಭಾವರೂಪವಾದ ಸಂಬಂಧವು ಎಂಬವುಗಳನ್ನು ಇಟ್ಟುಕೊಂಡು ಉಂಟಾಗುವ ವಾಕ್ಯಾರ್ಥವು ಸಮ್ಮತವಾದದ್ದಲ್ಲವು. ಅದು ಯಾತಕ್ಕಂದರೆ ? ಅಖಂಡನಿರ್ಮಲ ಸಚ್ಚಿದಾನಂದಾ ದ್ವಿತೀಯವಾದ ಬ್ರಹ್ಮ ಪದಾರ್ಥದಲ್ಲಿ ಸಂಯೋಗಾದಿ ಸಂಸರ್ಗವಾಗಲಿ, ವಿಶೇಷಣ ವಿಶೇಷ್ಯಭಾವಾದಿ ಸಂಬಂಧವಾಗಲಿ, ಈ ಯಾವದೂ ಇಲ್ಲವು. ಅಥವಾ ಇವುಗಳಲ್ಲಿ ಯಾವದಾದರೊಂದು ತೋರುತಿದ್ದಾಗ್ಯೂ ಅದು ವ್ಯಾವಹಾರಿಕವಾಗಿರುವದಲ್ಲದೆ ಪರಮಾರ್ಥವಾಗಿ ವಿವೇಕದಿಂದ ವಿಚಾರವಂ ಮಾಡುತ ಬಂದರೆ ಸೂರ್ಯೋದಯ ಕಾಲದಲ್ಲಿ, ಅಂಧಕಾರವು ನಿವೃತ್ತಿಯಂ ಪಡಿಯುವಂತೆ ತೋರದೆಯೇ ಹೋಗುವದು.

ಮತ್ತು ಸಕಲರಾದ ಆತ್ಮಾನುಭವ ಪರಾಯಣ ಪಾರೀಣರಾದ ಯೋಗಿಗಳೆಲ್ಲರು ಶಾಸ್ತ್ರಾಧ್ಯಯನದಿಂದಲು ತಮ್ಮಗಳ ಅಮೋಘವಾದ ಅನುಭವ ಬಲದಿಂದಲೂ ಈ ಅರ್ಥವನ್ನೇ ಅಂದರೆ ಆತ್ಮಪದಾರ್ಥವು ಅಖಂಡವಾಗಿಯು ಅದ್ವಿತೀಯವಾಗಿಯು, ದೋಷಗಂಧರಹಿತವಾಗಿಯು ನಿರ್ಧರ್ಮಿಕವಾಗಿಯು, ಸಚ್ಚಿದಾನಂದರೂಪವಾಗಿಯು,ಇರುವದೆಂಬದಾಗಿಯೇ ಸಿದ್ಧಾಂತವನ್ನು ಮಾಡಿರುವರು. ಆದುದರಿಂದಲೇ ನಮ್ಮ ಪೂರ್ವಾಚಾರ್ಯರಾದ ಶ್ರೀವಿದ್ಯಾರಣ್ಯಾದಿ ಜಗದಾಚಾರ್ಯರೆಲ್ಲರು ಇತರ ದುರ್ಮತಗಳನ್ನು ಖಂಡನ ಮಾಡುವದರ ಮೂಲಕ ಇದೇ ಅರ್ಥವನ್ನೆ ಸಿದ್ಧಾಂತವನ್ನು ಮಾಡಿರುವರು.

೧೭ ವ ॥ ತಾ॥ ಈರೀತಿಯಾಗಿ ಹೇಳಿರುವದರಿಂದಲೇ,

೧೮ ವ ॥ ತಾ॥ ಶಬ್ದಶಾಸ್ತ್ರ ಅಂದರೆ ವ್ಯಾಕರಣ ಶಾಸ್ತ್ರಪಾರಾವಾರಪಾರಗಾಮಿಗಳಾದ ಪಂಡಿತರು ಸಮಾನ ವಿಭಕ್ತಿಯುಳ್ಳ ಎರಡು

---

೧೬ ಮೂ॥ ಶ್ಲೋ॥ ಸಂಸರ್ಗೋವಾವಿಶಿಷ್ಟೋವಾ ವಾಕ್ಯಾರ್ಥೋ ವಿದುಷಾಂಮತಃ ॥೧೬॥

೧೭ ಮೂ॥ ವ॥ ಇಂತೆಂದರಾಗಿ ॥೧೭॥

ಪದಗಳಿಗೆ ಐಕ್ಯವನ್ನೆ ಹೇಳಿರುವರು. ಆದಾಗ್ಯು ಅಂದರೆ ಸಮಾನ ವಿ ಭಕ್ತಿಕಗಳಾದ ಎರಡು ಪದಗಳರ್ಥಗಳಿಗೆ ಐಕ್ಯಬಂದಾಗ್ಯು ಎರಡುಪ ದಗಳಿಗೆ ಮಾತ್ರ ಐಕ್ಯವು ಬಾರದಾದಕಾರಣ ಜೀವೇಶ್ವರರಿಗೆ ಪರ ಸ್ಪರ ಭೇದವೇ ಬಂದುದೆಂದು ಉದಹರಿಸುವ ಶಬ್ದಶಾಸ್ತ್ರಜ್ಞರ ಪಕ್ಷವನ್ನು.

೧೫ ಮ॥ ತಾ॥ ಮತ್ತು "ಗುಣಾದಿಕಂ ಗುಣ್ಯಾದಿನಾಭಿನ್ನಾಭಿ ನ್ನಂ,, ಎಂಬದಾಗಿ ಮೀಮಾಂಸಕರು ಗುಣಾದಿಗಳು ಗುಣಿಗಳಾದ ದ್ರವ್ಯಾದಿಗಳಿಂದ ಭಿನ್ನಾಭಿನ್ನಗಳೆಂಬದಾಗಿ ಉಪನ್ಯಸಿಸುವರು, ಇ ನ್ನು ಗುಣಾದಿಗಳು ಗುಣಿಗಳಾದ ದ್ರವ್ಯಗಳಿಂದ ಅಭಿನ್ನಗಳು ಎಂಬ ದಾಗಿ ವೈಶೇಷಿಕರು ವಿಶದ ಪಡಿಸಿರುವರು, ಹೀಗೆ ಹೇಳುವದರಿಂದ ಗುಣದ್ರವ್ಯಗಳಿಗೆ ಸ್ವರೂಪೈಕ್ಯವಿದ್ದರೂ ಬಾಧಕವಿಲ್ಲವು. ಆದರೆ ದ್ರ ವ್ಯಕ್ಕಿಂತಲೂ ಇತರವಾದ ಸ್ಥಲದಲ್ಲಿ ಗುಣಗಳಿರುವದರಿಂದ ಗುಣಗಳಿ ಗೆ ವ್ಯಾಪಕತ್ವವು ಬಂದುದು. ಆದುದರಿಂದಲೆ ಇದರಹಾಗೆ ಜೀವನಿ ಗು ಆತ್ಮ ಪದಾರ್ಥಕ್ಕಿಂತಲು ಬೇರೆ ಸ್ಥಲದಲ್ಲಿ ವೃತ್ತಿತ್ವ ವಿರುವದ ರಿಂದ ಭೇದವು ಸಿದ್ಧವಾಯಿತೆಂಬ ಈ ತಾರ್ಕಿಕರ ಪಕ್ಷವನ್ನು ಪೂ ರ್ವಪಕ್ಷವನ್ನಾಗಿ ಮಾಡಿಕೊಂಡು ಮಾಯಾವಿದ್ಯಗಳು, ಇನ್ನು ಇವು ಗಳ ಕಾರ್ಯಗಳು ಭಾಸಮಾನವಾಗಿರುವ ಸಮಯದಲ್ಲಿ ವ್ಯಾವಹಾರಿಕ ವಾಗಿ ಈರೀತಿಯಿಂದ ಭಾಸಮಾನಗಳಾಗಿರುವವು. ಶಾಸ್ತ್ರಾನುಭವ ವಿವೇಕಾದಿಗಳಿಂದ ಇವುಗಳೆಲ್ಲ ನಿವರ್ತಿಸಲು ಅಂದರೆ,—ಉಪಾಧಿಪರಿ ತ್ಯಾಗವಾಗಲು ಅಖಂಡ ಚಿದಾನಂದಾ ದ್ವಿತೀಯ ವಸ್ತುಮಾತ್ರವೆ ಇರುವದೆಂಬದಾಗಿ ಜಗದಾಚಾರ್ಯರು ದುರ್ಮತಖಂಡನ ಪೂರ್ವಕ ವಾಗಿ ಸ್ವಮತವನ್ನು ನಿರ್ಧರಿಸಿದರು. ಇದರಂತೆ ಆ ಚಿನ್ಮಾತ್ರ ಸ್ವ

---

೧೪ ಮೂ॥ ಮ॥ ಸಮಾನವಿಭಕ್ತಿಕವಾದ ಪದಂಗಳಿಗೆ ಶಾಬ್ದೀಕರ್ಕೈ ಕ್ಯಮಂಸಂಪಾದಿಸಿದರೂ ॥೧೪॥

೧೫ ಮೂ॥ ಮ॥ ಗುಣದ್ರವ್ಯಂಗಳಿಗೈಕ್ಯಮಂವೈಶೇಷಿಕರಂಗೀಕ ರಿಸಿದರೂ ॥೧೫॥

ರೂಪವೇ ನಾನೆಂಬದಾಗಿ ನಿನಗೆ ಯಾವಾಗಲಾದರೆ ಅಚಲವಾದ ಅನುಭವವು ಉಂಟಾಗುವದೊ? ಆಗಲೇ ನೀನು ಜೀವತ್ವವೆಂಬ ಭ್ರಾಂತಿಯನ್ನು ನೀಗಿಕೊಂಡು ಜೀವನ್ಮುಕ್ತನಾಗಿ ಪ್ರಕಾಶಿಸುವಿ.

೨೦ ವಚನ ॥ ಶ್ಲೋ ॥ ತಾ॥ ಅದರ ವಿವರ ವೆಂತೆಂದರೆ,—ಸ್ಫುಟವಾಡುವೆನು, ಅವಗಾಹಿಸುವಾಧವನಾಗು, ಆತ್ಮವೇತ್ತನಾದ ಮಹಾಗುರುವನ್ನು ಶ್ರದ್ಧಾಭಕ್ತಿಗಳಿಂದ ಚನ್ನಾಗಿ ಸೇವಿಸಿ ಆ ಮಹಾನುಭಾವನಿಂದ ಉಪದಿಷ್ಟವಾದ ಮಹಾವಾಕ್ಯಶ್ರವಣದಿಂದ ಮನನಾದಿಗಳ ದ್ವಾರಾಪರಿಪಕ್ವವಾದ ಜ್ಞಾನವು ಆದುವರಿಗೆ ಇವನು ಮಾಡಿದ ಸಮಸ್ತ ಕರ್ಮರಾಶಿಯನ್ನು ಜ್ವಾಲಾಜಾಲದಿಂದ ಕೂಡಿರುವ ಅಗ್ನಿಯು ಜೀರ್ಣತೃಣವನ್ನು ಯಾವರೀತಿಯಿಂದ ಭಸ್ಮಮಾಡುವದೊ? ಅದರಂತೆಯೇ ನಿಮಿಷಮಾತ್ರದಲ್ಲಿ ಹಾಳುಮಾಡುವದೆಂದು ತಿಳಿಯುವದು. ಮತ್ತು ಗುರುಮುಖವಾಗಿ ಶ್ರವಣಮಾಡಿದ ಮಹಾಕಾವ್ಯಾರ್ಥವಿಚಾರದಿಂದುಂಟಾದ ಅಮೋಘವಾಗಿರುವ ಬ್ರಹ್ಮಜ್ಞಾನವು, ಜನನಮರಣ ಪ್ರವಾಹ ರೂಪವಾಗಿರುವ ಸಂಸಾರಕ್ಕೆ ಮೂಲಕಾರಣವಾದ ಅಜ್ಞಾನವೆಂಬ ಗಾಢಾಂಧಕಾರಕ್ಕೆ ಮಧ್ಯಾಹ್ನಕಾಲದೊಳು ಆಕಾಶಮಧ್ಯದಲಿ ರಾರಾಜಮಾನವಾದ ಪ್ರಚಂಡಭಾಸ್ಕರನಂತೆ ಇರುವದು. ಅಂದರೆ,—ಬಹು ಜನ್ಮಾರ್ಜಿತ ಪುಣ್ಯರಾಶಿ ಪರಿಪಾಕದಿಂದ ಸದ್ಗುರುಸೇವಾದಿಗಳ ಮೂಲಕ ಆ ಮಹಾನುಭಾವನಿಂದ ಮಹಾವಾಕ್ಯವನ್ನು ಶ್ರವಣವನ್ನು ಮಾಡಿ ನಿಧಿಧ್ಯಾಸನಾದಿಗಳಿಂದ ಅಖಂಡ ಸಚ್ಚಿದಾನಂದ ಸಾಕ್ಷಾತ್ಕಾರವೆಂಬ ಅಸದೃಶ ಪ್ರಭೆಯುಳ್ಳ ಸೂರ್ಯೋದಯವುಂಟಾಗಲು ಸಂಸ್ಕಾರ ಮೂಲಕಾರಣವಾದ ಅಜ್ಞಾನಾಂಧಕಾರವು ಧ್ವಂಸ

---

೨೦ ಮೂ॥ ವ॥ ಅದೆಂತೂ ॥೧೫॥

ಮೂ॥ ಶ್ಲೋ॥ ಪರೋಕ್ಷಬ್ರಹ್ಮವಿಜ್ಞಾನಂ ಶಬ್ದಂದೇಶಿಕಪೂರ್ವಕಂ॥ಬುದ್ಧಿಪೂರ್ವಕೃತಂಪಾಪಂಕೃತ್ಸ್ನಂದಹತಿವಹ್ನಿವತ್॥೧೬॥

ಮೂ॥ ಶ್ಲೋ॥ ಪ್ರತ್ಯಕ್ಷಂಬ್ರಹ್ಮವಿಜ್ಞಾನಂಶಬ್ದಂದೇಶಿಕಪೂರ್ವಕಂ ॥ ಸಂಸಾರಕಾರಣಾಜ್ಞಾನತಮಸಃಚಂಡಭಾಸ್ಕರಃ ॥೧೭॥

ವಾಗಿ ಪುನರ್ಜನ್ಮರಹಿತವಾಗಿ ಶಾಶ್ವತವಾಗಿರುವ ಅಖಂಡಾತ್ಮನಾಗಿನಿಲ್ಲುವ ನೆಂದಾಶಯವು.

೨೧ ವಚನ॥ ತಾ॥ ಈ ಪ್ರಕಾರವಾಗಿ ಜಗತ್ಪೂಜ್ಯರಾಗಿ ಅಧ್ಯಾತ್ಮ ಶಾಸ್ತ್ರಾನುಭವ ಪಾರಾವಾರ ಪಾರಗಾಮಿಗಳಾದ ಶ್ರೀಮದ್ವಿದ್ಯಾರಣ್ಯ ಮಹಾಸ್ವಾಮಿಗಳವರ ವಚನಾಮೃತವು ವಿರಾಜಿಸುತಲಿರ್ಪುದು. ಈ ಅರ್ಥದಲ್ಲಿ ಲೇಶಾಂಶವಾದರೂ ಸಂದೇಹವಿಲ್ಲವೆಂಬದಾಗಿ ಶಬ್ದಪ್ರಮಾಣ ಪದ್ಧತಿಯನ್ನು ಸಪ್ರಮಾಣವಾಗಿಯು, ಸೋದಾಹರಣವಾಗಿಯು, ಸಯುಕ್ತಿಕವಾಗಿಯು, ದಯಾರ್ದ್ರಭಾವದಿಂ ಮಂದೋಪಕಾರಕ್ಕಾಗಿ ಸುಲಭ ಶೈಲಿಯಿಂದ ವಿಶದಪಡಿಸಿ ಇನ್ನೊಂದು ಬಗೆಯಿಂದ ವಿವರಿಸುತಲಿದ್ದಾನೆ, ಅದರ ವಿವರ ವೆಂತೆಂದೊಡೆ,

ಇಂತು ಶಬ್ದಪ್ರಮಾಣ ಪದ್ಧತಿಯು ಮುಗಿದುದು.

ಪದ್ಧತಿ ೧೯ ಕ್ಕೆ ಮಂಗಳಮಸ್ತು.

## ೨೦ ಅರ್ಥಾಪತ್ತಿ ಪ್ರಮಾಣ ಪದ್ಧತಿ ಪ್ರಾರಂಭವು.

೧ ಜಂಪೆ॥ ತಾ॥ ಅರ್ಥಾಪತ್ತಿ ಪ್ರಮಾಣವಂದರೆ ಅರ್ಥಾತ್ ಹೇಳತಕ್ಕ ಅಂಶವು ಸಿದ್ಧವಾಗುವಿಕೆಯು, ಅದು ಪ್ರಕೃತದಲ್ಲಿ ಹ್ಯಾಗೆ ಸಮ

---

೨೧ ಮೂಲ॥ ವ॥ ಇಂತೆಂದು ವಿದ್ಯಾರಣ್ಯಮುನೀಂದ್ರವಚನಮಿರ್ಪುದಾಗಿ। ಈಅರ್ಥದಲ್ಲಿ ಸಂದೇಹವಿಲ್ಲವೆಂದು ಶಬ್ದಪ್ರಮಾಣ ಪದ್ಧತಿಯಂ ಸಿದ್ಧವತ್ಕರಿಸಿ ಇನ್ನೊಂದು ಪ್ರಕಾರಮಂ ಪೇಳುತಿರ್ದಪನದೆಂತೆನೆ ॥ ೮॥

ಇಂತುಶಬ್ದಪ್ರಮಾಣ ಪದ್ಧತಿಯು ಮುಗಿದುದು.

ಪದ್ಧತಿ ೧೯ಕ್ಕೆ ಮಂಗಳಮಸ್ತು.

## ೨೦ ಅರ್ಥಾಪತ್ತಿ ಪ್ರಮಾಣ ಪದ್ಧತಿ ಪ್ರಾರಂಭವು.

೧ ಮೂ॥ ಜಂಪೆ॥ ಕರ್ತೃತ್ವಭೋಕ್ತೃತ್ವಗಳಿಗೆ ದೂರನು ವಿಶ್ವ
ಭೋಕ್ತೃತ್ವಘಾತೃತ್ವಪದವೀವಿಹೀನಂ ॥ ೧ ॥

ನ್ವಯಿಸುವದೆಂದರೆ, ಒಂದೊಂದನ್ನು ದೋಷವನ್ನಾಗಿ ನಿಷೇಧಿಸುತ ಬಂದರೆ ಕಡೆಗೆ ಅರ್ಥಾತ್ ಉಳಿದ ವಸ್ತುವೆ ಆತ್ಮ ಪದಾರ್ಥವೆಂಬದಾಗಿ ಸ್ಪಷ್ಟವಾಗುವದು. ಅದರ ಬಗೆ ಎಂತೆಂದರೆ,—ಕರ್ತೃತ್ವಕ್ಕು ಅಂದರೆ ಕಾರ್ಯಗಳನ್ನು ಮಾಡುವಿಕೆ ಯೆಂಬದಕ್ಕು, ಭೋಕ್ತೃತ್ವಕ್ಕೆ ಅಂದರೆ ಆಯಾಯ ಕಾರ್ಯಗಳಿಂದುಂಟಾದ ಫಲಗಳನ್ನು ಅನುಭವಿಸುವದಕ್ಕು ಈ ಎರಡಕ್ಕು ಮತ್ತು ಪ್ರಪಂಚ ನಿರ್ಮಾತೃತ್ವವು, ಇನ್ನು ಪ್ರಪಂಚ ವಿಧಾರಣವು, ಎಂಬಿವೆರಡು ಧರ್ಮಗಳಿಗು ನಿರ್ಮಲಾತ್ಮ ಪದಾರ್ಥವು ದೂರವಾಗಿರುವದು. ‖೧‖ ಇನ್ನು ಆ ಪರಬ್ರಹ್ಮ ವಸ್ತುವು ಪ್ರಾಣಾಪಾನಾದಿ ವಾಯು ಪಂಚಕಶೂನ್ಯವಾಗಿಯು, ಮನಸ್ಸು, ಬುದ್ಧಿ, ಚಿತ್ತ, ಅಹಂಕಾರಗಳೆಂಬ ಕರಣಾದಿ ರಹಿತವಾಗಿಯು ಸತ್ವರಜಸ್ತಮಗಳೆಂಬಗುಣತ್ರಯವಿರಹಿತವಾಗಿಯುಇರುವಂಥಾದ್ದಾಗಿಯು, ಮತ್ತು ಅನ್ನಮಯ ಕೋಶವಾಗಿರುವ ಸ್ಥೂಲ ಶರೀರದಿಂದಲೂ, ಪ್ರಾಣಪಂಚಕ ಜ್ಞಾನೇಂದ್ರಿಯ ಪಂಚಕ, ಕರ್ಮೇಂದ್ರಿಯ ಪಂಚಕ, ಮನೋಬುದ್ಧಿಗಳೆಂಬ ಸಪ್ತದಶಾ ವಯವಾತ್ಮಕವಾದ ಸೂಕ್ಷ್ಮಶರೀರವು ಇಲ್ಲದಿರುವಂಥಾದ್ದಾಗಿಯು, ಅಜ್ಞಾನವೆಂಬ ಕಾರಣ ಶರೀರಶೂನ್ಯನಾಗಿಯು, ಇರುವದು. ‖೨‖ ಇನ್ನು ಅನೇಕ ವಿಧಗಳಾಗಿರುವ ಕರ್ಮಗಳಿಂದಲಾಗಲಿ, ಪ್ರಜೆಗಳಿಂದಲಾಗಲಿ, ಧನದಿಂದ ಲಾಗಲಿ, ತಿಳಿಯುವದಕ್ಕೆ ಆಗದಿರುವನು ಆತ್ಮನು ಯೆಂಬರ್ಥವುಳ್ಳ ಶ್ರುತ್ಯರ್ಥಾನುಸಾರವಾಗಿ ನಿತ್ಯನೈಮಿತ್ತಿಕಾದಿ ಕರ್ಮಜಾಲಗಳಿಂದಲು, ಅಜ್ಞೇಯನು, ಅಂದರೆ,—ನಿರಂತರದಲ್ಲಿಯು ಕರ್ಮಗಳನ್ನು ಮಾಡುತಿದ್ದರೆ ಆತ್ಮನನ್ನು ತಿಳಿಯುವದಕ್ಕೆ ಆಗುವದಿಲ್ಲವು. ಭೂತ ಭವಿಷ್ಯದ್ವರ್ತಮಾನಾದಿ ಕಾಲಗಳಿಂದ ಅಭೇದ್ಯನಾಗಿರುವನು. ಇನ್ನು ಉಚ್ಚಾವ

---

ಪ್ರಾಣವಿರಹಿತಮನೋಭಾವವಿರಹಿತಗುಣ । ಶ್ರೇಣೀರಹಿತನು ಶ್ರೇಯೊರಹಿತನೂ ‖೨‖

ಕರ್ಮಮಾರ್ಗಾವೇದ್ಯಕಾಲಚಕ್ರಾಭೇದ್ಯಧರ್ಮಮಾರ್ಗಾವೇದ್ಯ ಧಾತುಭಿರವೇದ್ಯಾ ‖೩‖

ಚೆಗಳಾಗಿರುವ ಧರ್ಮಗಳನ್ನು ಆಚರಿಸುವದರಿಂದಲು ತಿಳಿಯಲಿಕ್ಕೆ ಅಸಾಧ್ಯನು. ಹಿಂದೆವಿವರಿಸಲ್ಪಟ್ಟ ದೇಹಗತವಾಗಿರುವ ಏಳುಬಗೆಯಾದ ಧಾತುಗಳನ್ನು ವಿಂಗಡಿಸುವದರಿಂದಲು ತಿಳಿಯಲಶಕ್ಯ ನಾಗಿರುವನು. ॥೩॥ ಇನ್ನು ಯಾವದೊಂದು ವಿಧವಾದ ಗುಣಗಳಿಂದಲು ಕೂಡಿ ಇಲ್ಲದಂಥವನಾಗಿಯು, ಅಸತ್ವ, ಅಭಾನ, ಎಂಬಿವೆ ಮೊದಲಾದ ಆವರಣಶೂನ್ಯನಾಗಿಯು, ಮಾಯಾಮಲ, ಕಾರ್ಮಿಕಮಲ, ಆಣ್ವಿಕಮಲ, ಮುಂತಾದ ಮಲರಹಿತನಾಗಿಯು, ಅವಿದ್ಯಾದಿ ದೋಷಲೇಶರಹಿತನಾಗಿಯು, ಸ್ವತಃಪ್ರಕಾಶ ಮಾನನಾಗಿಯು, ಯಾವವಿಧವಾದ ಅಪಾಯುಗಳೂ ಯಿಲ್ಲದವನಾಗಿಯು, ಭೇದಗಂಧ ಶೂನ್ಯನಾಗಿಯು, ನಾಶರಹಿತನಾಗಿಯು, ನಿರ್ದುಷ್ಟನಾಗಿಯು, ದೇಶಕಾಲ ವಸ್ತುಗಳಿಂದ ಪರಿಚ್ಛೇದಿಸ ಲಳವಲ್ಲದವನಾಗಿಯು, ಇರುವ ನೆಂದರಿಯುವದು. ॥೪॥ ಅಲ್ಲದೆಯು ಕಳಾವಿರಹಿತನಾಗಿಯು, ಅಂದರೆ,-ಅಂಶಶೂನ್ಯನಾಗಿಯು, ಯಾವದೊಂದು ವಿಧವಾದ ಪದಾರ್ಥಪ್ರಾಪ್ತಿ ವಿಷಯಕವಾದ ಕಾಮನಾಶೂನ್ಯನಾಗಿಯು, ಭಾರರಹಿತನಾಗಿಯು, ಆಕಾರವಿಕಾರ ಶೂನ್ಯನಾಗಿಯು, ನಾಮರೂಪ ಕ್ರಿಯಾಜಾತಿಗಳಿಲ್ಲದವನಾಗಿಯು, ಪರಿಪೂರ್ಣನಾಗಿಯು ಅಂದರೆ,—ಸರ್ವವ್ಯಾಪಕನಾಗಿಯು, ಅನಾದಿಯಾಗಿಯು, ದಹರಾಕಾಶವೆಂಬ ಪುರದೊಳು ಇರುವನೆಂಬದಾಗಿ ಕರೆಯಲ್ಪಡುವಂಥವನಾಗಿಯು ಇರುವನು. ॥೫॥

೨ ವ॥ ತಾ॥ ಎಂದೀಪ್ರಕಾರವಾಗಿಯು ಇನ್ನು ನಾನಾಬಗೆಯಿಂದಲು ಯಾವ ಪರಮಾತ್ಮನು ಎಣಿಸಲ್ಪಡುವನೊ ! ಅಂತಪ್ಪ ಅಖಂಡ ಸಚ್ಚಿದಾನಂದ ಪರಬ್ರಹ್ಮನೇ ॥

ನಿರ್ಗುಣನಿರಾವರಣ ನಿರ್ಮಲನಿರಾಭಾಸಭರ್ಗನನಪಾಯುನಿರವದ್ಯನಚ್ಛೇದ್ಯಾ ॥೪॥
ನಿಷ್ಕಲನಿರಾಪೇಕ್ಷನಿರ್ಭರ ನಿರಾಕಾರಪುಷ್ಕಲಪುರಾಣತಮಪುರುಷಪುರುಹೂತಾ ॥೫॥

೨ ಮೂ॥ ವ॥ ಯಾವನಿಂತೆಣಿಸಲ್ಪಡುವನಾವಸ್ತುವೆ॥

೩ ಏಕತಾಳ ॥ ತಾ॥ ಪರಮಾರ್ಥವಾಗಿ ತಾನುಸ್ವತಃನಿರ್ಗುಣವಾಗಿದ್ದರೂ ನಿಮಿತ್ತಕಾರಣವು ಮತ್ತು ವಿವರ್ತೋಪಾದಾನಕಾರಣವೂ ಆಗಿವ್ಯಾವಹಾರಿಕವಾದ ಈವಿಚಿತ್ರವಾಗಿರುವ ರಚನಾ ವಿನ್ಯಾಸಗಳುಳ್ಳ ಪ್ರಪಂಚವನ್ನು ಉತ್ಪತ್ತಿ ಮಾಡುವದಕ್ಕೆ ಯೋಗ್ಯವಾದಂಥಾದ್ದಾಯಿತು. ॥೧॥ ಇನ್ನು ಮನಸ್ಸಿನಿಂದಲು ಚಿಂತಿಸಲಶಕ್ಯವಾಗಿರುವ ಜಗತ್ತನ್ನು ಧರಿಸುವದಕ್ಕು ಅಂದರೆ ಪಾಲಿಸುವದಕ್ಕು ತಕ್ಕ ಶಕ್ತಿಯನ್ನು ಅದಕ್ಕೆ, ಅನುಗುಣವಾದ ಜ್ಞಾನವನ್ನು ಹೊಂದಿರುವಂಥಾದ್ದಾಗಿರುವದು ॥೨॥ ಎಂದಿದೆಲ್ಲವಂ ಚನ್ನಾಗಿ ತಿಳಿದು ಇನ್ನು ಆಚಿಚ್ಛಕ್ತಿಗು, ಆಜ್ಞಾನಕ್ಕು, ಮತ್ತು ಆನಂದಕ್ಕು ಪರಸ್ಪರ ಭೇದವಿಲ್ಲವೆಂಬದಾಗಿಯು ಅರಿತು ಈ ವ್ಯಾವಹಾರಿಕದಲ್ಲಿಯೆ ನಾನು ಶಿಲುಕಿದವನಾಗಿದ್ದರೆ ಎಂದಿಗೂ ಬಿಡುಗಡೆಯು ಆಗುವದೇ ಇಲ್ಲವು. ॥೩॥ ಎಂಬವಿವೇಕದಿಂದ ಪಂಚಭೂತಗಳು ಇವುಗಳ ವಿಕಾರಗಳು ಇವುಗಳೆಲ್ಲ ಸಾರಾಸಾರವನ್ನು ಕಂಡು ಹಿಡಿಯುವದರ ಮೂಲಕ ಕ್ರಮವಾಗಿ ಬಂದೊಂದನ್ನು ಹಿಂದ ಹಿಂದಕ್ಕೆ ವಿವೇಚನೆಯಿಂದ ನಿಷೇಧಿಸಿ ॥ ೪ ॥ ಸಕಲ ದೋಷಗಳಿಗಿಂಲೂ ದೂರವಾಗಿರುವ ಅಖಂಡ ನಿರ್ವಿಕಾರ ವಸ್ತುವೆ ಸಮಸ್ತವೂ ಆಗಿರುವದು ಅಂದರೆ ಈ ಸಮಸ್ತ ಜಗತ್ತು ಆಬ್ರಹ್ಮ ಸ್ವರೂಪಕ್ಕಿಂ

---

೩ ಏಕತಾಳ ॥ ನಿರ್ಗುಣವಾದರುನಿಜದಿಪ್ರಪಂಚದ । ಸರ್ಗದಿಂ
ದಿದಪುಟ್ಟಿಸಲು ಯೋಗ್ಯವಾದಾ ॥೧॥
ಧರಿಸಲು ಮುಪಸಂಹರಿಸಲು ಪ್ರಾಣವಾಗಿರುವ ಶಕ್ತಿಗದು
ವೆಯಿರವೆಂತೆಂದೂ ॥೨॥
ಬಗೆವೂದುಮತ್ತಮಾಪರಮ ಶಕ್ತಿಗದಕ್ಕೆ । ಅಗಲಿಕೆಯುಂದಿಗು
ಮಾಗದೆಂದಿತ್ತು ॥೩॥
ತೋರಿದ ಭೂತವಿಕಾರಾದಿಪನ್ಯವ ಸಾರವಾದ ವಿಭಿನ್ನ ಶಕ್ತಿ
ಮೂಲಕದೀ ॥ ೪ ॥
ಯೋಚಿಸಿ ದೋಷದ ಯೋಗವಿಲ್ಲೆಂದ ದಕಲ್ಕಚರಿಸಲು ನಾ
ನೆಂದೀಚರಾಚರದೀ ॥೫॥

ತಲು ಬೇರೆಯಾಗಿಲ್ಲವು. ಅಂತಪ್ಪ ಅಶೇಷವಾದ ಸ್ವರೂಪವೇ ನಾನು ಎಂಬದಾಗಿ, ಅಸಾಧಾರಣವಾದ ತಿಳುವಳಿಕೆಯು, ಉಂಟಾದದ್ದೆ ಆದರೆ. ... ... ‖ ೫ ‖

೪ ವ॥ ತಾ॥ ಆಗಲೆ ಜೀವನ್ಮುಕ್ತನಾಗಲು ಯಾವ ಸಂಶಯವೂ, ಇಲ್ಲವೆಂಬದಾಗಿ ಅರ್ಥಾಪತ್ತಿ ಪ್ರಮಾಣ ಪದ್ಧಯಿಂ ಮನವೊಪ್ಪುವಂತೆ ಬಿತ್ತರಿಸಿ ಪೆಳಿ ಮತ್ತೊಂದು ರೀತಿಯಿಂದ ಪೇಳುತಿರುವನು ಅದರ ಬಗೆಯೆಂತೆಂದಡೆ.

ಇಂತು ಅರ್ಥಾಪತ್ತಿ ಪ್ರಮಾಣ ಪದ್ಧತಿಯು ಮುಗಿದುದು.

ಪದ್ಧತಿ ೨೦ಕ್ಕೆ ಮಂಗಳಮಸ್ತು.

## ೨೧ ಅಭಾವ ಪ್ರಮಾಣ ಪದ್ಧತಿ ಪ್ರಾರಂಭವು.

೧ ತ್ರಿಪುಡೆ॥ ತಾ॥ ಮರ್ತ್ಯರು ಅಮರ್ತ್ಯರು, ದನುಜರು, ಭುಜಂಗಮರು, ಮೊದಲಾದ ಯಾವದಾದರೊಂದು ಶರೀರವನ್ನು ಅಧಿಕರಿಸಿ ಅಂದರೆ ಉದ್ದೇಶವಮಾಡಿ ಆಶರೀಲಿವನ್ನಾಶ್ರಯಿಸಿರುವ ಇಂದ್ರಿಯಗಳಿಂದಲು, ಆ ಇಂದ್ರಿಯಗಳಿಗೆ ಗೋಚರವಾದ ವಿಷಯ ಸಮುದಾಯದಿಂದಲು, ಜಾಗ್ರತ್, ಸ್ವಪ್ನ, ಸುಷುಪ್ತಿಗಳೆಂಬ ಯಾವ ಅವಸ್ಥಾಭಾವದಲ್ಲಿ ಯಾದಾಗ್ಯೂ ॥೧॥ ಗೋಚರಿಸಿ ಅಂದರೆ ತಿಳುವಳಿಕೆಗೆ ಬಂದು ಪುನಃ ಮರೆಯಾಗುವ, ಇಲ್ಲವೆ ಸುತರಾಂ ನಾಶವಂ ಪಡೆಯುವ ಪದಾರ್ಥಗಳ ಸಮುದಾಯದ ಸ್ವಭಾವದಿಂದ ತರುವಾಯ ಯಾವ

---

೪ ಮೂ॥ ವ॥ ಆಗಲೆಜೀವನ್ಮುಕ್ತನಾಗುವೆಯಂದರ್ಥಾಪತ್ತಿಪ್ರಮಾಣ ಪದ್ಧತಿಯಂ ಹೃದ್ಯಂಗೈದು ಇನ್ನೊಂದು ಪ್ರಕಾರಮಂ ಪೇಳುತಿರ್ದಪನದೆಂತೆನೆ.

ಇಂತು ಅರ್ಥಾಪತ್ತಿ ಪ್ರಮಾಣ ಪದ್ಧತಿಯು ಮುಗಿದುದು.

ಪದ್ಧತಿ ೨೦ಕ್ಕೆ ಮಂಗಳಮಸ್ತು.

೨೧ ಅಭಾವ ಪ್ರಮಾಣ ಪದ್ಧತಿ ಪ್ರಾರಂಭವು.

೧ ಮೂ॥ ತ್ರಿಪುಡೆ॥ ಅನ್ಯದಾನೊಂದಾದ ದೇಹವನಧಿಕರಿಶಿ ವಿಷಯೇಂದ್ರಿಗಳಿಂ । ದಾವಬಳಿಯುಲ್ಲಾವವಸ್ಥಾಭಾವದಲ್ಲಿ ‖೧‖

ಲೋಕದಲ್ಲಿ ಹೋಗಿನೋಡಿದಾಗ್ಯೂ ‖ ೧ ‖ ಮೊದಲಿನ ಹಾಗೆ ಇಲ್ಲವು ಎಂಬ ನಿಶ್ಚಯವು ಕನಸಿನಲ್ಲಿ ಯಾವದಾದರೊಂದು ವಸ್ತುವು ಕಂಡು ಬಂದು ಪುನಃ ಜಾಗ್ರತ್ತಿನಲ್ಲಿ ನೋಡಲು ಹ್ಯಾಗೆ ಮಾಯಿಕವೆಂಬದಾಗಿ ಸಂದೇಹವಿಲ್ಲದೆ ಪ್ರತ್ಯಕ್ಷವಾಗುವುದೊ ಅದರಂತೆಯೇ ಇರುತಲಿರುವಲ್ಲಿ ‖ ೩ ‖ ಕೇವಲಾಜ್ಞಾನದಿಂದಲೇ ಉತ್ಪನ್ನವಾಗಿರುವ ಈವಿಚಿತ್ರವಾದ ಪ್ರಪಂಚವು ಇಲ್ಲದಿರುವ ಕಾಲದಲ್ಲಿ ಇದ್ದ ವಸ್ತುವು ಯಾವುದೋ ! ಅದೇವಸ್ತುವೇ ಈಮೇಲೆ ಉದಹರಿಸಿದ ಪ್ರಪಂಚ ಸರ್ವನಾಶಾನಂತರದಲ್ಲಿಯು, ಇರುವದು ಎಂಬರ್ಥವು ಹ್ಯಾಗೆ ನಿಲ್ಲುವಂಥಾದ್ದಾಗುವದು ಇದಕ್ಕೆ ತಕ್ಕಪ್ರಮಾಣವು ಯಾವುದು. ದೃಷ್ಟಾಂತವೆಂತು? ಎಂಬದಾಗಿ ಆಶಂಕವುಂಟಾದರೆ ‖ ೪ ‖ ಅದರನಿವೃತ್ತಿಯೆಂತೆಂದೊಡೆ? ಈ ಸಮಸ್ತ ಪ್ರಪಂಚವು ನಾಶವಾದ ಬಳಿಕ ಇದಕ್ಕೆ ಕಾರಣವಾಗಿರುವ ಆತ್ಮಪದಾರ್ಥವು ಅದರ ಜತೆಯಲ್ಲಿಯು ನಾಶವಂ ಪಡೆಯುವದಿಲ್ಲವು. ಹಾಗೆ ನಾಶವಾಗಿ ಹೋಗುವದೆಂದರೆ ಪುನಃ ಪ್ರಪಂಚ ಸೃಷ್ಟಿಯು ಉಂಟಾಗದೆ ಹೋಗಬೇಕಾಗುವದು ಆದುದರಿಂದಲೆ ಅಂದರೆ ಪುನಃ ಪ್ರಪಂಚವು ಸೃಷ್ಟವಾಗಿರುವದರಿಂದಲೆ ಇದಕ್ಕೆ ಮೂಲಕಾರಣವಾಗಿರುವ ಆತ್ಮವಸ್ತುವು ಪೂರ್ವಪ್ರಪಂಚ ನಾಶಾವಸರದಲ್ಲಿ ನಾಶವಾಗುವದಿಲ್ಲವೆಂದು ಸ್ಪಷ್ಟವಾಗುವದು. ಆದುದರಿಂದಲೇ ಆತ್ಮವಸ್ತುವು ಕಾಲತ್ರಯಾಬಾಧ್ಯವಾದ ಸತ್ತಾಗಿರುವುದು. ‖೫‖ ಹಾಗಾದರೆ ಪೂ

---

ತೋರಿಮರೆಯಾಗುತ್ತಿರುವ ಸಂಹಾರವೈದುವ ವಸ್ತುಸಂಘಾ|
ಚಾರದಿಂಮುಂದಿರ್ಪಭುವನದವಾರದಲ್ಲಿ ‖೧‖
ಮೊದಲ ಹಾಗಿರದೆಂಬ ನಿಶ್ಚಯಮುಂ ಕನಸಿನಂತಿರ್ಪ ತೋರ್ಕೆಯಂದವಿಕಾರಿಯೆಕರೀತಿಯಿಂ ಸಂಪಾದಿಸುವದೂ ‖೩‖
ಇಲ್ಲವೆಂಬುದಸಿರ್ದಕಾಲದೊಳಿರ್ದುದೆ ನಿದರಳಿವಿನಲಿತಾ | ನಿಲ್ಲವೆನಿಸದುದಾವುದದುವಿತಿನಿಲುವುದೆಂತೂ ‖೪‖
ಅದರೊಳೆನೆಯಾವಸ್ತುವುಂಟಾದದರದೆಸೆಯಿಂ | ಮರಳಿಯುವನೆಕ್ಕುದಯಮಾದುದೆದಿರ್ಪಕಾಲದೊಳುಂಟೆನಿಸಿಯೆ ‖೫‖

ರ್ಶೋಕ್ತ ಪ್ರಕಾರವಾಗಿ ಸಮಸ್ತ ಪ್ರಪಂಚವೂ ನಾಶವಾಗಿ ಹೋಗು ವ ಸಮಯದಲ್ಲಿ ನಾಶವಾಗಿ ಹೋಗತಕ್ಕ ಪದಾರ್ಥಗಳು ಯಾವವಂದ ರೆ,—ಪ್ರಾಕೃತಸ್ವರೂಪಗಳಾಗಿರುವ ನಾಮರೂಪಗಳೆರಡೂ ನಷ್ಟ ವಾಗಿ ಹೋಗುವವು. ಈನಾಮರೂಪಾತ್ಮಕ ಪ್ರಪಂಚವು ನಷ್ಟವಾ ಗುವದಲ್ಲದೆ ಇವುಗಳಲ್ಲಿ ವ್ಯಾಪಕವಾಗಿರುವ ಮಾಯಾಕಾರ್ಯವಾಗಿ ನಾ ಮರೂಪಾತ್ಮಕವಾಗಿರುವ ಈ ಜಗತ್ತು ಜನ್ಮವನ್ನು ಪಡೆಯುವಾಗ ಲು, ಸ್ಥಿತಿಯನ್ನು ಹೊಂದುವಾಗಲು, ವಿನಾಶವಂ ಪೊಂದುವಾಗಲು ಅಂದರೆ, ಭೂತಭವಿಷ್ಯದ್ವರ್ತಮಾನಗಳೆಂಬ ಕಾಲತ್ರಯದಲ್ಲಿಯು, ಅಬಾಧಿತವಾಗಿಯು, ಅವಿಕಾರಿಯಾಗಿಯು, ಅಖಂಡವಾಗಿಯು, ಅದ್ವಿ ತೀಯವಾಗಿಯು ಇರುವದು, ಎಂಬದಾಗಿ ಶಾಸ್ತ್ರಾಧ್ಯಯನಾದಿಗಳಿಂ ದ ತಿಳಿದು, ||೬|| ಧಾರದ ಯೆಳೆಗಳು ಇಲ್ಲದಿದ್ದರೆ ವಸ್ತ್ರವೆಂಬುವದು ಯಾವರೀತಿಯಿಂದ ಎಲ್ಲಿ ಉಂಟಾಗುವದು ? ಅದರಂತೆ ಅಖಂಡಸಚ್ಚಿ ದಾನಂದ ವಸ್ತು ವಿಲ್ಲದಿದ್ದರೆ ಪ್ರಪಂಚವೆಲ್ಲಿ ತೋರಿಬರುವದು? ಆದ್ದ ರಿಂದ ಆ ಬ್ರಹ್ಮ ಪದಾರ್ಥವೇ ಈ ರೂಪವಾಗಿ ತೋರಿಬರುತಲಿರುವ ದಲ್ಲದೆ ಮತ್ತೆ ಯಾವದು ಅಲ್ಲವು. ||೭||ಆಕಾಶಾವಕಾಶದಲ್ಲಿ ಸರ್ವತ್ರ ಚಂದ್ರಿಕೆಯು ಅಂದರೆ, ಬೆಳದಿಂಗಳು ಚನ್ನಾಗಿ ಪ್ರಕಾಶಿಸದೆ ಹೋ ದ ಪಕ್ಷದಲ್ಲಿ ಲೌಕೀಕ ವಿಷಯಗಳು ಒಂದೂಕಾಣದೆಯೇ ಹೋಗುವ ದು ಅದರೆ ಸರ್ವತ್ರ ಎಡೆಬೆರಪಿಲ್ಲದೆ ಬೆಳಗುತಿರುವದರಿಂದಲೇ ಭಿನ್ನ ಭಿನ್ನಗಳಾಗಿ ಆಯಾಯ ವಿಷಯಗಳು ತೋರಿಬರುವವು. ||೮|| ಆದರೆ ದುಷ್ಟಪದಾರ್ಥಗಳ ಸಂಸರ್ಗದಿಂದ ಬೆಳದಿಂಗಳು ದುಷ್ಟವಾಗುವ

---

ಮೆರೆದುದದು ಮೇಣಲ್ಲಿ ಪೋಗುವವೆರಡೆ ನಾಮವು ರೂಪವದ
ರೊಳಗಿರುವ ಸಚ್ಚಿತ್ಸುಖಗಳೆಂದಿನ ಪರಿಯೊಳಿಹುದೂ ||೬||
ತಂತುವಿಲ್ಲದೊಡೆಂತು ಪಟಸಂತಾನ ಮಪ್ಪುದೆ ವಸ್ತುವಿಲ್ಲದೊ
ಳೆಂತು ತೋರ್ಪುದೆ ತತ್ಪರಾವರವಂ ತಿಳಿದೂ ||೭||
ಮುಗಿಲವಟ್ಟಗೆಯಲ್ಲಿ ಯಡಪೆ ರಹಿಗೆ ವಿಷಯವಿಲ್ಲದ ಶಶಾಂಕ
ರುಚಿಗಳು ತೋರದಿರಲ್ಕೆ ವಸ್ತುವಿಶೇಷದಿಂದಾ ||೮||

ದುಂಟೆ? ಇಲ್ಲವು ಅವುಗಳ ಗುಣಗಳಿಂದ ಅದು ಗುಣಿಯಾಗುವದೊ? ಯಾವುದೂ ಹ್ಯಾಗೆ ಇಲ್ಲವೊ ಅದರಂತೆಯೇ, ॥ ೯ ॥ ಆದುದರಿಂದಲೇ ಅಂದರೆ,-ಪದಾರ್ಥಗಳ ಸಂಸರ್ಗದಿಂದ ಅವುಗಳ ಗುಣದೋಷಗಳು ಚಂದ್ರಿಕೆಗೆ ಎಂತಿಲ್ಲವೊ? ಅದರಹಾಗೆಯೇ ಅಸಮಾನವಾಗಿರುವ ಬ್ರಹ್ಮತ್ವದಲ್ಲಿಯೂ, ॥೧೦॥ ಪ್ರಾಪಂಚಿಕ ಪದಾರ್ಥ ಸಂಸರ್ಗ ಗುಣದೋಷಗಳು ಸುಖಸ್ವರೂಪವಾಗಿಯು, ದೋಷಲೇಶವಿಲ್ಲದೆಯು, ನಿರ್ಮಲವಾಗಿಯು, ಅದ್ವಿತೀಯವಾಗಿಯು, ಇರುವದರಿಂದಲೇ ಸಂಬಂಧಿಸುವದಿಲ್ಲವು. ಎಂಬದಾಗಿ ಚನ್ನಾಗಿ ತಿಳಿದು ಎಲೈ ಮನಸ್ಸಾರ್ವಭೌಮನೇ! ನೀನಾನಿಜಾನಂದ ಘನಪದಾರ್ಥಕ್ಕೆ ಅಭಿಮುಖನಾದರೆ ಆಗಲೇ ಮಾಯಾಕಲ್ಪಿತವಾಗಿ ಇರುವ ಭ್ರಮೆಯಿಂದ ಬಿಡಲ್ಪಡುವ ವಿಷಯದಲ್ಲಿ ಸಂದೇಹ ವಿಲ್ಲವು. ॥೧೧॥

೨ ವಚನ॥ ತಾ॥ ಈ ಬಗೆಯಿಂದ ಅಭಾವ ಪ್ರಮಾಣ ಪದ್ಧತಿಯನ್ನು ಸ್ವಭಾವಾನುಗುಣವಾಗಿ ವಿಸ್ತೃತಿಯಂ ಮಾಡಿ ಪ್ರಕಾರಾಂತರದಿಂದ ಪೇಳುತಿದ್ದಾನೆ ಆದರ ಪರಿಯೆಂತೆಂದರೆ,

ಇಂತು ಅಭಾವಪ್ರಮಾಣ ಪದ್ಧತಿಯು ಮುಗಿದುದು.

ಪದ್ಧತಿ ೨೧ಕ್ಕೆ ಮಂಗಳಮಸ್ತು.

---

ತೋರಲೇನುಂಟಾಯಿತೆ ತಾಂತುರಗದಿತ್ತ ಮೊದವಿವರ ವೈಕಾ
ರಿಕವ ಪಡದಾಗ ದೋಷವಿಕಲಿಲವಾಯ್ತು ॥೯॥
ಹೇಗಚಂದ್ರಿಕೆಗಿಲ್ಲವೊ ಸಂಯೋಗ ಸಂಭವಮಾದ ಕಲ್ಪನೆಯಾ
ಗುಹೋಗೀ ಬ್ರಹ್ಮತ್ವದೊಳನುಪಮದಲಿ ॥೧೦॥
ಸುಖಮಯದಲಿ ನಿರಂಜನದಲಿ ವಿಶುದ್ಧದಲಿ ಯಂದರಿದು ನೀ
ನಾಮುಖವಸಾರಲು ಮುಕ್ತನಾಗುವೆ ಮೋಹದಿಂದಾ ॥೧೧॥

೨ ಮಾ॥ವ॥ಇಂತೆಂದ ಭಾವಪ್ರಮಾಣ ಪದ್ಧತಿಯಂ ಸ್ವಭಾವದೊಡನೆ ಸಂಬಂಧಿಸಿ ಇನ್ನೊಂದುಪ್ರಕಾರಮಂ ಪೇಳುತಿರ್ದಪನದೆಂತೆನೆ.

ಇಂತು ಅಭಾವಪ್ರಮಾಣ ಪದ್ಧತಿಯು ಮುಗಿದುದು.

ಪದ್ಧತಿ ೨೧ಕ್ಕೆ ಮಂಗಳಮಸ್ತು.

## ೨೨ ಐತಿಹ್ಯ ಪ್ರಮಾಣ ಪದ್ಧತಿ ಪ್ರಾರಂಭವು.

೧ ಸಾಂಗತ್ಯ॥ ತಾ॥ ಮೊದಲು ಅಂದರೆ ನಮಗೆ ಎದುರಾಗಿ ಕಾಣಬರುವ ಈ ಚರಾಚರಾತ್ಮಕವಾದ ನಿಖಿಲ ಪ್ರಪಂಚದ ಸೃಷ್ಟಿಗಿಂತಲು ಪೂರ್ವದಲ್ಲಿ ಸಕಲ ಜಗಜ್ಜನ್ಮಾದಿ ಕಾರಣನಾದ ಶ್ರೀಪರಮೇಶ್ವರನಿಂದ ನಾರಾಯಣನು ಪರಮಪುರುಷಾರ್ಥ ವಿತರಣ ಧುರೀಣವಾದ ಬ್ರಹ್ಮವಿದ್ಯೆಯನ್ನು ತಿಳಿದುಕೊಂಡನು. ಆಮೇಲೆ ಈ ಶ್ರೀಮನ್ನಾರಾಯಣನಿಂದ ಈತನ ನಾಭೀಕಮಲದಲ್ಲಿ ಉತ್ಪನ್ನನಾದ ಚತುರ್ಮುಖನು ತಿಳಿದು ಮಹಾನುಭಾವನಾದ ಸನತ್ಕುಮಾರನಿಗೆ ಮಹೋಪನಿಷದರ್ಥಗಳ ಸಾರಸಮುದಾಯನೆಲ್ಲವನ್ನು ಪರಮಸಂತೋಷದಿಂದ ಉಪದೇಶ ಮಾಡಿದನು. ॥ ೧ ॥ ತರುವಾಯ ಆ ಸನತ್ಕುಮಾರ ಮಹರ್ಷಿಯು ವೇದರಾಶಿಯನ್ನು ವಿಭಾಗಮಾಡಿದ ಶ್ರೀ ವೇದವ್ಯಾಸ ಮಹರ್ಷಿಗೆ ಉಪದೇಶ ಮಾಡಿದನು. ಆ ತರುವಾಯ ಆ ಮಹಾನುಭಾವನಿಂದ ಆತನ ಮಗನಾದ ಶುಕಾಚಾರ್ಯನು ಆ ಬ್ರಹ್ಮ ವಿದ್ಯೆಯನ್ನು ಪಡೆಯುವಂಥವನಾದನು. ಎಲೈ ಮನಶ್ಚಕ್ರವರ್ತಿಯೇ! ವೇದಾಂತವಿದ್ಯಾ ಪಾರಂಪರ್ಯವು ಈ ರೀತಿಯಾದ ಸಂಪ್ರದಾಯಾನುಕ್ರಮವಾಗಿ ಭೂಮಂಡಲದಲ್ಲಿ ಅರಹಿಕೊಂಡಿತೆಂಬುವದನ್ನು ನೀನು ಚೆನ್ನಾಗಿ ತಿಳಿದುಕೊಳ್ಳುವನಾಗು. ॥೨॥ ಈಗ ಉದಹರಿಸಿದಂಥಾದ್ದೆ ಗುರುಪಾರಂಪರ್ಯ ಸಂಪ್ರದಾಯದಿಂದ ಬಂದ ಬ್ರಾಹ್ಮಣವು, ನಿಖಿಲದೇವದತೋ

---

## ೨೨ ಐತಿಹ್ಯ ಪ್ರಮಾಣಪದ್ಧತಿ ಪ್ರಾರಂಭವು.

೧ ಮೂ॥ ಸಾಂಗತ್ಯ॥ ಮೊದಲೀಶನಿಂದ ನಾರಾಯಣನಾತನಿಂ ।
ಪದುಮದ ಮಗನಾತನಿಂದಾ । ಮುದದಿಂ ಸನತ್ಕುಮಾರನು
ವೇದಾಂತಾರ್ಥ ಸಂಪದವ ನೈದಿದನಾತನಿಂದಾ ॥೧॥

ಬಾದರಾಯಣ ನಾತನಿಂ ಶುಕನಾತನಿಂ ಮೇದಿನಿಗವತರಿಸಿದು
ದು । ವೇದಾಂತವೆಂಬ ಪಾರಂಪರ್ಯವನ್ನೆ ನೀನಾದರಿಸಯ್ಯ
ಲೇಸಾಗಿ ॥೨॥

ತ್ರವನಾಗಿ ಅದಿತಿ ದೇವಿಯ ಪುತ್ರನಾದ ಶ್ರೀ ಸೂರ್ಯಭಗವಂತನು ಇದನ್ನು ಶ್ರೀಮಹಾವಿಷ್ಣುವಾದ ಶ್ರೀಮನ್ನಾರಾಯಣನ ಮುಖವಚನ ಪರಂಪರೆಯ ಮೂಲಕವಾಗಿ ತಿಳಿದು ಕೊಳ್ಳುವಂಥವನಾದನು. ಆ ಬಳಿಕ ಈ ಭಾಸ್ಕರನಿಂದ ಈತನ ಪುತ್ರನಾದ ವೈವಸ್ವತನೆಂಬ ಮನುವಿನ ಹೃದಯಂಗಮ ವಾಗುವಂಥಾದ್ದಾಯಿತು. ‖೩‖ ಆಮೇಲೆ ಮಹಾತ್ಮನಾದ ವೈವಸ್ವತ ಮನುವಿನಿಂದ ಇಕ್ಷ್ವಾಕು ಮಹಾರಾಜನು ಈ ವೇದಾಂತಾರ್ಥವಿಜ್ಞಾನವನ್ನು ಪಡೆಯುವಂಥವನಾದನು. ತದನಂತರದಲ್ಲಿ ಆ ಇಕ್ಷ್ವಾಕು ಮಹಾರಾಜನಿಂದ ಈ ಬ್ರಹ್ಮವಿದ್ಯೆಯು ಭೂಮಿಯಲ್ಲಿ ವಿಸ್ತಾರವನ್ನು ಪಡೆಯಿತು. ಇದೇ ಕ್ಷತ್ರ ಪಾರಂಪರ್ಯ ಸಂಪ್ರದಾಯ ಕ್ರಮದಿಂದ ಬ್ರಹ್ಮವಿದ್ಯೆಯು ಭೂಮಿಯಲ್ಲಿ ಹರಡಿಕೊಂಡ ಪದ್ಧತಿ ಯಾಗಿರುವದು. ‖೪‖ ಈ ರೀತಿಯಿಂದ ಆತ್ಮ ವಿದ್ಯೆಯನ್ನು ಸಂಪ್ರದಾಯಾನು ಕ್ರಮವಾಗಿ ಅಧ್ಯಯನ ಮಾಡಿರುವ ಮಹಾನುಭಾವನಾದ ಸದ್ಗುರುವಿನ ಅಡಿದಾವರೆಗಳನ್ನು ಪಿಡಿದು ಎಡೆಬಿಡದೆ ಆತನ ಸೇವೆಯನ್ನುಮಾಡಿ ಬ್ರಹ್ಮವಿಜ್ಞಾನವನ್ನು ಸಂಪಾದಿಸಿದಂಥವನೆ ಆದರೆ ಅವಿದ್ಯಾಕಲ್ಪಿತನಾಗಿರುವ ಶರೀರವೆಂಬ ಪ್ರತಿಬಂಧದಿಂದ ಮುಕ್ತನಾಗಿ ಅಖಂಡಾತ್ಮ ಸ್ವರೂಪವಾಗಿ ನಿಲ್ಲುವಂಥವ ನಾಗುತ್ತೀಯೆ.

೨ ವಚನ‖ ತಾ‖ ಈ ವಿಧವಾಗಿ ಐತಿಹ್ಯ ಅಂದರೆ ಇತಿಹಾಸರೂಪ

---

ಇದುವೆ ಬ್ರಾಹ್ಮಣವೆನಿಸುವುದು ನಾರಾಯಣವದನ ವ್ಯಾಪಾರದಿಂದರಿದಾ । ಅದಿತಿಯ ಮಕ್ಕಳೊಳ್ರವಿಯಾತ ನಿಮ್ಮನು ಹೃದಯ ಪ್ರವಿಷ್ಟಮಾಯಿತು. ‖೩‖

ವೇದಾಂತ ವಿಜ್ಞಾನಮಾತನಿಂದಿಕ್ಷ್ವಾಕು ಸಾಧಿಸಿದನು ಬಳಿಕವನಿಂ । ಮೇದಿನಿಗೈದಿತ್ತಿದೆ ಕ್ಷಾತ್ರವೆನಿಪುದು ಪಾರ್ಥಿಕ ಸಂಪ್ರದಾಯವು ‖೪‖

ಪಿಡಿದಿಲ್ಲಿಪರಿನಿಷ್ಠಿತರ ಪಾದಪದ್ಮದೊಳೆಡೆದೆರಪಿಲ್ಲದೆನಂಬೀ । ಪಡೆಯಲುಸುಜ್ಞಾನ ಮುಕ್ತನಾಗುವೆ ಈಯೊಡಲೀನ ಕಟ್ಟಿಂದ ತೊಲಗೀ ‖೫‖

ವಾದ ಪ್ರಮಾಣ ಪದ್ಧತಿಯನ್ನು ಅಂದದಿಂ ತಿಳಿಯಪಡಿಸಿ ರೀತ್ಯಂತರದಿಂದ ಪೇಳುತ್ತಿದ್ದಾನೆ ಅದರ ಅಂತರಂಗ ವೆಂತೆಂದೊಡೆ,

ಇಂತು ಐತಿಹ್ಯ ಪ್ರಮಾಣ ಪದ್ಧತಿಯು ಮುಗಿದುದು.

ಪದ್ಧತಿ ೨೭ ಕ್ಕೆ ಮಂಗಳಮಸ್ತು.

೨೮ ಸಂಭವ ಪ್ರಮಾಣ ಪದ್ಧತಿ ಪ್ರಾರಂಭವು.

೧ ತ್ರಿಪುದಿ॥ ತಾ॥ ಚೆನ್ನಾಗಿ ವಿಚಾರಮಾಡಿ ನೋಡಿದ್ದಆದರೆ, ಅವಿದ್ಯಾ ಕಲ್ಪಿತವಾಗಿ ಜನನ ಮರಣ ಪ್ರವಾಹ ರೂಪವಾಗಿರುವ ಸಾಂಸಾರಿಕ ಬಂಧವೆಂಬುವದು ಯಾವದರಿಂದ ಉಂಟಾಯಿತೆಂದರೆ,—ಅಹಂತಾ, ಮಮತಾ, ಅಂದರೆ, ನಾನು ನನ್ನದು ಎಂಬ ಅಭಿಮಾನದಿಂದ ಸಂಭವಿಸುವಂಥಾದ್ದಾಯಿತು. ಈ ರೀತಿಯಾಗಿರುವ ಅಭಿಮಾನವೆಂಬುವದು ಬಂದು ತಗಲಲು ಮುಖ್ಯವಾದ ನಿಮಿತ್ತವಾವುದಂದರೆ, ॥೧॥ ಸ್ವಸ್ವರೂಪವನ್ನು ಅರಿಯದಿರುವದರಿಂದ ಸಮನಿಸಿದುದು. ಆ ಸ್ವಸ್ವರೂಪ ಪರಿಜ್ಞಾನಾ ಭಾವವು ಬಂದೊದಗಲು ಮೂಲವಾವುದೆನೆ? ವಿಕ್ಷೇಪ ಶಕ್ತಿಯು ಅಮೋಘವಾದ ಚೈತನ್ಯದಿಂದ ಬಂದುಸೇರಿತು. ಆ ವಿಕ್ಷೇಪಶಕ್ತಿಯ ಸಾಮರ್ಥ್ಯಾತಿಶಯಕ್ಕೆ ಯುಕ್ತಿಯು ಯಾವದೆಂದರೆ, ? ॥೨॥ ಶುಭಾಶುಭ ಗುಣಸಮುದಾಯದ ಆರೋಪ

---

೨ ಮೂ॥ ವ॥ ಇಂತೆಂದೈತಿಹ್ಯ ಪ್ರಮಾಣ ಪದ್ಧತಿಯಂ ನೀತಿಯಿಂ ವಿಶದದಿಂದುಸುರಿ ಇನ್ನೊಂದು ಪ್ರಕಾರಮಂ ಪೇಳುತಿರ್ದಪನದೆಂತೆನೆ.

ಇಂತು ಐತಿಹ್ಯ ಪ್ರಮಾಣಪದ್ಧತಿಯು ಮುಗಿದುದು.

ಪದ್ಧತಿ ೨೭ಕ್ಕೆ ಮಂಗಳಮಸ್ತು.

೨೮ ಸಂಭವ ಪ್ರಮಾಣ ಪದ್ಧತಿ ಪ್ರಾರಂಭವು.

೧ ಮೂ ॥ ತ್ರಿ ॥ ಬಂಧಮಾವುದರಿಂದನೋಡಲ್ಬಂದುದೆನೆಕಾಯಾಭಿಮಾನದಿ। ಸಂಧಿಸಿದುದದುಬಂದುದಾರಿಂಚಟುಲಮಾಗೀ ॥೧॥ ತನ್ನನರಿಯದಭಾವದಿಂದದು ತಗುಲಿತಾರಿಂದೆನಲು ವಿಕ್ಷೇಪೋನ್ನತಿಕೆಯಿಂದದುಮೆ ಶೇರಿದಪ್ರೊಂಕವಾರಿಂ ॥೨॥

ಅಂದರೆ,-ಅಭ್ಯಾಸದಿಂದ ಪ್ರಾಪ್ತವಾದುದು. ಅಂತಪ್ಪ ಮಂಗಳಾಮಂಗಳ ಗುಣಸಮೂಹಾರೋಪಣೆಗೆ ನಿದಾನವು ಯಾವದೆಂದೊಡೆ॥೩॥ ರಾಗ ಅಂದರೆ,—ವಿಷಯಾಭಿಲಾಷೆ, ದ್ವೇಷ ಅಂದರೆ,—ಹಿತಪ್ರಾಪ್ತಿ ಪ್ರಬಂಧಕದ ವಿಷಯವಾಗಿ ಮಾಡುವ ಆಗ್ರಹ, ಇವುಗಳಿಂದ ಸಮನಿಸಿದುದು. ಈ ರಾಗದ್ವೇಷಗಳು ಯಾವದರಿಂದ ಪ್ರಕಾಶಿಸಲ್ಪಟ್ಟವು ಎಂದರೆ, ಸುಖದುಃಖಗಳಿಂದ ಆದವು. ಆ ಸುಖದುಃಖಗಳು ಯಾವದರ ದೆಸೆಯಿಂದ ತಲೆದೋರಿದ ವೆಂದರೆ, ... ॥೪॥

ಜನ್ಮಾಂತರಾರ್ಜಿತವಾದ ಪುಣ್ಯಪಾಪಕರ್ಮರಾಶಿಯಿಂದ ಉಂಟಾದವು. ಈಪುಣ್ಯಪಾಪಗಳನ್ನು ಸಂಪಾದನ ಮಾಡಲು ಮುಖ್ಯಕಾರಣವು ಯಾವದೆಂದರೆ,—ತಿಳಿಯದೆಣಿಸಿದ ಭೇದಭಾವನೆಯಿಂದ ಆವಿರ್ಭವಿಸಿದಂಥಾವಾದವು. ॥೫॥ ಈಭೇದವೆಂಬುವದು ತಿಳಿಯಲು ಎಷ್ಟು ಬಗೆಯಾಗಿರುವದೆಂದರೆ ? ಶಾಸ್ತ್ರಗಳಲ್ಲಿ ವ್ಯಾವಹಾರಿಕ ಭೇದವನ್ನು ಅನುಸರಿಸಿಯೇ ಹೇಳಲ್ಪಟ್ಟಿರುವಂತೆ ಜೀವನೆಂಬದಾಗಿಯು ಬ್ರಹ್ಮನೆಂಬದಾಗಿಯು ಎರಡು ಪ್ರಕಾರವಾಗಿರುವದೆಂದರಿಯುವದು. ॥೬॥ ಈಜೀವಬ್ರಹ್ಮಭೇದವನ್ನು ಹೇಳುವ ಶಾಸ್ತ್ರೀಯವೆಂಬುವದು ತೀವ್ರವೆಂಬದಾಗಿಯು, ಮಂದವೆಂಬದಾಗಿಯು ಎರಡು ಪ್ರಕಾರವಾಗಿ

---

ಶೋಭನಾಶೋಭನ ಗುಣಂಗಳ ಶುದ್ಧವಾದಭ್ಯಾಸದಿಂದನು।
ವೈಭವಕ್ಕೆಡೆಯಾದುದಾರಿಂವರ್ಯವಾದಾ ॥೩॥
ರಾಗದ್ವೇಷಂಗಳಿಂದ ಪುರಾರ್ಜಿಸಿದವಾರಿಂದಸುಖ । ದುಃಖಾಗಮನದಿಂದಾದುದದು ಮೇಣಾರದೆಸೆಯಿಂ ॥೪॥
ಪುಣ್ಯಪಾಪಗಳಿಂದಲವು ಸಂಪುಷ್ಟವಾಗುವವಾರದೆಸೆಯಿಂ ।
ಗಣ್ಯಮೆನಿಪದ್ವೈತದಿಂದದು ಗಾಢವಾಗೀ ॥೫॥
ಎಷ್ಟುತೆರದಿಂದಹುದು ಕಾಣಲ್ಕೆರಡುತೆರದಿಂ ಬ್ರಹ್ಮಜೀವರಶಿಷ್ಟಮಂ ಗುಣಿಸುತ್ತಿರುವ ಶಾಸ್ತ್ರೀಯವೆಂದೂ ॥೬॥
ಅವಿಧವನುಳಿದಿರುವ ಶಾಸ್ತ್ರೀಯಂ ತಿಳಿಯುವೆರಡಾಗಿ ಇರುವುದು । ಭಾವಿಸಲ್ಕಾತೀವ್ರಮೆಂದೂ ॥೭॥

ಕುವದು. ಆದರೆ ತೀವ್ರವೆಂದರೇನು ! ಮಂದವೆಂದರೇನು ? ಇವುಗಳ ವಿವರನ್ನು ತಿಳಿಯಬೇಕೆಂಪರೆ. ॥೭॥ ಕಾಮವು, ಕ್ರೋಧವು, ಲೋಭವು, ಮದವು, ಮಾತ್ಸರ್‍ಯವು, ಇವುಗಳ ವ್ಯಾಪಕತ್ವವುಳ್ಳ ಬುದ್ಧಿಯೊಳಗಣ ತಿಳುವಳಿಕೆಯು ತೀವ್ರವೆಂಬ ಹೆಸರುಳ್ಳ ಶಾಸ್ತ್ರೀಯುವು, ದೃಶ್ಯವಾನವಾದ ಮನೋರಾಜ್ಯವನ್ನು ವರಿಸತಕ್ಕದ್ದಾಗಿರುವದು ಮಂದವೆಂಬ ಶಾಸ್ತ್ರೀಯುವು, ಎಂದರಿಯುವದು. ॥೮॥ ಈಹಿಂದೆ ಉದಹರಿಸಿದ ಅರ್ಥಪರಂಪರೆಯಿಂದಲೇ ಜನನ ಮರಣಪ್ರವಾಹ ರೂಪವಾಗಿರುವ ಸಂಸಾರವೆಂಬುವದು ಚಕ್ರಾಕಾರವಾಗಿ ಬಂದೊದಗಿರುವದು. ಇಂತಪ್ಪ ಬಂಧವು ಎಂತು ನಿವೃತ್ತಿಯಾಗುವದೆಂದರೆ ಶೇಷಶೇಷಿತ್ವ ಮಾರ್ಗದಿಂ ಒಂದೊಂದು ವಸ್ತುವನ್ನಾಗಿ ಹಿಡಿದು ಇದು ಆತ್ಮನಲ್ಲ ಇದೂ ಆತ್ಮನಲ್ಲ ಎಂಬದಾಗಿ ಹಿಂದಹಿಂದಕ್ಕೆ ಕ್ರಮವಾದ ತಿಳುವಳಿಕೆಯ ಮೂಲಕ ನಿಷೇಧಿಸುತ ಹೋದರೆ ಕಡೆಗೆ ಪರಿಶೇಷವಾಗಿ ನಿಲ್ಲುವದೇ ನಿರ್ಮಲಾತ್ಮನೆಂದು ಆ ಆತ್ಮನೆ ನಾನೆಂಬ ಭಾವನೆಯುಂಟಾದರೆ,ಕೃತಕೃತ್ಯ ನೆಂದುನ್ನು ತಿಳಿಯುತಕ್ಕದ್ದು. ॥೯॥

೨ ವಚನ॥ ತಾ॥ ಶೇಷಶೇಷಿಗಳೆಂದರೇನು ? ಇವುಗಳ ಸ್ವರೂಪವೆಂತು ಅಂದರೆ,-ಶೇಷವೆಂದರೆ ಕಳಿಸಿಕೊಳ್ಳುವ ಅಂದರೆ ನಿಷೇಧಕ್ಕೆ ವಿಷಯವಾಗುವ ಅನಾತ್ಮ ಪದಾರ್ಥಗಳು, ಶೇಷಿಯೆಂದರೆ,-ಹಿಂದೆಹೇಳಿದಮೋರೆಗೆ ಒಂದೊಂದನ್ನಾಗಿ ಹಿಡಿದು ಅನಾತ್ಮ ಪದಾರ್ಥಗಳೆಲ್ಲವಂ

---

ಕಾಮಕ್ರೋಧಾದಿಗಳ ವ್ಯಾಕೃತಿಯೇ ಮತಿಯೊಳರಿಯಲ್ಕೆ ತೀವ್ರಂ । ಈಮನೋರಾಜ್ಯವಮರಿಸಲಿಂತಿರ್ಪವುಂದಂ ॥೮॥
ಇದರ ದೆಸೆಯಿಂದಾಯು ಸಂಸೃತಿಯಾರೆಇದರಿಂತೊಲಗಲೆಣಿ, ಸಲ್ಕೊದಗುವುದುತಾಂ ಶೇಷಶೇಷಿತ್ವೋಕ್ತಿಯಲ್ಲಿ ॥೯॥

೨ ಮೂ॥ ವ॥ ಅದೆಂತುಶೇಷವೆಂದರೆ ಕಳೆಯಿಸಿಕೊಂಬುದು, ಶೇಷಿಯೆಂದರೆ ಕಳೆಯಿಸಿಕೊಂಬುದರೊಳಿದ್ದು ಕಳತೆಗೆಬಾರದದು ಅದಾವುದು ಪರಮಾತ್ಮನು ಹ್ಯಾಗೆ ಭೂಮಿಯು ಕಳೆಯಲಾಗಿ, ಭೂಮಿಯ ಗುಣವಾದ ಗಂಧದೊಡನೆ ಭೂರೂಪಮುಂ ಭೂ

ನಿಷೇಧಿಸುತ ಬರಲು ಆಗ ಕಡೆಯಲ್ಲಿ ನಿಷೇಧಿಸುವ ನಿಷೇಧಕ್ಕೆ ವಿಷಯವಾಗದೆ ಅಂದರೆ,-ಕಳೆಯುವದಕ್ಕೆ ಶಿಲುಕದೆಯು, ಎಡೆಬಿಡದೆ ಸರ್ವ ಸಾಕ್ಷಿಯಾಗಿದ್ದುಕೊಂಡು ಅಖಂಡವಾಗಿ ನಿತ್ಯವಾಗಿ ಅವಿಕಾರಿಯಾಗಿರುವದು ಯಾವದುಂಟೊ ? ಅದೇ ಶೇಷಿಯೆಂದು ಹೇಳಲ್ಪಡುವದು. ಅದೇ ಸಚ್ಚಿದಾನಂದ ಸ್ವರೂಪವಾದ ಆತ್ಮನು ಅದರ ವಿವರವು ಹ್ಯಾಗಂದರೆ, ವಿಲೋಮಕ್ರಮದಿಂದ ಅಂದರೆ ವ್ಯತಿರೇಕಕ್ರಮದಿಂದ ವಿಚಾರದಿಂದುಂಟಾದ ವಿವೇಕ ಮೂಲಕವಾಗಿ ಪಂಚಭೂತಗಳೊಳೊಂದಾದ ಭೂಮಿಯು ಆತ್ಮವಲ್ಲವು ಎಂಬದಾಗಿ ಕಳೆಯಲು ಭೂಸಂಬಂಧವಾದ ಗುಣವಾಗಿರುವ ಸುಗಂಧ ದುರ್ಗಂಧಗಳು,ಮತ್ತು ಭೂಮಿಯ ರೂಪವು,ಈ ಭೂಮಿಗಭಿಮಾನ ದೇವತೆಯಾಗಿರುವ ಚತುರ್ಮುಖಬ್ರಹ್ಮನು,ಇನ್ನು ಭೂಮಿಯ ಕಾರ್ಯವಾಗಿರುವ ಧಾರಣರೂಪವಾದ ಧರ್ಮವು, ಈಭೂಮಿಯ ಪರಿಣಾಮ ರೂಪಗಳಾಗಿರುವ ಚರಾಚರರೂಪಗಳಾದ ಅಸ್ಥಿಕಾಷ್ಠಾದಿಗಳು ಸಹ, ತೊಲಗುವಂಥಾವುಗಳಾಗುವವು. ಇವು ಹೀಗಾಗುತ್ತಲೆ ಜಲವು ಆತ್ಮಪದಾರ್ಥವಲ್ಲ ವೆಂಬದಾಗಿ ಮೇಲೆ ಹೇಳಲ್ಪಟ್ಟ ಯುಕ್ತಿಯಿಂದ ಕಳೆಯಲಾಗಿ ಈ ಜಲಕ್ಕೆ ಗುಣವಾಗಿರುವ ಮಾಧುರ್ಯವು, ಇನ್ನು ಭೂಸಂಬಂಧದಿಂದ ಉಂಟಾದ ಕ್ಷಾರವು, ಜಲದ ಅಭಾಸ್ವರ ಶುಕ್ಲರೂಪವು, ಜಲಾಧಿದೇವತೆಯಾದ ವಿಷ್ಣುವು, ಜಲಕಾರ್ಯವು, ಜಲವಿಕಾರವಾದ ರಕ್ತಾದ್ಯಂಶಗಳು, ಜಲವು ಸಹಕಳೆದು ಹೋಗುವವು. ತರುವಾಯ ಇದರಂತೆಯೆ ಅಗ್ನಿಯು ಆತ್ಮವಸ್ತುವಲ್ಲವೆಂಬದಾಗಿ ನಿಷೇಧಿಸಲು, ಕೂಡಲೆ ಈ ಅಗ್ನಿಯಗು

---

ಮ್ಯಧಿದೇವತೆಯುಂ, ಭೂಕಾರ್ಯಮುಂ, ಭೂವಿಕಾರವಾದ ಚರಾಚರ ದೇಹನಿಷ್ಠವಾದ ಅಸ್ಥಿಕಾಷ್ಠಾದಿಗಳುಂ,ಪೋಗುವವು ಜಲಮಂ ಕಳೆಯಲಾಗಿ ಜಲಗುಣವಾದ ಗಸದೊಡನೆ ಜಲರೂಮಂ, ಜಲಾಧಿದೇವತೆಯುಂ, ಜಲಕಾರ್ಯಮುಂ ಜಲವಿಕಾರವಾದ ಚರಾಚರದೇಹ ನಿಷ್ಠರುಧಿರಸ್ವ, ರಸಾದಿಗಳುಂ ಪೋಗುವವು, ಅಗ್ನಿಯಂ ಕಳೆಯಲಾಗಿ, ಅಗ್ನಿಗುಣವಾದ ರೂಪಮೊ

ಣವಾದ ಭಾಸ್ವರ ಶುಕ್ಲರೂಪವು ಇದಕ್ಕೆ ಅಧಿದೇವತೆಯಾದ ರುದ್ರನು, ದಹನರೂಪವಾದ ಇದರ ಕಾರ್ಯವು, ಈ ಅಗ್ನಿಯ ವಿಕಾರಗಳಾದ ಪಿತ್ತಶೋಷಣ ಮುಂತಾದವುಗಳೆಲ್ಲವು ಹೋಗುವಂಥವುಗಳಾಗುತ್ತವೆ. ಹಾಗೆಯೇ ವಾಯುವು ಆತ್ಮನಲ್ಲೆಂದು ಯುಕುತಿಯಿಂದ ನಿಷೇಧಿಸಲಾಗಿ ವಾಯುಗುಣವಾದ ಸ್ಪರ್ಶವು, ಅಧಿದೇವತೆಯಾದ ಈಶ್ವರನು. ಇದರ ಕಾರ್ಯವು ಇದರ ವಿಕಾರಗಳಾಗಿರುವ ಪ್ರಾಣಾದಿಗಳು ಮತ್ತು ಆಕರ್ಷಣಾದಿಗಳು, ಇವುಗಳೆಲ್ಲವು ಹೋಗುವವು. ಇದರಂತೆಯೇ ಆ ಕಾಶವೂ ಜಡಪದಾರ್ಥವಾದಕಾರಣ ಚೇತನ ರೂಪವಾದ ಆತ್ಮನಲ್ಲೆಂದು ವಿವೇಕದಿಂದ ಕಳೆಯಲು, ಆಗಲೆ ಆ ಕಾಶಕ್ಕೆ ಗುಣವಾಗಿರುವ ಶಬ್ದವು, ಇದರ ಅಧಿದೇವತೆಯಾದ ಸದಾಶಿವನು, ಇದರ ವಿಕಾರವಾಗಿರುವ ಶರೀರಾದಿಗಳೊಳಗಿರುವ ಅವಕಾಶಗಳು ಸಹ ಹೋಗುವವು. ಆ ತರುವಾಯ ಅವಿದ್ಯೆಯೆಂಬುವದುನ್ನು ಸತ್ತಲ್ಲಿದ್ದರಿಂದ ಇದು ಸದ್ರೂಪವಾದ ಆತ್ಮನಲ್ಲವೆಂಬದಾಗಿ ನಿಷೇಧಿಸುತಿರಲಾಗಿ ಈ ಆ ವಿದ್ಯಾಕಾರ್ಯವಾಗಿ ಜೀವಾಚ್ಛಾದಕವಾಗಿರು ಅಜ್ಞಾನವು ಜಾಗ್ರತ್ತು, ಸ್ವಪ್ನ, ಸುಷುಪ್ತಿಗಳೆಂಬ ಅವಸ್ಥಾತ್ರಯಗಳು ಸಹ ನಿವೃತ್ತಿಯಾಗಿ ಹೋಗುವವು. ಆ ಮೇಲೆ ಪ್ರಕೃತಿಯೂ ಜಡವಾಗಿರುವದರಿಂದಲೇ ಆತ್ಮನಲ್ಲವೆಂಬದಾಗಿ ಅಮೋಘವಾದ ವಿವೇಕದಿಂದ ಕಳೆದು, ಹಾಕುತಿರಲಾಗಿ ಈ ಪ್ರಕೃತಿ ಕಾರ್ಯವಾಗಿರುವ ಭೋಗಾರ್ಹತೆ ಮುಂತಾದವುಗಳು ಇನ್ನು ಜಗದಂತರ್ಗತವಾದ ವ್ಯಾಪಾರಗಳೊಡನೆ ನಿವೃತ್ತಿಯಂ ಪಡೆಯುವವು. ಯಾ, ವಾ, ಸಾವಾಯಾ, ಅಂದರೆ ಯಾ

ಡನೆ,ಅಗ್ನಿರೂಪಮುಂ, ಅಗ್ನ್ಯಧಿದೇವತೆಯುಂ,ಅಗ್ನಿಕಾರ್ಯಮುಂ ಅಗ್ನಿವಿಕಾರಮಾದ ಚರಾಚರದೇಹನಿಷ್ಠ, ಪಿತ್ತಶೋಷಣಾದಿಗಳುಂ, ಪೋಗುವವು ವಾಯುವಂಕಳೆಯಲಾಗಿ, ವಾಯುವಿನ ಗುಣಮಾದ ಸ್ಪರ್ಶದೊಡನೆ ವಾಯುರೂಪಮುಂ ವಾಯ್ವಧಿದೇವತೆಯುಂ, ವಾಯುವಿಕಾರಮಾದ ಚರಾಚರದೇಹನಿಷ್ಠ ಪ್ರಾಣ ಮೂಲಜಲಾಕರ್ಷಣಾದಿಗಳುಂ ಪೋಗುವವು,ಆಕಾಶಮಂ

ವುದು ಇಲ್ಲವೋ ಅದು ಮಾಯೆಯು, ಯಾ, ನವಿದ್ಯತೆ ಸಾ, ಅವಿದ್ಯಾ, ಅಂದರೆ ಯಾವದು ಸತ್ತಾಗಿ ತೋರಿಬರುವದಿಲ್ಲವೋ ಅದು ಅವಿದ್ಯೆಯು, ಎಂಬದಾಗಿ ಶಾಸ್ತ್ರಪಾರಗಾಮಿಗಳು ಮಾಯಾವಿದ್ಯೆಗಳಿಗೆ ವ್ಯುತ್ಪತ್ತಿಯನ್ನು ಅಂದರೆ ಅವಯವಾರ್ಥವನ್ನು ಹೇಳಿರುವರು. ಆದಕಾರಣದಿಂದಲೆ ಈ ಮಾಯೆಯು ಆತ್ಮನಲ್ಲವೆಂಬದಾಗಿ ವಿವೇಕದಿಂದ ನಿಷೇಧಿಸುತ ಬರಲಾಗಿ ಆಗಲೇ ಜಗದುಪಾನತ್ವ ಅಂದರೆ ಜಗತ್ತನ್ನುಂಟುಮಾಡುವಿಕೆ, ಅನೃತತ್ವ, ಜಡತ್ವ, ದುಃಖ, ಖಂಡಿತತ್ವ, ಮುಂತಾದವುಗಳೊಡನೆ ನಿವೃತ್ತಿಯಂ ಪಡೆಯುವದು. ಇವುಗಳೆಲ್ಲವೂ ಉದಹರಿಸಿದ ರೀತಯಿಂದ ಕ್ರಮವಾಗಿ ನಿವೃತ್ತಿಯಂ ಪಡೆಯುತ ಬರಲಾಗಿ ಕಡೆಗೆ ಸ್ಥಿರವಾಗಿ ನಿಲ್ಲುವ ಚಿದಾನಂದಘನವೇ ನಾನೆಂಬದಾಗಿ ನಿಶ್ಚಯಿಸುವಿಕೆಯೇ ಶೇಷಿತ್ವವೆನ್ನಲ್ಪಡುವದು. ಆಗಲೆ ಕೃತಕೃತ್ಯತೆಯು ಸಂಪಾದಿಸಲ್ಪಟ್ಟಂತಾಯಿತು. ಎಂದೀ ಪ್ರಕಾರವಾಗಿ ಸಂಭವ ಪ್ರಮಾಣ ಪದ್ಧತಿಯನ್ನು ತೃಪ್ತಿಕರವಾಗುವಂತೆ ದ್ರಾಕ್ಷಾಪಾಕ

---

ಕಳೆಯಲಾಗಿ, ಆಕಾಶಗುಣವಾದ ಶಬ್ದದೊಡನೆ, ಆಕಾಶರೂಪಮುಂ, ಆಕಾಶಾಧಿದೇವತೆಯುಂ, ಆಕಾಶಕಾರ್ಯಮುಂ, ಆಕಾಶವಿಕಾರವಾದ ಚರಾಚರದೇಹನಿಷ್ಠಕಾಮನಿರ್ಯಾಸಾದಿಗಳುಂ ಪೋಗುವವೂ, ಅವಿದ್ಯೆಯಂ ಕಳೆಯಲಾಗಿ, ಅವಿದ್ಯಾನಿಷ್ಠಜೀವಾವರಕ ಕಾರಣಾಜ್ಞಾನದೊಡನೆ ಧಾಮತ್ರಯಂಗಳುಂ, ಪೋಗುವವೂ, ಪ್ರಕೃತಿಯಂ ಕಳೆಯಲಾಗಿ, ಪ್ರಕೃತಿನಿಷ್ಠಭೋಗ್ಯತ್ವದೊಡನೆ ಜಗದ್ವ್ಯಾಪಾರಂಗಳುಂ ಪೋಗುವವೂ, ಮಾಯೆಯುಂ ಕಳೆಯಲಾಗಿ ಮಾಯಾನಿಷ್ಠೇಶ್ವರಾಧೀನ ಜಗಜ್ಜನಕ ಶಕ್ತಿಯೊಡನೆ, ಅನೃತ ಜಡದುಃಖಾನಿತ್ಯ ಖಂಡಿತತ್ವಗಳೆಂಬ ನಿಜರೂಪ ಲಕ್ಷಣಗಳು ಗುಣತ್ರಯಂಗಳುಂ ಪೋಗುವವೂ, ಆಸಮಯದೊಳ್ಪೋಗದೆ ನಿಂತಸಚ್ಚಿದಾನಂದಂಗಳೆ ನಾನೆಂದು ನಿಶ್ಚೈಸುವದೆ ಶೇಷಿತ್ವಸಮಾಸಾದಿತ ಜೀವನ್ಮು

ಕ್ರಮದಿಂದ ವಿಶದಪಡಿಸಿ ಮತ್ತೊಂದು ಮಾರ್ಗದಿಂದ ಹೇಳುತ್ತಾನೆ ಅದರ ಪರಿ ಎಂತೆಂದರೆ ?

ಇಂತು ಸಂಭವ ಪ್ರಮಾಣ ಪದ್ಧತಿಯು ಮುಗಿದುದು.

ಪದ್ಧತಿ ೨೩ಕ್ಕೆ ಮಂಗಳಮಸ್ತು.

೨೪ ಪಂಚಭ್ರಮ ನಿವಾರಣ ಪದ್ಧತಿ ಪ್ರಾರಂಭವು.

೧ ವಚನ॥ ತಾ॥ ಲೋಕದಲ್ಲಿ ಸರ್ವರಿಗು ಅಂದರೆ ಅಸದ್ರೂಪವಾದ ಆತ್ಮಜ್ಞಾನವುಂಟಾಗದೆ ಇರುವವರಿಗೆಲ್ಲನು, ವಿಪರೀತಭಾವನೆಯೆಂತಲೂ, ಅಸಂಭಾವನೆಯೆಂತಲೂ ಎರಡು ಭಾವನೆಗಳಿರುವವು, ಅವು ಯಾವಂದರೆ ? ಯಥಾರ್ಥವಾದ ಆತ್ಮನನ್ನು ಬಿಟ್ಟು, ಅಯಥಾರ್ಥವಾಗಿರುವ ಲೌಕಿಕ ಪದಾರ್ಥಗಳಲ್ಲಿ ನಾನು ಯೆಂಬದಾಗಿ ವರ್ತಿಸೋಣವು ವಿಪರೀತಭಾವನೆ ಎನ್ನಲ್ಪಡುವದು. ಅಸಂಭಾವನೆಯು ಪ್ರಮಾಣಗತವಾದ ಅಸಂಭಾವನೆಯೆಂತಲೂ, ಪ್ರಮೇಯಗತ ಸಂಭಾವನೆಯೆಂತಲೂ ಎರಡುಬಗೆಯು ಜೀವನನ್ನು ಅಜ್ಞಾನನಿವೃತ್ತಿಯ ಅನಂತರದಲ್ಲಿ ಬ್ರಹ್ಮನೆಂಬದಾಗಿ ಹೇಳುವ ಶಾಸ್ತ್ರವನ್ನು ವ್ಯರ್ಥವೆಂಬದಾಗಿ ಹೇಳುವದು ಮೊದಲನೆ ಪ್ರಮಾಣಗತವಾದ ಅಸಂಭಾವನೆಯು ಜೀವನು ಎಂದಿಗೂ

---

ಕ್ತಿಯೆಂದು ಸಂಭ್ರವ ಪ್ರಮಾಣ ಪದ್ಧತಿಯುಂ ವಿಜೃಂಭಣಂಗೈದು ಇನ್ನೊಂದು ಪ್ರಕಾರಮಂ ಪೇಳುತಿರ್ದಪನದೆಂತೆನೆ.

ಇಂತು ಸಂಭವ ಪ್ರಮಾಣಪದ್ಧತಿಯು ಮುಗಿದುದು.

ಪದ್ಧತಿ ೨೩ಕ್ಕೆ ಮಂಗಳಮಸ್ತು.

೨೪ ಪಂಚಭ್ರಮ ನಿವಾರಣ ಪದ್ಧತಿ ಪ್ರಾರಂಭವು.

೧ ಮೂಲ॥ ವಚನ॥ ಯಥಾರ್ಥವನ್ನು ಬಿಟ್ಟು ಯಥಾರ್ಥದಲ್ಲಿ ವರ್ತಿಸುವಣವೂ ವಿಪರೀತ ಭಾವನೆ ಯೆನಿಸುವುದು, ಅದು ಪ್ರಮಾಣ ಗತವೆಂದು, ಪ್ರಮೇಯ ಗತವೆಂದು, ಯೆರಡು ಪ್ರಕಾರಮಾಗಿರ್ಪುದು, ಜೀವನಲ್ಲಿ ಬ್ರಹ್ಮಪ್ರತಿಪಾದಕ ಶಾಸ್ತ್ರಂಗಳಲ್ಲಿವೈಯರ್ಥ್ಯಮಂ ಕಲ್ಪಿಸುವುದೇ ಪ್ರಮಾಣಗತಾ

ಬ್ರಹ್ಮನಾಗುವದೇ ಇಲ್ಲವೆಂಬದಾಗಿ ನಿಶ್ಚಯಿಸುವದು, ಪ್ರಮೇಯ ಗತವಾದ ಎರಡನೆಯ ಅಸಂಭಾವನೆಯು. ಈ ಎರಡನೆಯ ಅಸಂಭಾವನೆಯಲ್ಲಿ.

೨ ಜಂಪೆ॥ ತಾ॥ ತಾನು ಆಚರಿಸುವ ಪುಣ್ಯಪಾಪ ಪರಂಪರೆಗಳಿಂದ ಸ್ವರ್ಗ ನರಕಗಳನ್ನು ಹೊಂದಿ ಆ ಸುಕೃತ ದುಷ್ಕೃತಾನುಸಾರವಾಗಿ ಸುಖದುಃಖಗಳನ್ನು ಅನುಭವಿಸುತ್ತಲಿರುವ ಜೀವನು ವಿಕಾರಿಯಾಗಿಯೂ ನಿತ್ಯನಾಗಿಯೂ ಇರುವನು. ॥೧॥ ಈ ಜೀವನಿಗೆ ಶರೀರದ ಸಂಬಂಧವೆಂಬುವದು ಇಲ್ಲದೆ ಹೋದಪಕ್ಷದಲ್ಲಿ ಹಸಿವು, ಬಾಯಾರಿಕೆಯು, ಮುಂತಾದವುಗಳು ಯಾರಿಂದ ಬಂದು ಹೋಗುವಂತವುಗಳಾಗುತವೆ. ॥ ೨ ॥ ಮತ್ತು ಇವನಿಗೆ ಕರ್ತೃತ್ವವೆಂಬುವದು ಇಲ್ಲದೆ ಹೋದರೆ ಸಕಲವಾದ ಕಾರ್ಯಗಳೂ ಯಾರಿಂದ ಉಂಟಾದವು ? ಶರೀರಸ್ವಾಮಿಯಾಗಿರುವ ಜೀವನಿಗೆ ಪ್ರತಿಸಂಸಾರದಲ್ಲಿಯು ಎಲ್ಲಾ ಕಾರ್ಯಗಳು ಹ್ಯಾಗೆ ಉಂಟಾದವು. ॥೩॥ ಸಜಾತೀಯ ವಿಜಾತೀಯ ಸ್ವಗತವೆಂಬ ಭೇದತ್ರಯ ಶೂನ್ಯವಾಗಿರುವದರಿಂದಲೇ ಪರಬ್ರಹ್ಮನಿಗೂ ಏಕತ್ವವೆಂಬುವದು ಸಂಭವಿಸುವದೇ ಇಲ್ಲ. ಆದುದರಿಂದಲೇ ಭೇದವು

---

ಸಂಭಾವನೆ, ಜೀವನು ಬ್ರಹ್ಮನಾಗನೆಂದು ನಿಶ್ಚೈಸುವುದೆ ಪ್ರಮೇಯಗತಾ ಸಂಭಾವನೆ ಯರಡನೆಯ ಅಸಂಭಾವನೆಯಲ್ಲಿ.

೨ ಮೂ॥ ಜಂಪೆ॥ ಪುಣ್ಯಪಾಪಂಗಳಿಂ ಪೊಂದಿಸ್ವರ್ಗನರಕಗಳ, ಗಣ್ಯನಹಜೀವಂ ವಿಕಾರಿಯೆನಿತ್ಯಂ ॥೧॥
ಈತನಿಗೆತನು ಸಂಗವಿಲ್ಲದಿರೆಸುಪ್ತಿ । ವಾಸಾತಿಶಯಮಾರೆಂದ ಸಾರಿತಾರ್ಕ್ಯೈಯ್ಯ ॥೨॥
ಕರ್ತೃತ್ವಮಿಲ್ಲದಿರೆ ಕಾರ್ಯವಾರಿಂದಾಯ್ತು । ಭರ್ತುವಹಜೀವಂಗೆಭವಂಗಳಲೀ ॥೩॥
ಅದ್ವೈತವಿಾತನೊಳಗಾಗದೆಂದಿಗುಪರಮ । ಗದ್ವಿತೀಯಂಗೀತಗೂನಿಜಂಭೇದಂ ॥೪॥

ಯಥಾರ್ಥವಾಗಿರುವದು. ‖೪‖ ಜನ್ಮಾಂತರಾರ್ಜಿತವಾದ ಪಾಪಕರ್ಮ ಪರಂಪರೆಯಿಂದ ಮನುಷ್ಯರಲ್ಲಿ ಇದುವರಿಗೆ ಉದಹರಿಸಿದ ಐದುಬಗೆಯಾದ ಭ್ರಮೆಗಳು ಸ್ಥಿರವಾಗಿ ನೆಲಗೊಂಡಿರುವವು. ‖೫‖

೭ ವಚನ ‖ ತಾ ‖ ಈ ಹಿಂದೆ ಉದಹರಿಸಿದ ಐದುಬಗೆಯಾದ ಭ್ರಮೆಗಳ ನಿವೃತ್ತಿಗೆ ಸಹಾಯಭೂತವಾದಂಥಾದ್ದು ಯಾವದಾದರೂ, ಇರುವುದೆ ? ಇರುವದು ಅದಾವುದು, ಶ್ರವಣವು, ಈ ಭ್ರಮ ಸಮುದಾಯವನ್ನು ನಿವೃತ್ತಿಮಾಡಲು ಶ್ರವಣವು ಸಹಾಯವಾಗುವುದೆ ? ಆ ಶ್ರವಣವು ಸಹಾಯದಿಂದ ಸಮರ್ಥವಾಗುವದು. ಆ ಸಹಾಯಗಳು ಯಾವವು, ಉಪನಿಷದರ್ಥಗಳ ತಾತ್ಪರ್ಯವನ್ನು ಹೀಗೆಯೇ ಸರಿಯೆಂಬದಾಗಿ ನಿರ್ಣಯ ಮಾಡತಕ್ಕ ಆರುವಿಧವಾದ ತಾತ್ಪರ್ಯ ಲಿಂಗಗಳು ಇರುವವು. ಅವುಗಳ ವಿವರವೆಂತೆಂದರೇ ? ಅನೇಕಸಾರಿ ಪ್ರತ್ಯಗಾತ್ಮನೇ ಬ್ರಹ್ಮವೆಂಬದಾಗಿ ಹೇಳುವದು. ಅಭ್ಯಾಸವೆಂಬ ಒಂದು ಲಿಂಗವು.ಪ್ರತ್ಯಗಭಿನ್ನನಾದ ಬ್ರಹ್ಮನು ಸರ್ವಪ್ರಮಾಣಾತೀತನಾಗಿರುವದನ್ನು ತೋರಿಸುವದು ಅಪೂರ್ವತೆಯೆಂಬ ಒಂದು ಲಿಂಗವು, ಇಂತಪ್ಪ ಪರಾತ್ಮನನ್ನು ತಿಳಿಯಲು ಇತರ ಸಮಸ್ತವು ಅನೃತಮಯವಾಗಿರುವದರಿಂದ ನಿವೃತ್ತಿಯಾಗುವದೆಂದು ಪೇಳುವದು ಫಲವೆಂಬೊಂದು ಲಿಂಗವು.ಅಂತರಾಳದೊಳು ಈತನಿಗೆ ಐದು ಬಗೆಯಾದ

---

ಪಂಚಭ್ರಮೆಗಳಿವೆ ಪಟುವಾಗೆನುವದಿಂತು। ಸಂಚಿತಮಹಾಪಾಪಕಂಚುಕೀನರರಲೀ ‖೫‖

೭ ಮೂ‖ ವ‖ಇದಕ್ಕೆಪರಿಹಾರವೆಂತುಶ್ರವಣಾದಿಗಳಿಂದ ಆಶ್ರವಣಾ ಸಸಹಾಯವ್ರೊ, ಅಸಹಾಯವೊ, ಕಾರ್‍ಯದಕ್ಷವಾಗಲ್ಕೆ ಸಹಾಯಮೆಸರಿ, ಸಹಾಯಂಗಳಾವುವು, ಷಡ್ವಿಧಲಿಂಗಂಗಳು ಅವೆಂತು ಪ್ರತ್ಯಗಾತ್ಮನೆ ಬ್ರಹ್ಮವೆಂದು, ಮರಳಿಮರಳಿಪೇಳುವ ಅಭ್ಯಾಸ ಈತಂಗೆ ಪ್ರಮಾಣ ತೀತತ್ವಮಂ ಪೇಳುವದಪೂರ್ವತೆ, ಈತನನರಿಯಲಾಗಿ ಸರ್ವವು ಮರೆಯಲ್ಪಡುದೆಂಬುದುಫಲ, ಈ

ಕಾರ್ಯಗಳನ್ನು ಹೇಳುವದು ಅರ್ಥವಾದವೆಂಬ ಲಿಂಗವು. ಈ ದೃಶ್ಯ ಮಾನವಾದ ಜಗತ್ತು ಸೃಷ್ಟಿಗಿಂತಲೂ ಪೂರ್ವದಲ್ಲಿ ಸದಾತ್ಮರೂಪ ವಾಗಿಯೇ ಇದ್ದದು, ಎಂಬುವದು ಉಪಕ್ರಮವು, ಅವಸಾನದಲ್ಲಿ ಯು ಈ ಜಗತ್ತು ಪರಾತ್ಮನಲ್ಲಿಯೇ ಲಯವನ್ನು ಪಡೆಯುವದು ಎಂ ಬದಾಗಿ ಹೇಳುವದು ಉಪಸಂಹಾರವು, ಈ ಉಪಕ್ರಮೋಪ ಸಂಹಾ ರಗಳೆರಡೂ ಸೇರಿಬಂದು ಲಿಂಗವು. ಮೃತ್ತಿಕೆಯು ಹ್ಯಾಗೆ ಘಟಶರಾ ವಾದಿರೂಪವಾಗಿ ಪರಿಣಮಿಸಿ ಪುನಃ ಮೃತ್ತಿಕೆಯಾಗಿಯು, ಮತ್ತು ಕಾರ್ಯರೂಪವಾಗಿರುವಾಗಲು ಮೃತ್ತಿಕೆಯೇ ಆಗಿಯೇ ಇರುವದೋ ಅದರಂತೆಯೇ ಜಗತ್ತು ಪೂರ್ವದಲ್ಲಿಯು ಈಗಲು, ಮುಂದೆಯು ಆ ತ್ಮನಿಗಿಂತಲೂ ಆತ್ಮನೆ ಆಗಿರುವದರಿಂದ ಭಿನ್ನವಸ್ತುವೇ ಇಲ್ಲವೆಂಬ ದಾಗಿಹೇಳುವದು, ಉಪಪತ್ತಿ ಯೆಂಬುವದೊಂದು ಲಿಂಗವು, ಅಂತು ಸೇರಿ ಆರು ಲಿಂಗಗಳು, ಆದರೆ ಈ ಆರು ಲಿಂಗಗಳಲ್ಲದೆ ಇತರ ಸಹಾ ಯವು ಏನಾದರೂ ಉಂಟೋ? ಅಥವಾ ಇಲ್ಲವೋ? ಅಂದರೆಇನ್ನು ಸಹಾಯವು ಇರುವುದು, ಅದರ ವಿವರವೆಂತೆಂದರೆ?

೮ ಸಾಂಗತ್ಯ॥ ತಾ॥ ಯಾವದಾದರೊಂದು ಸ್ಥಲದಲ್ಲಿ ಒಂದು ಹ ಗ್ಗವನ್ನು ನೋಡಿ ಇದು ಸರ್ಪವೆಂಬದಾಗಿ ಭ್ರಾಂತಿಯುಂಟಾದ ಕಾ ಲದಲ್ಲಿ ಆಹಾವು ಓಡಿಬಂದು ಕಂಡವನನ್ನು ಕಚ್ಚಲು ಆಗ ಪ್ರತ್ಯಗಭಿ

---

ತಂಗೆಪಂಚಕೃತ್ಯಮಂ ಪೇಳ್ವುದರ್ಥವಾದ ಮೃತ್ತಿಕೆಯು ಘ ಟಕೆಂತಂತು ಜಗದುಪಾದಾನಕಾರಣ ಮಿಾತನೆಂಬುದೆದೃಷ್ಟಾಂ ತಮೊದಲು ಸದ್ರೂಪದಿಂದಿದ್ದದಾ ಮೇಲೆಯು ತದ್ರೂಪಂ ಸಂಪಾದಿಪುದುಪಕ್ರಮು, ಈಪ್ರಪಂಚ ಮಾತನೊಳಡಗಿಸಿಮೇ ಲಾತನೀಪ್ರತ್ಯಗಾತ್ಮನೆಂದೊಂದನೆ ಸಾಧಿಪುದುಪಸಂಹಾರಾ, ಈಉಪಕ್ರಮೋಪಸಹ್ಮಾರಂಗಳೆರಡು ಕೂಡಿವಂದು ಲಿಂಗ,ಹಾ ಗಾದರೆ ಈಪ್ರಪಂಚ ಭ್ರಮನಿವೃತ್ತಿಗೀವಾರೆ ಸಾಕೊಸಾಲದೊ ಇನ್ನುಉಂಟು, ಅದುಹ್ಯಾಗೆ ॥೧॥

೮ ಮೂ॥ ಸಾಂಗತ್ಯಾ॥ ಗುಣದಲ್ಲಿತೋರಿದಹಾವುಹರಿದು ಬಂದು

ನ್ನ ಬ್ರಹ್ಮಪ್ರತಿ ಬಿಂಬವಾಗಿರುವ ಜೀವನಲ್ಲಿ ಸತ್ವರಜಸ್ತಮೋಗುಣಗಳ ವ್ಯಾಪಕತ್ವದಿಂದ ಉಂಟಾಗತಕ್ಕ ಕಾರ್ಯವು ಉಂಟಾಗಬೇಕು. ಆ ರೀತಿಯಿಂದ ತೋರಿದ್ದಾದರೆ. ‖೧‖ ಮತ್ತು ಅಂಧಂತಮೋರೂಪವಾಗಿರುವ ಗಾಢಾಂಧಕಾರಕ್ಕು ಮಧ್ಯಾಹ್ನಕಾಲದೊಳು ವಿರಾಜಮಾನವಾದ ಪ್ರಚಂಡ ಮಾರ್ತಾಂಡ ಮಂಡಲಕ್ಕು ಒಂದು ಸ್ಥಾನದಲ್ಲಿ ಇರುವಿಕೆಯುಂಟಾದಂತೆ ಅಜ್ಞಾನದ ಕಾರ್ಯಕ್ಕು ಪ್ರತ್ಯಗಾತ್ಮ ಚೈತನ್ಯಕ್ಕು ಒಂದೆಡೆಯೊಳು ಸ್ಥಿತಿಯೆಂಬುವದುಂಟಾಗುವದು, ‖ ದಾಶಿವಾಳದಹೂವು ಸ್ಫಟಿಕಮಣಿಯು ಇವೆರಡು ಒಂದುಸ್ಥಳದಲ್ಲಿರುವಾಗ ಸ್ಫಟಿಕಮಣಿಯಲ್ಲಿ ಸಂಬಂಧಿಸಿದ ಲೋಹಿತ್ಯವೆಂಬುವದು ಆ ಉಡುಪುಷ್ಪದ ಅಸನ್ನಿಧಾನದಲ್ಲಿಯೂ ನಿತ್ಯವಾಗಿ ಸಂಬಂಧಿಸಿಕೊಂಡೇ ಇದ್ದರೆ ಜಡವಾಗಿರುವ ಅನ್ನಮಯಾದಿ ಪಂಚಕೋಶಗತವಾದ ಅಹಂಕಾರಾದಿ ಸಂಬಂಧದಿಂದುಂಟಾದ ಕರ್ತೃತ್ವಾದಿಗಳು ಜೀವನೊಡನೆ ಐಕ್ಯವನ್ನು ಪಡೆದಿರುವವು. ‖೩‖ ಮಡಕೆಯು ಒಡದು ಹೋದನಂತರದಲ್ಲಿಯು ಆ ಮಡಕೆಯೊಳಗಿದ್ದ ಆಕಾಶವು ಮತ್ತು ಮಹಾಕಾಶವು ಇವೆರಡು ಭಿನ್ನಗಳಾಗಿಯೇ ಇದ್ದರೆ ಸ್ಥೂಲಾದಿ ಶರೀರವಿಲಕ್ಷಣನಾದ ಜೀವನೂ ಬ್ರ

---

ಬನರಕಲಾದಲ್ಲಿ ಘನವಾದ ಪ್ರತ್ಯಗಾತ್ಮಪ್ರತಿಬಿಂಬಾದಿಗುಣಗಳಟ್ಟುಳಿತೋರಬೇಕು ‖೧‖

ಗಾಢಾಂಧಕಾರಕೆಖರಕಿರಣನಿಗೊಂದು ಗೂಡಿಗೊಳ್ವಾಳಾಗುವಾಗವ್ರೂಢವಾದೀಪ್ರಾಕೃತಕ್ಕು ಚೈತನ್ಯಕ್ಕು ಕೂಡಿನಡಪದಿನವಹುದೂ ‖೨‖

ಉಡುಪುಷ್ಪದಲಿತೋರಿದ ಕೆಂಪುಗಳುಕಿನೊಳೊಡೆವೆರದೇಕವಾದಾಗಾ। ಜಡಕೋಶನಿಷ್ಠಕರ್ತೃತ್ವಾದಿಗಳುಬಂದುತೊಡರಿಜೀವನೊಳ್ಳೈಕ್ಯಮಹವ್ರೂ ‖೩‖

ಮಡಕೆಯೊಡದಕಾಲದೊಳಗೆ ಮಹಾಕಾಶದೊಡನೆ ಗಗನವನ್ಯವಾಗೆ। ಒಡಲಿಂದ ಜೀವನೆನಿಸುವಬೊಮ್ಮಕೆಜೀವನೊಡನೆ ಪೃಥಕ್ತ್ವವೊಪ್ಪಿರಲೀ ‖೪‖

ಹ್ಮನಿಗಿಂತ ಭಿನ್ನನಾಗಿಯೇ ಇರುವನು. ‖೪‖ ಕನ್ನಡಿಯನ್ನು ಕೈಯ್ಯಲಿ ಹಿಡಿದುಕೊಂಡು ನೋಡುವಾಗ ಆ ಕನ್ನಡಿಯಲ್ಲಿ ಕಾಣುತಲಿರುವ ಪ್ರತಿಬಿಂಬವು ಕನ್ನಡಿಯನ್ನು ತೆಗೆದಾಚೆಯಿಟ್ಟ ಸಮಯದಲ್ಲಿಯೂ ಆ ಪ್ರತಿಬಿಂಬವೆಂಬುವದು ಮೊದಲಿನಂತೆಯೆ ಬಿಂಬಕ್ಕಿಂತಲೂ ಭಿನ್ನವಾಗಿ ಇರುವಂಥಾದ್ದೇ. ಆದರೆ ಆಗ ಅವಿದ್ಯಾಕಾರ್ಯ ಜಾತವೆಲ್ಲವೂ ಕಾರಣ ಸಹಿತವಾಗಿ ನಾಶವಾಗಿ ಹೋದಬಳಿಕ ಚಿದಾಭಾಸಸ್ವರೂಪನಾಗಿರುವ ಜೀವನೂ ಪರಮಾತ್ಮನೊಡನೆ ಏಕತ್ವವನ್ನು ಹೊಂದದೆ ಭಿನ್ನವಾಗಿಯೇ ಇರುವನು ‖೫‖ ಶಾಸ್ತ್ರಜ್ಞಾನವಿಲ್ಲದೆಯು, ವಿಚಾರವಿಲ್ಲದೆಯು, ಸದ್ಗುರುಸೇವೆ ಇಲ್ಲದೆಯು ಮಣ್ಣಿನ ಗಡ್ಡೆಯಂತೆ ಮೂಢರಾಗಿಯೂ, ಮೂರ್ಖರಾಗಿಯೂ ಇರುವಂಥವರುಗಳ ಅನಾಗತವಾದ ಮಾತುಗಳನ್ನು ಎಲೈ ಮನಃ ಪ್ರಭುವೆ ನೀನು ಒಂದುಕಾಲಕ್ಕು ಕೇಳಬೇಡ. ಪರಮೇಶ್ವರನ ಆಜ್ಞಾರೂಪವಾಗಿರುವ. "ಆತ್ಮ ಪದಾರ್ಥಕ್ಕಿಂತಲು ಭಿನ್ನವಾಗಿ ಮತ್ತೊಂದು ಪದಾರ್ಥವಿರುವದೆಂಬದಾಗಿ ಜ್ಞಾನವುಂಟಾಗಿರಲು ಅಂಥವನಿಗೆ ಸಂಸಾರಭಯವು ತಪ್ಪದು ಎಂಬರ್ಥವುಳ್ಳ ವೇದವು ಘಂಟಾಘೋಷವಾಗಿ ಸಾರುತಲಿರುವದು. ‖೬‖ ಆದಕಾರಣ ಆತ್ಮನು ಅದ್ವಿತೀಯನು ಆತನಿಗಿಂತಲು ಭಿನ್ನವಾಗಿ ಮತ್ತೊಂದು ವಸ್ತುವಿಲ್ಲವು. ಎಂಬದಾಗಿ ತಿಳಿದು ಅಂತಪ್ಪ ಆತ್ಮಜ್ಞಾನವುಂಟಾ

---

ಕನ್ನಡಿಯಿಂದತೋರಿದಮಾರ್ಮೊಗಳವುಕೈಯ್ಯಕನ್ನಡಿಕಡೆಯಾಗಲಿರಲು । ತನ್ನೊಳುಪಾಧಿಕೆಟ್ಟರುಕೆಡದಿಹನುವಿಭಿನ್ನಂತಿಹಚಿದಾಭಾಸಾ ‖೫‖

ಕಾಕಪ್ರೋಕರಮಾತ ನೆಚ್ಚದಿರೈಯ್ಯ ಪಿನಾಕಿಯ ಶಾಸನವಿಹುದೂ । ಯಾಕೆಂದರೆ ನೆರಡೆಣಿಸಿದವರ್ಗೆ ಭಯಂಕರ ನರಕತಪ್ಪದೇ ‖೬‖

ಏಕನೆಂದಾತ್ಮನ ತಿಳಿದವನೆ ವೀತಶೋಕನೆಂದಾಮ್ನಾಯಶಿರವೊ । ಸಾಕುಸಾಕೆಂಬಂತೆ ಘೋಷಿಸಿದುದ ಕೇಣೆಯ ಸಂಜ್ಞಾನರಲೀ ‖೭‖

ಬವನೆ ಧನ್ಯನು. ಎಂಬದಾಗಿ ಶ್ರುತಿಯು ಮಾತೆಯಂತೆ ಹಿತವನ್ನು ಬೋಧಿಸುತಿರುವದು ಆದಕಾರಣ ನೀನು ಅದರಂತೆಯೆ ಸಜಾತೀಯ ವಿಜಾತೀಯ ಸ್ವಗತಭೇದಶೂನ್ಯನಾಗಿ ಸಚ್ಚಿದಾನಂದ ಘನಸ್ವರೂಪ ನಾಗಿರುವ ಆತ್ಮನೆ ನಾನೆಂದು ತಿಳಿದು ಕೃತಕೃತ್ಯನಾಗು ‖೭‖

೫ ವಚನ‖ ತಾ‖ ಈ ಪ್ರಕಾರವಾಗಿ ಹಿಂದೆ ಪೂರ್ವಪಕ್ಷವಾಗಿ ಉದ ಹರಿಸಿದ ಐದುಬಗೆಯಾದ ಭ್ರಮಗಳ ನಿವೃತ್ತಿಗೆ ಅನುಗುಣವಾಗಿರು ವ ಸಾಧಕ ಭೂತಗಳಾದ ಯುಕ್ತಿಗಳನ್ನು ಪ್ರಮಾಣಪೂರ್ವಕವಾಗಿ ವಿಸ್ತರಿಸಿ ಹೇಳಿ ದಯಾದ್ರ್ರಭಾವದಿಂ ಮತ್ತೊಂದು ವಧವಾಗಿ ಪೇ ಳುತ್ತಿಧಾನೆ. ಅದರ ಸಂದರ್ಭವೆಂತೆಂದರೆ,-

ಇಂತು ಪಂಚಭ್ರಮನಿವೃತ್ತಿ ಪದ್ಧತಿಯು ಮುಗಿದುದು.

ಪದ್ಧತಿ ೬೮ಕ್ಕೆ ಮಂಗಳಮಸ್ತು.

೬೯ ಸಪ್ತಾವಸ್ಥಾ ಪದ್ಧತಿ ಪ್ರಾರಂಭವು.

೧ ಅಟತಾಳ ‖ ತಾ‖ ಹತ್ತುಜನಗಳು ಕೇರಿ ಎಲ್ಲಿಗಾದರು ಪ್ರಯಾ ಣಹೊರಟು ಬಂದಾನೊಂದು ಹೊಳೆಯು ತಡಿಗೈತಂದು ಅದನ್ನು ದಾ ಟಿ ಆ ಮೇಲೆ ಅದರಲ್ಲಿ ಒಬ್ಬನು ನಾವು ಬಂದವರು ಹತ್ತುಜನಗಳು ಇರುವೆವೆ? ಎಂಬದಾಗಿ ಒಬ್ಬೊಬ್ಬನನ್ನಾಗಿ ಒಂದು ಎರಡು ಎಂಬ ದಾಗಿ ಒಂಭತ್ತುಜನಗಳನ್ನು ಎಣಿಸಿ, ‖೧‖ ತನ್ನನ್ನು ಬಿಟ್ಟು ಮ ತ್ತೊಬ್ಬ ಹತ್ತನೇ ಮನುಷ್ಯನು ಈ ನದಿಯಲ್ಲಿ ಬಿದ್ದುಹೋದನೊ

---

೫ ಮೂ‖ ವಚನ‖ ಇಂತೆಂದು ಪಂಚಭ್ರಮನಿವೃತ್ತಿ ಪದ್ಧತಿಯಂ ವಿಚಾರಿಸಿ ಪೇಳಿ ಇನ್ನೊಂದು ಪ್ರಕಾರ ಪೇಳುತಿರ್ದಪನದೆಂತೆನೆ.

ಇಂತು ಪಂಚಭ್ರಮ ನಿವಾರಣ ಪದ್ಧತಿಯು ಮುಗಿದುದು.

ಪದ್ಧತಿ ೬೮ಕ್ಕೆ ಮಂಗಳಮಸ್ತು.

೬೯ ಸಪ್ತಾವಸ್ಥಾ ಪದ್ಧತಿ ಪ್ರಾರಂಭವು.

೧ ಮೂ‖ ಅಟತಾಳ ‖ ಹತ್ತುಮಂದಿಯುಕೂಡಿವಾಹಿನಿಯುತ್ತರಿ ಸಿಯೆಬಳಿಕೊಂಭತ್ತುಮಂದಿಯನಿದಿರಿನಲ್ಲೆಣಿಪಲ್ಲಿತನ್ನ ‖೧‖

ಏನೋ ಆತನು ಕಾಣುವದಿಲ್ಲ. ಎಂದು ಪ್ರತಿಯೊಬ್ಬನು ಹೀಗೆವೊ ಹುವದು. ॥೧॥ ಅಯ್ಯೋ ಹತ್ತನೆ ಯುವನಿದ್ದರೆ ಕಾಣಿಸದೆ ಹೋಗಲು ನಿಮಿತ್ತವೇನು? ಎಂಬದಾಗಿ ಅಜ್ಞಾನದಿಂದ ಈ ಎರಡು ತೆರನಾಗಿ ಭ್ರಾಂತಿಯುಂಟಾಗುವದು. ಈ ಭ್ರಾಂತಿಯನ್ನು ಶಾಸ್ತ್ರಜ್ಞರಾಗಿಯು, ಅನುಭವಿಗಳಾಗಿಯೂ, ಇರುವ ಹಿರಿಯರು ಆ ವರಣವೆಂಬದಾಗಿ ಹೇಳುವರು. ॥೩॥ ಹತ್ತನೆಯುವನನ್ನು ಸತ್ತುಹೋದನೆಂಬದಾಗಿ ಅವರಿಗುಂಟಾಗುವ ದುಃಖವು ಯಾವದುಂಟೊ ಇದನ್ನು ವಿಕ್ಷೇಪವೆಂಬದಾಗಿ ನುಡಿಯುವರು. ಆದರೆ ಇವರು ಹೀಗೆ ದುಃಖಪಡುತ್ತಿರುವ ಸಮಯದಲ್ಲಿ ಯಾವನಾದರೊಬ್ಬ ಕುಶಲಿಯಾದವನ ಮುಖದಿಂದ, ॥೪॥ ಹತ್ತನೆಯುವನು ಸ್ವರ್ಗದಲ್ಲಿ ಇರುವನೆಂಬದಾಗಿ ತಿಳಿದ ತರುವಾಯ ಉಂಟಾಗುವ ಜ್ಞಾನವು ಪರೋಕ್ಷಜ್ಞಾನ ವೆನ್ನಲ್ಪಡುವದು. ॥೫॥ ಆಮೇಲೆ ಇತರನು ಯಾವನಾದರೊಬ್ಬ ವಿವೇಕಿಯು ಬಂದು ಇವರು ದುಃಖಪಡುತ್ತಿರುವದಕ್ಕೆ ಕಾರಣವನ್ನು ವಿಚಾರಿಸಿ ಎಲ್ಲರನ್ನು ಸಾಲಾಗಿ ನಿಲ್ಲಿಸಿ ಒಬ್ಬೊಬ್ಬರನ್ನಾಗಿ ಎಣಿಸಿ ಕಡೆಗೆ ಬಿಟ್ಟಿದ್ದವನನ್ನು ನೀನು ಹತ್ತನೆಯುವನು ಎಂಬದಾಗಿ ಚನ್ನಾಗಿ ತಿಳಿಯ ಹೇಳಿ ತೋರಿಸಲು, ॥೬॥ ಆ ಸಮಯದಲ್ಲಿ ಹೊಂದಿದಂಥ ಅಮೋಘವಾದ ಭಾವನೆ ಯಾವದಿರು

---

ಎಣಿಸದೆಲ್ಲರುದಶಮನೀವಾಹಿನಿಯೊಳಳಿದಾನೆಂಬುದೆ । ಗಣಿಸಿ
ಯಜ್ಞಾನವದುಮೇಲಿಗಾತನಿಲ್ಲಾ ॥೧॥
ಇರಲುತೀರದಿ ಕಾಣಿಸನೆಯುಂಬೆರಡುತೆರದಾಭ್ರಾಂತಿಯ । ಹಿರಿ
ಯರದನಾವರಣವೆಂದುಚ್ಚರಿಸುತಿಹರೂ ॥೩॥
ದಶಮಮರಣವಿಷಾದದಿಂದಾದರ್ಘವೆವಿಕ್ಷೇಪವೂ। ಕುಶಲನೋ
ರ್ವನಮುಖದೊಳೆಲ್ಲರುಕೂಡಿತಿಳಿಯೆ ॥೪॥
ನಾಕದಲ್ಲಿಹದಶಮನೆಂಬುದನರಿಯೆಬಂದಾಭಾವವೆ ಸೌಕುಮಾ
ರ್ಯವಿಗೆಪರೋಕ್ಷವಸಾದ್ಯವಿತ್ತಿ ॥೫॥
ವಿದುರನೋರ್ವನುಬಂದಿವರದುಖ್ಖದಪರಿಯನುಚಿಂತಿಸೆ । ಇ
ದಿರೊಳೆಣಿಸುವನೀಂದಶಮನೆಂಬುದನುದೋರೆ ॥೬॥

ವುದೊ ಅದೇ ಪ್ರತ್ಯಕ್ಷಜ್ಞಾನ ವೆನ್ನಲ್ಪಡುವದು ಆ ತಿಳುವಳಿಕೆಯಿಂದ ಮೊದಲು ವುಂಟಾಗಿದ್ದ ದುಃಖವು ಕಳೆಯುತಿರಲಾಗಿ ಅದೇಶೋಕ ನಿವೃತ್ತಿಯೆನ್ನಲ್ಪಡುವದು. ‖೩‖ ಪೂರ್ವದ ಹತ್ತನೆ ಪುರುಷನ ಮರಣವೆಂಬ ದೊಡ್ಡಕಲ್ಲಿನ ಪೆಟ್ಟಿನಿಂದ ಉಂಟಾದಘಾಯವು ಹ್ಯಾಗೆ ನೋಡಿದಾಗ್ಯು ಕಾಣಿಸದೆ ಆನಂದದಿಂದ ಇರುವಿಕೆಯು ಯಾವದುಂಟೊ ? ಅದೇ ಪರಿಮಿತಿಯಿಲ್ಲದ ತೃಪ್ತಿ ಯೆನಿಸಿಕೊಳ್ಳುವದು. ‖೪‖ ಈ ಹಿಂದೆ ಉದಹರಿಸಿದ ಏಳು ವಿಧವಾದ ದೃಕ್ಕ್ವವನ್ನು ಚನ್ನಾಗಿ ವಿಚಾರಿಸಿ ತಿಳಿದುಕೊಳ್ಳಲು, ಕ್ರಮವಾಗಿ ನಿಜವಾಗಿಯು, ನಿತ್ಯವಾಗಿಯು, ಆನಂದರೂಪವಾಗಿಯು ಇರುವ ಸುಖವು ಸಮನಿಸುವದು ಎಣಿಸಲು ಆನಂದವೇ ಬ್ರಹ್ಮವೆಂಬದಾಗಿ ಶ್ರುತಿಯು ಸಾರಿಹೇಳುತಲಿರುವ,

೧ ವಚನ‖ ತಾ‖ ಎಲೈ ಶ್ರೀಮಹಾಗುರುವೆ ! ತಾವು ಇಷ್ಟು ವಿಧವಾಗಿ ವಿಶದಪಡಿಸಿ ಹೇಳಿದಾಗ್ಯೂ ಸಂತೋಷದಿಂದೊಡಗೂಡಿದ ಅಂತರಂಗವುಳ್ಳವನಾಗದಿರಲು ಕಾರಣವೇನು ? ಇದಕ್ಕೆ ನಿಮಿತ್ತವನ್ನು ಹೇಳಬೇಕು.

೨ ಜಂಪೆ‖ ತಾ‖ ಎಲೈ ಮಾನಸ ನರನಾಥನೆ ಲಾಲಿಸು ! ನಿನ್ನ ನಿಜಸ್ವರೂಪವು ಯಾವದುಂಟೊ ಅದನ್ನು ನೀನು ಚನ್ನಾಗಿ ವಿಚಾರ ಮೂಲಕದಿಂದ ಆಲೋಚನೆ ಮಾಡದೆ ಇರುವುದೇ ಅಜ್ಞಾನವೆನ್ನಲ್ಪಡು

---

ಆಗಲೊಂದಿದಭಾವವೆ ಪ್ರತ್ಯಕ್ಷವಿತ್ತಿಯಹುದು ದ್ವೇಗವುಳಿ
ದುದೆಕೊಡೆಶೋಕನಿವೃತ್ತಿಯಕ್ಕುಂ ‖೩‖
ಅದುಗುರು ವಿಷಶಿಲಾಕ್ಷತಮಾದಚಿನ್ಹವೇನಿರದೇದಣಿವಿನಿಂದ
ದುನಿರಂಕುಶತೃಪ್ತಿಯಕ್ಕುಂ ‖೪‖
ಏಳುತೆರವಾದೀಷದ್ವಕ್ತ್ರವನಿಣಿಕೆಗೊಳಲುಕ್ರಮದಿಂ । ಮೂ
ಲಕಾರಣದಲ್ಲಿನಿಜಸುಖಮುಚ್ಚರಿಪುದೂ ‖೫‖

೧ ಮೂ‖ ವಚನ‖ ಮುದಿತಾಂತರಂಗನಾಗದೆಂತೆನೆ.

೨ ಮೂ‖ ಜಂಪೆ‖ ಕೇಳೈಯ್ಯಮಾನಸನೃಪಾಲನಿನ್ನಯನಿಜವ। ನಾ
ಲೋಚಿಸದುದೆಯಜ್ಞಾನವೆನಿಸುವುದೂ ‖೧‖

ನದು. ‖೧‖ ಈ ಬಳಿಯೊಳು ನಾನು ಇಲ್ಲವು. ಹಾಗೆ ನಾನು ಇರುವ
ಥವನೆ ಆಗಿದ್ದಪಕ್ಷದಲ್ಲಿ ಕಾಣಿಸದೆಹೋಗಲು ನಿಮಿತ್ತವೇನು? ಎ
ದೀಪ್ರಕಾರವಾಗಿ ಉಂಟಾಗುವ ದುಷ್ಟಬುದ್ಧಿಯಾವದುಂಟೊ? ಅ
ದೇ ಅಂದರೆ ಆಸ್ವಭಾವವೇ ಆವರಣವೆನಿಸಿಕೊಳ್ಳುವದು.‖೨‖ಅಮರಾವ
ಯಲ್ಲಿ ನಾನು ಸುರನಾಗಿರುವೆನು. ಪಾತಾಳಲೋಕದಲ್ಲಿಯು ನಾನ
ಸರ್ಪವಾಗಿರುವೆನು, ಇನ್ನು ಈ ಭೂಲೋಕದಲ್ಲಿ ನಾನು ನರನಾಗಿರ
ವೆನು. ಎಂದೀಪ್ರಕಾರವಾಗಿ ಕರ್ಮಕ್ಕೆ ಕರ್ತೃತ್ವವನ್ನು ಹೇಳಿಕೊ
ಳ್ಳುವದು ಯಾವದುಂಟೊ? ಅದು ವಿಕ್ಷೇಪವೆನ್ನಿಸಿಕೊಳ್ಳುವದು. ‖೩
ಈ ಕಾಣಬರುವ ಸ್ಥೂಲಾದಿ ಶರೀರ ವಿಲಕ್ಷಣನಾಗಿಯು, ಇನ್ನು ಅ
ನೇಕ ಜಡಪದಾರ್ಥಗಳಿಗಿಂತಲು ಅನ್ಯನಾಗಿಯು, ಸತ್ಯಜ್ಞಾನಾನಂ
ಲಕ್ಷಣವುಳ್ಳವನಾಗಿಯು, ಅದ್ವಿತೀಯನಾಗಿಯು ಇರುವ ಒಬ್ಬ
ತ್ಮನು ಉಂಟು, ‖೪‖ ಎಂಬದಾಗಿ ವೇದರಾಶಿಯಿಂದಲು, ಮಹಾನ
ಭಾವನಾದ ಗುರುಮುಖದಿಂದಲು ತಿಳಿದು ನಿಶ್ಚೈಸತಕ್ಕದ್ದು ಯಾ
ದುಂಟೊ? ಅಂಥ ಶ್ಲಾಘ್ಯತರವಾದ ಸತ್ವಗುಣ ಪ್ರಧಾನವಾದ ಬ
ದ್ಧಿ ವಿಶೇಷವು ಪರೋಕ್ಷಜ್ಞಾನ ವೆನಿಸಿಕೊಳ್ಳುವದು. ಆ ತರುವಾಯ
ಪರೋಕ್ಷಜ್ಞಾನರೂಪನಾಗಿರುವದೇ ಸದ್ಬ್ರಹ್ಮ ಆದೇ ನೀನು ಅಂದ
ಗುಣಜಾತ ಶೂನ್ಯವಾಗಿ ಸ್ವತಃಪ್ರಕಾಶ ಮಾನವಾಗಿರುವ ಆನಂದ
ನವಸ್ತುವೆ ನೀನು ಎಂಬದಾಗಿ ತಿಳಿಸಲಾಗಿ, ‖೫‖ ಆಗ ಉಂಟಾದ ಚ

---

ಯಿಲ್ಲನಾನೀಬಳಿಯೊಳಿರಲುತೋರನೆಯೆಂಬ। ಖುಲ್ಲುಮತಿಯ
ವರಣವಿಲ್ಲಿತಿಳಿಯಲ್ಕೆ ‖೨‖
ಸುರನಾನುರಗನಾನು ನರನಾನೆನುತಕರ್ಮಕಿರವಾಗಿರುವುದೆವಿಕ್ಷ
ಪಯೆನಿಸುವುದೊ ‖೩‖
ಶ್ರುತಿಗಳಿಂದೇಹಾದ್ಯ ಶುಭವಿಲಕ್ಷಣನೋರ್ವಪತಿರೂಪಲಕ್ಷಣ
ಭವನಾತ್ಮನಿಹನೊ ‖೪‖
ಸತ್ವದಿಂದೆನೆ ಪರೋಕ್ಷಜ್ಞಾನವುದು ನೀನೆಸತ್ವರಂಚಿನ್ಮಾತ್ರಸ
ಕ್ಷಯೆಂದರುಹೆ ‖೫‖

ಮ ಸಾಕ್ಷಾತ್ಕಾರ ರೂಪವಾಗಿರುವ ಅಪರೋಕ್ಷ ಪದಾರ್ಥವು ಯಾವದುಂಟೋ? ಅದು ವಿರಾಜಿಸುತಿರಲಾಗಿ ಆಗ ಚಕ್ಷುರಾದಿ ಇಂದ್ರಿಯಗಳಿಂದಲು, ಇಂದ್ರಿಯಾರ್ಥಗಳಿಂದಲು, ಉಂಟಾದ ಯಾವವಿಧವಾದ ವ್ಯಥೆಯು ಇನ್ನು ಅಹಂತಾಮ ಮತಾಮುಂತಾದ ದುಃಖವು ಇವುಗಳಲ್ಲಿ ಯಾವದು ಇವನನ್ನು ಬಾಧಿಸುವದಿಲ್ಲವು. ||೩|| ಎಂಬೀ ಅರ್ಥವು ಚನ್ನಾಗಿ ತಿಳಿದು ಅದು ಕ್ರಮವಾಗಿ ದೃಢವಾಗಿ ನ್ಯೂನತೆಯನ್ನು ಪಡೆಯದೆ ಸ್ಥಿರವಾಗಿ ನಿಲ್ಲಲು ಆಸಮಯದಲ್ಲಿ ಉಂಟಾಗುವ ಆನಂದವೆ ನಿರಂಕುಶವಾಗಿರುವದೆಂದರೆ,-ಅಪಾಪಾರದತೃಪ್ತಿಯೆನಿಸಲ್ಪಡುವದು.||೩|| ಆದ್ದರಿಂದ ನೀನು ಜೀವ ಸಪ್ತಾವಸ್ಥೆಗಳನ್ನು ತಿಳಿದು ವಿವೇಕದಿಂದ ಈ ಏಳು ವಿಧವಾದ ಅವಸ್ಥೆಗಳೂ ನನಗೆ ಇಲ್ಲವು, ಎಂಬದಾಗಿ ನಿಶ್ಚಯಿಸಿ ಸ್ವಸ್ವರೂಪವಸ್ಥಾನಾವಸ್ಥೆಯ ಯಾಗಿಯು, ಪರಿಪೂರ್ಣವಾದ ಪರಬ್ರಹ್ಮ ಪದಾರ್ಥವಾಗಿಯು ನೀನು ಆಗುವದು. ||೪||

೪ ವಚನ|| ತಾ|| ಈ ಪ್ರಕಾರವಾಗಿ ಸಪ್ತಾವಸ್ಥಾ ಪದ್ಧತಿಯನ್ನು ಜ್ಞಾನಗೋಚರ ವಾಗುವಂತೆ ಮಾಡಿ ವಿಧಾನಾಂತರದಿಂದ ಅರುಹು ತಲಿಥಾನೆ. ಅದರ ಪ್ರಕಾರವೆಂತೆಂದರೆ,

೨೫ ಇಂತು ಸಪ್ತಾವಸ್ಥಾ ಪದ್ಧತಿಯು ಮುಗಿದುದು.

---

ಸಾಕ್ಷಾತ್ಕರಿಸಿದುದ ಪರೋಕ್ಷವಿತ್ತಿ ಯನಿಪುದು ಪಕ್ಷೀಕರಿಸದೆ
ನ್ಯೊಳಕ್ಷಸಂತಾಪಂ ||೬||
ಎಂದುತಿಳಿದರ್ಥತನಗೊಂದೆಶೋಕನಿವೃತ್ತಿ । ಕುಂದದಿರೆತಾಂನಿ
ರಂಕುಶತೃಪ್ತಿಯಕ್ಕುಂ ||೭||
ಮೊದಲಂತಿವರಬಗೆಯ ಮುಟ್ಟೀಭಾವಿಸಿ ನಿತ್ಯಪದವಾಗು ಘನ
ವಾದಪರವಸ್ತುವಾಗೂ ||೪||

೪ ಮೂ|| ವ|| ಇಂತೆಂದು ಸಪ್ತಾವಸ್ಥಾಪದ್ಧತಿಯಂ ಜ್ಞಪ್ತಿಗೋಚರಂಗೈಸಿ ಇನ್ನೊಂದು ಪ್ರಕಾರಮಂ ಪೇಳುತಿರ್ದಪನದೆಂತೆನೆ.

ಇಂತು ಸಪ್ತಾವಸ್ಥಾ ಪದ್ಧತಿಯು ಮುಗಿದುದು.

ಪದ್ಧತಿ ೨೫ಕ್ಕೆ ಮಂಗಳಮಸ್ತು.

## ವಿಶೇಷ ವಿಚಾರವು.
## ಸಮಾಧಿಪದ್ಧತಿ ಪ್ರಾರಂಭವು.

೧ ವಚನ ॥ ತಾ ॥ ಸಮಾಧಿಯೆಂಬುವದು ಎರಡು ಬಗೆಯಾಗಿರುವದು. ಅದು ಯಾವದಂದರೆ ? ಸವಿಕಲ್ಪಕ ಸಮಾಧಿಯೆಂತಲೂ, ನಿರ್ವಿಕಲ್ಪಕ ಸಮಾಧಿಯೆಂತಲೂ, ಈ ಎರಡು ಇವೆರಡರಲ್ಲಿಯೂ ಮೊದಲನೆಯದಾದ ಸವಿಕಲ್ಪಕ ಸಮಾಧಿಯು ದೃಶ್ಯಾನುವಿಧ ಸಮಾಧಿಯೆಂತಲೂ, ಶಬ್ದಾನುವಿಧ ಸಮಾಧಿಯೆಂತಲೂ, ಎರಡು. ಬಗೆಯಾಗಿರುವದು. ಮೊತ್ತವಾಗಿ ಮೂರು ವಿಧವಾದ ಸಮಾಧಿಗಳೂ ಅಭ್ಯಂತರ ಸಮಾಧಿಗಳೆಂತಲೂ, ಬಾಹ್ಯ ಸಮಾಧಿಗಳೆಂತಲೂ ಸಮುದಾಯವಾಗಿ ಆರುವಿಧಗಳಾಗಿರುವವು. ಈ ಷಡ್ವಿಧವಾಗಿರುವ ಸಮಾಧಿಗಳಿಗೆಲ್ಲ ಮನನನಿಧಿಧ್ಯಾಸನಾದಿಗಳು ಅತ್ಯಂತ ಸಹಾಯಕಗಳಾಗಿರುವವು. ಇವುಗಳಲ್ಲಿಯೂ ಮನನವೆಂಬುವದಕ್ಕೆ ಯುಕ್ತಿಯಿಂದೊಡಗೂಡಿದ ಊಹೆಯು ಮತ್ತು ಸದನುಮಾನವು ಇವೆರಡು ಸಾಧಕಗಳಾಗಿರುವವು. ಇವುಗಳ ವಿವರವೆಂತೆಂದರೆ, ಬಾಧ್ಯವಾದದ್ದನ್ನು ಬಾಧಕವಾಗಿರುವದನ್ನು ವಿವೇಕದಿಂದ ವಿವರಿಸುವದೆ ಯುಕ್ತಿಯು ಬಾಧ್ಯವಾಗಿರುವದರಲ್ಲಿರುವ ಬಾಧ್ಯತೆಯನ್ನು ನಿವಾರಣಮಾಡತಕ್ಕ ಚಿಂತೆಯೇ ತರ್ಕವೆನ್ನಲ್ಪಡುವದು. ಗುಣದ ಮೂಲಕದಿಂದ ಅಂದರೆ ಹೇ

---

## ಸಮಾಧಿಪದ್ಧತಿ ಪ್ರಾರಂಭವು.

೧ ಮೂ॥ ವ॥ ಸಂಕಲ್ಪ ನಿರ್ವಿಕಲ್ಪಗಳೆಂಬ ವೃತ್ತಿಗಳಿಂ ಸಮಾಧಿಯೊಂದೇ ದ್ವಿವಿಧವಾಗಿರ್ಪುದು, ಆ ದ್ವಿವಿಧದೊಳಾದ್ಯವಾದ ಸವಿಕಲ್ಪ ಸಮಾಧಿಯೇ ದೃಶ್ಯಾನುವಿಧ ಶಬ್ದಾನುವಿಧವೆಂದಿತ್ತೆರನಾಗಿರ್ಪುದು, ಈ ಸಮಾಧಿತ್ರಯಮಭ್ಯಂತರ ಬಾಹ್ಯಭೇದದಿಂ ಷಟ್ಪ್ರಕಾರವಾಗಿರ್ಪುದು, ಈ ಸಮಾಧಿ ಷಟ್ಕಕ್ಕೆ ಮನನನಿಧಿಧ್ಯಾಸಂಗಳೆ ಸಖಂಗಳಾಗಿರ್ಪವರಲ್ಲಿ ಮನನಕ್ಕೆ ಯುಕ್ತಿತರ್ಕಾನುಮಾನಂಗಳೆ ಮಿತ್ರರಾಗಿರ್ಪರು, ಅವರ ಸ್ಥಿತಿಯೆಂತೆನೆ, ಬಾಧ್ಯಬಾಧಕರೂಪವಾದುದೆ ಯುಕ್ತಿ, ಬಾಧ್ಯ

ತುವಿನ ಮೂಲಕಗುಣಿಗ್ರಹಣವನ್ನು ಮಾಡುವದು, ಅಂದರೆಸಾಧ್ಯ ವನ್ನು ಸಾಧಿಸುವದು ಅನುಮಾನವೆನ್ನಲ್ಪಡುವದು. ಮೊದಲು ವಿವರಿಸಿದ ಎರಡನೆಯದಾಗಿರುವ ಸಿದ್ಧಿಭ್ಯಾಸನಕ್ಕೆಮಂತ್ರಯೋಗವೆಂತಲು ಸ್ಪರ್ಶಯೋಗವೆಂತಲೂ, ಭಾವಯೋಗವೆಂತಲೂ, ಅಭಾವಯೋಗವೆಂತಲೂ, ಈ ನಾಲ್ಕು ಮಹಾಯೋಗಗಳೇ ಸಹಾಯಕಗಳಾಗಿರುವವು. ಅವುಗಳ ವಿವರವೆಂತೆಂದರೆ ? ನಿರಂತರದಲ್ಲಿಯೂ ತಪ್ಪದೆ ಪ್ರಣವವನ್ನು ಅನುಸಂಧಾನ ಮಾಡುವದೇ ಮಂತ್ರಯೋಗವೆನ್ನಲ್ಪಡುವದು. ಮನಸ್ಸಿಗೂ, ಪವನಕ್ಕೂ ಊರ್ಧ್ವಗಮನವೇ ಸ್ಪರ್ಶಯೋಗವೆನ್ನಲ್ಪಡುವದು. ಅನವರತವೂ ವಿಶ್ವರೂಪವನ್ನು ಚಿಂತಿಸುತಿರುವದೇ ಭಾವಯೋಗವೆನ್ನಲ್ಪಡುವದು. ಸರ್ವೋಪಾಧಿ ವಿನಿರ್ಮುಕ್ತವಾಗಿರುವ ಅಖಂಡ ಚಿದ್ವಸ್ತು ಚಿಂತನವೇ ಅಭಾವಯೋಗವೆನ್ನಲ್ಪಡುವದು, ಜ್ಞಾನಾಜ್ಞಾನಗಳಿಗೆ ಗೋಚರವಾಗದೆ ಇರುವ ಅವಿನಾಶಿಯಾದ ನಿರ್ಮಲಾತ್ಮನಲ್ಲಿ ಮನಸ್ಸನ್ನು ಲಯವಾಗುವಂತೆ ಮಾಡುವದೇ ಮಹಾಯೋಗವೆನ್ನಲ್ಪಡುವದು. ಇದಲ್ಲದೆ ಹಿಂದೆ ಹೇಳಿದ ಮನನಪದಾರ್ಥಕ್ಕೆ ಸಂಶಯ ತಿರಸ್ಕಾರಗಳೆಂಬಿವು ಶರೀರಭೂತಗಳಾಗಿರುವವು. ಈ ಎರಡು ವಿಧವಾದ ಶರೀರಗಳನ್ನು ಸಂರಕ್ಷಿಸುವದಕ್ಕೆ ವಿವೇಕ ಪದಾರ್ಥವೇ

---

ನಿವಾರಣಚಿಂತೆಯು ತರ್ಕಗುಣದತ್ತಣಿಂಗುಣಿ ಗ್ರಹಣವೆ ಅನುಮಾನ ಎರಡನೆಯ ಸಿಧಿಭ್ಯಾಸಕ್ಕೆ ಮಂತ್ರಯೋಗ, ಸ್ಪರ್ಶ, ಯೋಗ, ಭಾವಯೋಗ, ಅಭಾವಯೋಗ, ಮಹಾ ಯೋಗಂಗಳೆ ಮಿತ್ರರಾಗಿರ್ಪರು, ಅವರ ಸ್ಥಿತಿಯೆಂತೆನೆ, ಪ್ರಣವಾನುಸಂಧಾನವೆ ಮಂತ್ರಯೋಗ, ಮನಃಪವನಂಗಳಿಗೂ ರ್ಧ್ವಗತಿಯೆ ಸ್ಪರ್ಶಯೋಗ ವಿಶ್ವರೂಪಚಿಂತನವೆ, ಭಾವಯೋಗ, ನಿರುಪಾಧಿಕ ವಸ್ತುಚಿಂತನವೆ ಅಭಾವಯೋಗ, ಜ್ಞಾನಾಜ್ಞಾನಂಗಳಿಗೆ ನಿಲುಕದ ಅವಿನಾಶಿಯಾದಾತ್ಮನಲ್ಲಿ ಮನೋಲಯವೆ ಮಹಾಯೋಗ, ಮತ್ತಮಾಮನನಕ್ಕೆ ಸಂಶಯ ತಿರಸ್ಕಾರ ಶರೀರ, ಇವರೀರ್ವರ ಶರೀರಂಗಳಿಗೆ ವಿವೇಕನೆ ರಕ್ಷಕನು, ವಿವೇಕನಿಗೆ

ದಕ್ಷವಾಗಿರುವದು. ಈ ವಿವೇಕವೆಂಬ ಬುದ್ಧಿಶಾಲಿಯನ್ನು ಪ್ರಸವಿಸುವದಕ್ಕೆ ಚಿತ್ತದ ನೈರ್ಮಲ್ಯವೆಂಬುವದೇ ತಾಯಿಯಂತಿರುವದು. ಈ ಶಿಶುವನ್ನು ಹೆತ್ತವಡನೆಯೆ ಚಿತ್ತಶುದ್ಧಿಯೆಂಬ ಮಾತೆಯು ಧನ್ಯಳಾಗುವಳು. ಅಂದರೆ,— ಈ ಅಸಾಧಾರಣವಾದ ವಿವೇಕೋದಯವಾದ ಕ್ಷಣದಲ್ಲಿಯೇ ಸಾಧ್ಯಸಿದ್ಧಿಯಾಗುವದು ಅಂದರೆ, ಪರಮಾರ್ಥವು ಲಭಿಸುವದು. 'ಆದರೆ ಈ ವಿವೇಕವು ಮತ್ತು ಚಿತ್ತನೈರ್ಮಲ್ಯವು ಇವುಗಳಿಂದೊಡಗೂಡಿದ ಬಾಹ್ಯಾಭ್ಯಂತರಗಳಾದ ಆರು ಸಮಾಧಿಗಳನ್ನೂ ವಿವರಿಸಲು ಗ್ರಂಥವು ಬಹಳವಿಸ್ತಾರವಾಗಿ ಹೋಗುವದೆಂಬ ಭೀತಿಯಿಂದ ಪ್ರಕೃತಕ್ಕೆ ವಿಶೇಷಾಕಾರವಾಗಿ ಉಪಯುಕ್ತವಾಗಿ ಆಭ್ಯಂತರಭೇದವಿಂದಿರುವ ದೃಶ್ಯಾನು ವಿಧಸಮಾಧಿಯ ಸ್ವರೂಪವನ್ನು ಮಾತ್ರ ವಿವರಿಸುತಲಿಧಾನೆ.

೨ ಜಂಪೆ॥ ತಾ॥ ಎಲೈ ಮನಸ್ಸರ್ವಂ ಪಹಾಧಿ ಪತಿಯೆ! ಕೇಳು, ನಿನಗೆ ಮಕ್ಕಳಾಗಿರುವ ಕಾಮವು, ಕ್ರೋಧವು, ಲೋಭವು, ಮೋಹವು, ಮದವು, ಮಾತ್ಸರ್ಯವು, ಎಂಬಿವರುಗಳ ಚಾಂಚಲ್ಯ ಸ್ವಭಾವವನ್ನು ನೀನು ಅಭಿಮುಖವಾಗಿಯೆ ಇರಿಸಿಕೊಂಡು, ॥೧॥ ಇವುಗಳು ಕಾಲಭೇದದಿಂದಲು ಸ್ಥಿತಿಭೇದದಿಂದಲು ಅಂದರೆ, ಕಡಮೆಯಾಗು

---

ಚಿತ್ತಶುದ್ಧಿಯೆ ತಾಯಿ, ಈತನುದಿಸಿದಾಕ್ಷಣವೆ ಆಕೆಯು ಕೃತಕೃತ್ಯಳಪ್ಪಳು, ಈ ಮನನ ನಿಧಿಧ್ಯಾಸನಂಗಳಂ, ಈ ಯುಕ್ತ್ಯಾದಿ ಮಂತ್ರಯೋಗಾದಿಗಳಿಂ, ವಿವೇಕ ಚಿತ್ತಶುದ್ಧಿಗಳಿಂ ಕೂಡಿದ ಷಟ್ಸಮಾಧಿಗಳು ಪೇಳಲ್ ಗ್ರಂಥವಿಸ್ತಾರವಾಗುವುದಾಗಿ ಈ ಆರು ಸಮಾಧಿಗಳಾಭ್ಯಂತರ ದೃಶ್ಯಾನುವಿಧ ಸವಿಕಲ್ಪ ಸಮಾಧಿಯೊಂದನೆ ಪೇಳುವೆನೂ.

೨ ಮೂಲ॥ ಜಂಪೆ॥ ಆಲಿಸೈನಿನ್ನಸುತರಾದ ಕಾಮಾದಿಗಳ ಲೋಲವೃತ್ತಿಯನಿದಿರೊಳೊಂದುವಂತಿಟ್ಟು ॥೧॥
ತಗ್ಗುವದಹೆಚ್ಚುವದ ತಲ್ಲಣಿಸುವದನವರ। ಮುಗ್ಗುವದ ನಿಲ್ಲುವದ ಮೊಳೆವದಸಿಡಿವದಾ ॥೨॥

ದು, ಹೆಚ್ಚುವದು, ತಲ್ಲಣಿಸುವದು, ಲೀನವಾದಂತಿರುವದು ಪು
ನಃ ಅಂಕುರಿಸುವದುನ್ನು ಹಾಗೆಯೇ ವಿಶಕಲಿತವಾಗುವದು ಅಂ
ದರೆ,- ಚಲ್ಲಿಹೋಗುವದುನ್ನು ಸ್ತಬ್ಧವಾಗುವದು ಎಂಬಿವೇ ಮುಂ
ತಾದ ವೃತ್ತಿ ವಿಶೇಷಗಳಿಂದ ಅಂದರೆ,—ಪರಿಣಾಮ ಭೇದಗಳಿಂದ
ಔನ್ನತ್ಯವನ್ನು ತಗ್ಗುವಿಕೆಯನ್ನು ಹೊಂದುತ್ತಿರುವಿ, ಅಂದರೆ,—
ಇಷ್ಟಪ್ರಾಪ್ತಿಯಾದರೆ ಉಬ್ಬುವದು ಭಂಗಬಂದರೆ ಮತ್ತೊಂದು ವಿ
ಜಾತೀಯ ಸ್ಥಿತಿಯನ್ನು ಹೊಂದುವದು, ಈ ಮೇರಿಗಿರುವಿ, ॥೨॥
ಹಿಂದೆ ಉದಹರಿಸಿದ ಚಿತ್ತಪರಿಣಾಮ ಭೂತವಾದ ಕಾಮಾದಿವೃತ್ತಿಗ
ಳೊಳಗೆ ಒಂದು ಸುಣ್ಣಕಲ್ಲಿಗೆ ನೀರುಹಾಕುವದರಿಂದ ಹ್ಯಾಗೆ ಕುದಿ
ಯುವದೊ, ಅದರಂತೆ ಕುದಿಯುವದು. ಸರಪಣಿಯಿಂದ ತೂಗಹಾ
ಕಿರುವ ಉಯ್ಯಾಲೆಯ ಮಣೆಯು ಯಾವರೀತಿಯಲ್ಲಿ ಜೋಲಾಡುತ
ಚಂಚಲವಾಗಿರುವದೊ, ಅದರಹಾಗೆ ಚಾಂಚಲ್ಯವನ್ನು ಹೊಂದಿ
ರುವದು ಮತ್ತು ॥ ೩ ॥ ಬಾಣವನ್ನು ಬಿಟ್ಟರೆ ಅದರ ವೇಗವೆಂತು
ವ್ಯಾಪಿಸುವದೊ ಅದರಹಾಗೆ ಇರುವದೊಂದು ಈ ಮೂವರ ಸಂಸ್ಕಾ
ರವನ್ನು ಮಾಡುವದಾಗಿ ಅತ್ಯಂತ ಶೋಭಿಸುವದು. ॥೪॥ ಕಾಮಾದಿಗ
ಳು ಈ ರೀತಿಯಿಂದ ವಿಜೃಂಭಿಸುತ ಇರುವವು, ಆದರೆ ಇವುಗಳ ಪ್ರ
ವೃತ್ತಿ ಕ್ರಮಗಳನ್ನು ತಿಳಿದಂಥಾವನಾಗಿ ತರುವಾಯ ಮಾಡತಕ್ಕ
ಕಾರ್ಯವೇನಾದರು ಇರುವದೆ ಅಂದರೆ, ॥ ೫ ॥ ಕಾಮಾದಿಗಳ ಪ್ರವೃತ್ತಿ

---

ಸುಣ್ಣಕಲ್ಲಿಗೆಜಲದ ಸೋಂಕಿನಂತಿಹುದೊಂದು ಕಟ್ಟದುಯ್ಯಾ
ಲೆಮಣೆಯುಗತಿಯೊಳಿಹುದೊಂದು ॥೩॥
ಇಷುವೇಗದಂತೆತಾನೆಸೆವದೊಂದೀಮೂರುಸುಷುಮಸಂಸ್ಕಾರ
ವೆಶೋಭಿಸುತ್ತಿಹುದೂ ॥೪॥
ವರ್ತಿಪವುಕಾಮಾದಿವರ್ಗನರ್ತನೆಗಳಲಿ ಕರ್ತವ್ಯಮೆನಿನಗೆಕಂಡಿ
ವರಬಗೆಯಾ ।೫॥
ಚಿನ್ಮಾತ್ರದಿಂದದೇ ಸಿದ್ಧಮದಾನೆಂದು ಸನ್ಮಾನದಿಂದರಿದ ವಿ
ಚಿಛಿನ್ನಶಕ್ತಿ ॥೬॥

ಯನ್ನು ಅವುಗಳ ಸತ್ವವನ್ನು ಚನ್ನಾಗಿ ತಿಳಿಯುವದರ ಮೂಲಕ ವಿವೇಚನೆಯನ್ನು ಮಾಡಿಕೊಂಡು ಕಡೆಗೆ ಚಿತ್ಸ್ವರೂಪವಾಗಿ ನಿಲ್ಲುವದು ಯಾವದುಂಟೊ, ಅದೇ ನಾನು ಎಂಬದಾಗಿ ದೃಢವಾಗಿ ತಿಳಿಯಲು ಅಗ ಮೂರುಜಗೆಯಾಗಿರುವ ಪರಿಚ್ಛೇದದಿಂದ ಶೂನ್ಯನಾಗಿ,॥೬॥ ಇರುತಿರೆ ತನಗಿಂತಲು ಇತರವಾಗಿ ತೋರಿಬರುತಿದ್ದು ದೆಲ್ಲವೂ ಅಗ್ನಿಜ್ವಾಲೆಯಿಂದ ಸುಟ್ಟುಹೋದ ಕರ್ಪೂರದಿಂದ ಉಳಿದ ಶೇಷದಂತೆ ಆತ್ಮನಲ್ಲಿ ಲೀನವಾಗಿ ಹೋಗುವದು. ॥೭॥

೩ ವೃತ್ತ॥ ತಾ॥ ವಿರಾಜಮಾನವಾಗಿರುವ ಉಪಾಧಿಗಳ ಮೂಲಕದಿಂದ ಬುದ್ಧಿಗೆ ಅರ್ಥಸಾಧಕತ್ವವೆಂಬುವದೇ ಫಲಭೂತವಾಗಿರುವದು. ಉಪಾಧಿಗಳೆಲ್ಲವೂ ನಿರ್ಮೂಲನ ಭಾವವನ್ನು ಹೊಂದುತಿರಲಾಗಿ ಆಗಲಾನಂದಘನವೇ ವ್ಯಕ್ತವಾಗಿ ತೋರುತಲಿರುವದು. ಎಂಬದಾಗಿ ಅನುಭವ ವಿಚಾರದಿಂದ ಚರಮವೃತ್ತಿಯೊಳು ಅಖಂಡ ಬ್ರಹ್ಮಾನಂದವು ವ್ಯಾಪ್ತಿಯಂ ಪಡೆದಿರುವದು ಎಂತಲೂ ವ್ಯವಹರಿಸುತಲಿರುವರು.

೪ ವಚನ ॥ ತಾ ॥ ಹಿಂದೆ ವಿವರಿಸಲ್ಪಟ್ಟ ಉಪಕ್ರಮೋಪ ಸಂಹಾರಾದಿ ಷಡ್ವಿಧತಾತ್ಪರ್ಯ ಲಿಂಗಗಳಿಂದ ನಿರ್ಧರಿಸಲ್ಪಟ್ಟ ಅಖಂಡ ಸದ್ರೂಪವಾದ ಬ್ರಹ್ಮಪದಾರ್ಥಕ್ಕಿಂತಲು ಇತರವಾಗಿ ತೋರಿಬರುವ ಪ್ರಪಂಚವು ಇಲ್ಲದೆ ಇರುವದರಿಂದಲೇ ಸಾಮಾನ್ಯವಾಗಿ ತೋರಿಬ

---

ಇರುತಿರಲುಚರಿಸದೆಕುರಿತು ವಿಷಯವನಪ್ಪುದುರಿ ಕರ್ಪೂರವ ನುಂಡತೆರಮಾತ್ಮನಲ್ಲಿ ॥೭॥

೩ ಮೂ॥ ವೃತ್ತ॥ ವಿಕಸನಮಾದುಪಾಧಿಮುಖದಿಂ ಫಲವಪ್ಪುದು ಬುದ್ಧಿಗರ್ಥಸಾಧಕತೆನಿರ್ಮೂಲನೋಪಧಿನಿಮಿತ್ತದಿನೋಡೆಚಿದೇಕರೂಪಮೆ ಸುಕರದಿತೋರ್ಪುದೆಂದನುಭವಜ್ಞರ ನಾರತ ಮಾಡಿಕೊಂಬುದಾರ್ಥಿಕ ಸುಖಮಲ್ಲಿ ಚಿದಾತ್ಮಗತ ಮುಚ್ಚಲಿತಿಹುದೇಕವೃತ್ತಿಯೋಳ್ ॥

೪ ಮೂ॥ ವಚನ ॥ ಪೂರ್ವೋಕ್ತ ಷಡ್ವಿಧಲಿಂಗಗಳೋಳ್ ಸದನ್ಯಮಾದ ಪ್ರಪಂಚವಿಲ್ಲವಾದುದರಿಂದ ಸರ್ವಸಮಾನಜ್ಞಾನಮೋ

ರುವ ಪ್ರಾಪಂಚಿಕ ಪದಾರ್ಥಗಳಲ್ಲಿ ಸರ್ವಸಾಮಾನ್ಯಜ್ಞಾನವೇ ಫಲವೆಂಬದಾಗಿ ಹೇಳಲ್ಪಡುವದು. ಇದಲ್ಲದೆ ಫಲೀಭೂತವಾದ ಜ್ಞಾನಾನುರೂಪವಾಗಿ ಕಲ್ಪನಾ ವಿಶೇಷಗಳಲ್ಲದೆ ಕಲ್ಪನಾವಿಶೇಷಗಳನ್ನು ಅನುಸರಿಸಿ ಫಲವು ಇರುವದಿಲ್ಲವು. ಆದರೆ ಸಕಲವಾದ ಕೋರಿಕೆಗಳೆಲ್ಲವೂ ಲಯವನ್ನು ಪಡೆಯುತ್ತಿರಲಾಗಿ ಅಂತಪ್ಪ ಸಮಾಧಿಯಲ್ಲಿ ನಿನಗೆ ಯಾವವಿಧವಾದ ಅನುಭವವು ತೋರಿಬರುತಲಿರುವದೊ, ಆ ಅನುಭವ ವಿಶೇಷವನ್ನು ನಿನ್ನಯ ಮುಖದಿಂದಲೇ ಕೇಳಿದರೆ ಆಗ ನಿನಗೆ ವಿಶೇಷವಾಗಿ ಸಂತೋಷವು ಉಂಟಾಗುವದು. ಇಲ್ಲದ ಪಕ್ಷದಲ್ಲಿ ತೃಪ್ತಿಯಾಗುವದಿಲ್ಲವು. ಎಂಬದಾಗಿ ಮಹಾನುಭಾವನಾದ ಶ್ರೀಗುರುವು ಉದಹರಿಸಲು ತರುವಾಯ ಶಿಷ್ಯನಾದ ಚಿತ್ತನರಸಾಥನು ಈ ಮುಂದೆ ವಿವರಿಸುವ ಪ್ರಕಾರವಾಗಿ ಹೇಳುತಲಿಧಾನೆ, ಎಲೈ ಸ್ವಾಮಿಯೆ ! ಆ ಗರ್ಭನಿರ್ಭಾಗ್ಯನಾದವನಿಗೆ ವಿಶೇಷವಾಗಿ ದ್ರವ್ಯವನ್ನು ಕೊಟ್ಟರೆಯು, ಪ್ರಾಯದಿಂದ ಸಕಲವಾದ ಇಂದ್ರಿಯಗಳ ಶಕ್ತಿಯನ್ನು ಳ್ಳವನಾಗಿರುವ ಕಾಮುಕನಾದವನಿಗೆ ಸರ್ವಾಂಗ ಸುಂದರಿಯಾದ ಅಂಗನಾಮಣಿಯನ್ನು ಒದಗಿಸಿದರೆಯು, ಒಹಳವಾದ ಹಸಿವಿನಿಂದ ಬಳಲುತಲಿರುವ ಪುರುಷನಿಗೆ ಘೃತಸೂಪಗಳಿಂದ ಯುಕ್ತವಾದ ಮೃಷ್ಟಾನ್ನವನ್ನು ಇತ್ತರೆಯು ನಿದ್ರೆಹೋಗಬೇಕೆಂಬದಾಗಿ ಅತ್ಯಂತಾಸಕ್ತನಾಗಿರುವ ಮನುಷ್ಯನಿಗೆ ಹಂಸತೂಲಿಕಾ ತಲ್ಪವನ್ನು ಹಾಸಿಸಿದ್ದ ಮಾಡಿ ಕೊಟ್ಟರೆಯು, ಎಂಥವನಾದಾಗ್ಯೂ ಅನಾದರಮಾಡಿ ತ್ಯಜಿಸುವದುಂ

---

ಫಲವೆನಿಸಿಕೊಂಬುದಾಗಿ ಮೋಕ್ಷಾಫಲಾನುಸಾರದಿಂ ಕಲ್ಪನೆಯಲ್ಲದೆ ಕಲ್ಪನಾನುಸಾರವಾಗಿ ಫಲವಿರದಾಗಿ ಸರ್ವಸಂಕಲ್ಪ ವಿಲೀನಾವಸ್ಥೆಯಾದ ಸಮಾಧಿಯೊಳ್ನಿನಗೇನನುಭವಂ ಬಂದುದಾಯರ್ಥಮಂ ನಿನ್ನ ಮುಖದಿಂ ಕೇಳಿದಲ್ಲದೆನಗೆ ಮತಿಸಮಾಧಾನವಾಗದೆನಲ್ಕೆ, ಎಲೈ ವಿಚಾರನೆ ! ದರಿದ್ರಂಗರ್ಥಮಿತ್ತರೆ ಕಾಮುಕಂಗೆ ಕಾಂತೆಯನಿತ್ತರೆ ಕ್ಷುಧಿತಂಗನ್ನಮನಿತ್ತರೆ ನಿದ್ರಾಳುವಿಂಗೆ ಶಯನಮನಿತ್ತರೆ ಯತ್ತಲಾನಪೇಕ್ಷಿಸುವನೆ, ಸಂಸಾ

ಟಿ? ಜನನಮರಣ ಪ್ರವಾಹರೂಪವಾಗಿರುವ ಸಂಸಾರವೆಂಬ ಘೋರವಾದ ಸಮುದ್ರದಲ್ಲಿ ಬಿದ್ದು ಸಂಕಟಪಟ್ಟು ಹ್ಯಾಗಾದರು ಇದನ್ನು ದಾಟಹೋದೇನೆ?ಎಂಬದಾಗಿ ಮೋಕ್ಷಾಪೇಕ್ಷೆಯುಳ್ಳ ನನಗೆ ತಾವು ಪರಮಾತ್ಮ ರೂಪವಾಗಿರುವ ಪರಬ್ರಹ್ಮಸ್ವರೂಪವನ್ನು ಒಂದುಬಾರಿ ಹೇಳಿದರು. ಮತ್ತು ಪ್ರಕಾರಭೇದಗಳಿಂದ ಬಗೆಬಗೆಯಾಗಿ ವಿವರಿಸಿದಾಗ್ಯು ಮರತುಬಿಡುವದುಂಟೆ? ಇತರ ವೃತ್ತಿಗಳಿಂದ ಆಕ್ರಮಿಸಲ್ಪಟ್ಟು ಮಲಿನವಾಗಿಲ್ಲವು. ಇನ್ನು ಆ ವಿಷಯದಲ್ಲಿ ಸಂಶಯಪಡಬೇಕಾದ ಅವಶ್ಯಕವಿಲ್ಲವು. ಆದರು,

೫ ಕಂದ॥ ತಾ॥ ಲೋಕದಲ್ಲಿ ಪಶುಪಕ್ಷಿ ಮೃಗಾದಿಗಳ ಜನ್ಮಗಳಿಗಿಂತಲೂ ಈಗ ಉಂಟಾಗಿರುವ ಜನ್ಮವು ಅತ್ಯಂತ ಪರಿಶುದ್ಧವಾಗಿರುವದು. ಹೀಗಿರಲಾಗಿ ಈಗಲು ಸಮಸ್ತವಾದ ಸಾಧನ ಸಂಪತ್ತಿಯನ್ನು ಹೊಂದಿ ಉತ್ತಾರಣವನ್ನು ಪಡೆಯಲು ಅಮೋಘವಾದ ಆತ್ಮಜ್ಞಾನದಿಂದಲ್ಲದೆಯೂ ಕೇವಲಕರ್ಮಾನುಷ್ಠಾನದಿಂದ ಮುಕುತಿಯನ್ನು ಪಡೆಯಬೇಕಾದರೆ ಬ್ರಹ್ಮನ ಆಯುಃಪರಿಮಿತಿ ಕಾಲದವರಿಗೂ ಆದರೂ ಆಗಲಾರದು.

೬ ವಚನ॥ ತಾ॥ ಖಂಡಿತವಾಗಿ ಸಂಸಾರಬಂಧವು ಕೇವಲ ಕರ್ಮಾ

---

ರಾರ್ತನಾಗಿ ಮುಮುಕ್ಷುವಾದೆನಗೆ ನೀಂತತ್ವಮಂ ಸಕೃದಾವೃತ್ತಿಯುಸುದೋಃಡಮುಪಸಾರ್ಥಭೇದದಿಂದುಕ್ತಮನೆ, ಮರಳಿ ಪೇಳಿದೊಡಂ ಮರೆಯಲಾಪೆನೆ ಪರಾಕ್ರಾಂತಮತಿಯಿಂದಿರ್ಪೆನೆ ಸಾಕು ಬಿಡುಬಿಡಾದೊಡಂ.

೫ ಮೂ॥ ಕಂದ॥ ಇತಾರ್ಥಸಾಧನಸಂಪ।
ತ್ತಿಂತಾಳ್ದೀಜನ್ಮಶುದ್ಧಿಗೋಸುಗಮಾಗಲ್॥
ಸಂತತಕರ್ಮಾನುಷ್ಠಾನ।
ದಿಂತೀರುವುದುಂಟೆಬಿದಿಯುಪರಮಾಯುವಿಗಂ॥

೬ ಮೂ॥ ವಚನ॥ ಸಂಸಾರಬಂಧಮೆನೆಲದಂಕೇಳಿ.

ನುಷ್ಠಾನದಿಂದನಿವೃತ್ತಿ ಯಾಗಲಾರದು ಎಂಬದಾಗಿನುಡಿದ ನುಡಿಯು ನ್ನುಕೇಳಿ, ... ... ... ... *

೭ ವೃತ್ತ॥ ತಾ॥ ಇದುವರಿಗೆ ಕ್ರಮವಾಗಿ ವಿವರಿಸಿದ ಇಪ್ಪತ್ತೈದು ಪದ್ಧತಿಗಳನ್ನು ಚೆನ್ನಾಗಿ ತಿಳಿದುಕೊಂಡು ಅವುಗಳಲ್ಲಿ ಒಳ ಹೋಗುವಂತೆ ಬುದ್ಧಿಯನ್ನು ಪ್ರವೇಶಮಾಡಿಸಿದರೆ ಆ ಸಮಯದಲ್ಲಿ ಆರೋಪಿತವಾಗಿರುವ ಈ ಚರಾಚರಾತ್ಮಕವಾದ ಪ್ರಪಂಚವು ತೋ ರಿಬರುವದೆ? ಪುನಃ ಜನನ ಮರಣ ಪ್ರವಾಹ ರೂಪವಾಗಿರುವ ಸಂ ಸಾರವೆಂಬ ವಿಷಲತಾಂಕುರವು ತಲೆದೋರುವುದೆ? ಸರ್ವತ್ರವ್ಯಾಪಿಸಿ ಕೊಂಡು ಅಘಟನಾಘಟನಗಳನ್ನು ಮಾಡುತಿರುವ ಮಾಯೆಗೆ ಕಾಮಾ ದಿಗಳೆಲ್ಲ ಉಡಿಗಿ ಹೋಗುತಿರಲು ವಿವಿಧ ಸಂತಾಪವನ್ನುಂಟುಮಾಡು ವ ಬಲವು ಇರುವುದೆ? ಒಂದುಕಾಲಕ್ಕು ಇರಲಾರದು. ಈ ವಿಷ ಯದಲ್ಲಿ ಸಂದೇಹವು ಬಿಡತಕ್ಕದ್ದಾಗಿರುವುದು.

೮ ಜಂಪೆ॥ ತಾ॥ ಎಂದೀ ಪ್ರಕಾರವಾಗಿ ನುಡಿದಮಾತನ್ನು ಕೇಳಿ ಅಪರಿಮಿತವಾದ ಹರ್ಷವನ್ನು ಹೊಂದಿ ಹಾಗೆಯೆ ಹಿಂದೆವಿಶದವಾಗಿ ಉಪನ್ಯಸಿಸಿದ ಅರ್ಥವನೆಲ್ಲಮಂ ದೃಢವಾದ ಮನನಕ್ಕೆ ತಂದುಕೊಂ ಡು, ॥೧॥ ಅಖಂಡಾತ್ಮಾನುಭವವು ತನಗೆ ಉಂಟಾದುದರಿಂದ ಕೃತಾ ರ್ಥತೆಯಂ ಪಡೆದು ಇದುವರಿಗೆ ಪೂರ್ವದೊಳು ಅನುಭವಿಸದಿರುವ

---

೭ ಮೂ॥ ವೃತ್ತ ॥ ಈಪಟುಪಂಚವಿಂಶತಿಸುಪದ್ಧತಿಯೊಳ್ಮನ
ಮಿಟ್ಟರೀಜಗದ್ರೂಪಮೆತೋರ್ಪುದೆ?ಮೊದಲಿನಂತೆಭವಾಂಕುರ
ಶಕ್ತಿಇರ್ಪುದೆ?ವ್ಯಾಪಿನಿಯಾದಮಾಯೆಯಲ್ಲಿ ತಗ್ಗಿದಕಾಮಮು
ಖಾದಿಗಳಗುರುತಾಪವಣಗೆಪ್ರಧಾನಬಲಮಿರ್ಪುದೆ?ಸಾಕುವಿತರ್ಕ
ಮಾಕರಂ ॥

೮ ಮೂಲ॥ ಜಂಪೆ॥ ಅಂದಮಾತಿಗೆಹರ್ಷವೈದಿ ಪೂರ್ವೋಕ್ತಾರ್ಥ
ಬೃಂದಮಂಮನನದಿಂಪೊಂದುಗೆಗೆತಂದೂ ॥೧॥
ಅನುಭವಮೊಸೆಯಲಾತ್ಮನಲಿಧನ್ಯನಾಗಿ ಮೊದಲನುಭವಿಸದಿಹ
ಸುಖವನನುಭವಿಸಿಹಿಗ್ಗೀ ॥೨॥

ಸುಖಾತಿಶಯವನ್ನು ಹೊಂದಿದಂಥವನಾದ್ದರಿಂದಲೇ ಆನಂದ ಪರವಶನಾಗಿ ॥೨॥ ಕಬ್ಬಿಣವೆಂಬಲೋಹವು ಶುದ್ಧಿಯಾದ ರಸದ ಸಂಬಂಧದಿಂದ ಸುವರ್ಣತ್ವವನ್ನು ಹೊಂದಿದ ಬಗೆಯಿಂದ ತಾವು ಉದಹರಿಸಿದ ಆತ್ಮಜ್ಞಾನ ರೂಪವಾಗಿರುವ ಬ್ರಹ್ಮವಿದ್ಯೆಯ ದ್ವಾರದಿಂದ, ॥೩॥ ಅವಶ್ಯಕವಾಗಿ ಮಾಡತಕ್ಕ ಕೆಲಸವನ್ನು ಮಾಡಿದಂಥವನಾದೆ. ನನಗೆ ಸಾಕ್ಷಾತ್ತಾದ ಪರಶಿವನೆ ನೀನು. ಜನನಾದಿ ಸಂಸೃತಿ ಸಾಗರದಲ್ಲಿ ಬಿದ್ದು ಒದ್ದಾಡುತ್ತಿದ್ದ ಅನಾಥನಾದ ನನ್ನನ್ನು ಹಸ್ತಾವಲಂಬವನಿತ್ತು ಮೇಲಕ್ಕೆ ಎತ್ತಿದಂಥವನಾದೆ. ॥೪॥ ಎಂದೀರೀತಿಯಿಂದ ಪೇಳಿ ಆಪದ್ಬಂಧುವಾದ ಶ್ರೀಗುರುವಿನ ಚರಣ ನಳಿನಗಳಲ್ಲಿ ಶ್ರದ್ಧಾಭಕ್ತಿಗಳಿಂದೊಡಗೂಡಿ ಆನತಿಯಿಂ ಅಷ್ಟಾಂಗಲಕ್ಷಣವಾದ ಪ್ರಣಾಮ ಪರಂಪರೆಗಳನ್ನು ಸಮರ್ಪಣೆ ಮಾಡಲಾಗಿ ಉತ್ಸಾಹ ಸಿಂಧುವಿನಲ್ಲಿ ಮುಳುಗಿನಿಂದು, ... ... ... ॥೫॥

೯ ವಚನ॥ ತಾ॥ ವಿಚಾರ ಪುರೋಹಿತ ರೂಪವಾಗಿರುವಆಚಾರ್ಯನು ಆ ಮನೋವನಿಪಾಲನ ಸಂಬಂಧವಾಗಿರುವ ಆತ್ಮಾನುಭವವೆಂಬ ಪಾರಿಶುದ್ಧ್ಯವನ್ನು ಕಂಡು ರೋಮಾಂಚದಿಂದ ಕವಚಿತವಾದ ಶರೀರವುಳ್ಳವನಾಗಿ ದೃಢತರವಾಗಿ ಆಲಿಂಗನೆಯನ್ನುಮಾಡಿ ಎಲೈ ಪುಣ್ಯಾತ್ಮನೆ! ಪಡೆಯತಕ್ಕ ಪ್ರಯೋಜನವನ್ನು ಪಡೆಯುವಂಥವನಾದೆಎಂಬದಾಗಿ ಹೇಳಿ ಆ ಮನಸ್ಸಾರ್ವಭೌಮನನ್ನುಹುಬ್ಬಿನ ಮಧ್ಯಭಾಗವೆಂ

---

ಕನಕತೆಯ ಸಿದ್ಧರಸಗತಿಯಿಂದ ಕಾಬ್ಬೋನ್ನುವಿನಯಿಸಿದ
ವ್ರೋಲ್ನಿನ್ನವಿದ್ಯಾಮುಖದಲೀ ॥೩॥
ಕೃತಕೃತ್ಯನಾದೆಪಶುಪತಿಯೆನನಗೆನೀನು ಪತಿತನನ್ನೆಗಹಿದೈಭ
ವಸಿಂಧುವಿಂದಾ ॥೪॥
ಎಂದಾತನ ಪದಾರವಿಂದದೊಳ್ ಲೆಯಭರದಿಂದಾಗಲೊಂದಿಸ
ಲಮುಂದೋತ್ಸವದಲೀ ॥೫॥

೯ ಮೂ॥ ವಚನ॥ ವಿಚಾರಪುರೋಹಿತನಾತನು ಪಚಾರಪರಿಶುದ್ಧತೆಯುಂ ಕಂಡು ಪುಲಕಾಂಕಿತ ವಿಗ್ರಹನಾಗಾಲಿಂಗಿಸಿ ಫಲಿತಾ

ಬ ವಾರಣಾಸಿಕ್ಷೇತ್ರಕ್ಕೆ ಕರೆದುಕೊಂಡುಬಂದು ತ್ರಿಕೂಟವೆಂಬ ಉದ್ದಂಡವಾದ ಸಿಂಹಾಸನದಲ್ಲಿ ಅಂದದಿಂ ಕುಳ್ಳಿರಿಸಿ ಪರಬ್ರಹ್ಮಾನುಭವವಿಶಾರದರಾದ ಪರಮ ಹಂಸರ ಸಮುದಾಯಕ್ಕೆ ಕ್ರೀಡಾರ್ಹವಾಗಿರುವ ಬ್ರಹ್ಮವಿದ್ಯೆಯೆಂಬ ಏಕಚಕ್ರಾಧಿಪತ್ಯವನ್ನು ಸ್ವಾಧೀನವಾಡಲೋಸುಗ ಬ್ರಹ್ಮನಿಷ್ಠತೆಯೆಂಬ ಮಹಾಪಟ್ಟಾಭಿಷೇಕವನ್ನು ಪರಭಕ್ತಿನಿವೃತ್ತಿಯರೆಂಬ ಪಟ್ಟಮಹಿಷಿಯರೊಡನೆ ಪ್ರಕಾಶವಾಗಿ ಮಾಡುವಂಥವನಾದನು. ಅದರ ಬಗೆಯೆಂತೆಂದರೆ.

೧೦ ತ್ರಿಪುಡಿ॥ ತಾ॥ ನೈರ್ಮಲ್ಯ ಸಂಪತ್ತಿಯಿಂ ಸಂಶೋಭಿಸುವ ಆಕಾಶದ ಬಲದಿಂದ ಆವೃತವಾಗಿರುವ ಸಾವಿರದಳಗಳುಳ್ಳ ಬಂದಾನೊಂದು ತಾವರೆಯು ಇರುವದು. ಅದನ್ನು ನೋಡಿದರೆ ಸ್ಫಟಿಕ ಮಣಿಯು ಕಲಶದಂತೆ ಶೋಭಿಸುತಲಿರುವದು. ॥ ೧ ॥ ಅಂತಪ್ಪ ಕಮಲದ ಮಧ್ಯಭಾಗದೊಳು ಅಮೃತರ ಸಘನವಾಗಿರುವ ಅಖಂಡವಾದ ಒಂದು ಚಂದ್ರಮಂಡಲವಿರುವದು. ಅದು ಉತ್ತಮವಾದ ಕಾಂತಿಕಲಗಳಿಂದಲು, ಸುಧಾರಸದಿಂದಲು ಪೂಜಿಸುವದಕ್ಕೆ ಅರ್ಹವಾಗಿರುವದು. ॥೨॥ ಸಹಸ್ರಾಧಿಕವಾಗಿರುವ ಸೂಕ್ಷ್ಮಸುಧಾರಸ ಬಿಂದುಗಳ

---

ರ್ಹನಾರೆಯುಂದಾ ಮನೋನ್ಮಪನಂ ಭ್ರೂಮಧ್ಯವೆಂಬ ವಾರಣಾಸಿಪುರಕ್ಕೆ ತಂದು ತ್ರಿಕುಟಸಿಂಹಾಸನದೊಳ್ ಪರಮಹಂಸವಿಹಾರಯೋಗ್ಯವಾದ ವಿದ್ಯಾಸಾಮ್ರಾಜ್ಯ ಚಕ್ರವರ್ತಿಯಂದು ಬ್ರಹ್ಮಾಭಿಷೇಕವಂ ನಿವೃತ್ತಿ ಶಿವಭಕ್ತಿ ಮಹಿಸಮೇತವಾಗೆ ಪ್ರಕಟೀಕರಿಸುತಿರ್ದಪನದೆಂತೆನೆ.

೧೦ ಮಾ॥ ತ್ರಿ॥ ವಿಮಲಮಾದನಭೋಬಲಪರಿವೇಷ್ಟಿಸಿರ್ಪಸಹಸ್ರದಳಗಳ। ಕಮಲಮಿರ್ಪುದುನೋಡೆಪಳುಕಿನಕಲದಂತೆ ॥
ಆಕಮಲಮಧ್ಯದಿ ಸುಧಾಮಯಮಾದ ಶಶಿಮಂಡಲಮಿಹದುಸುಷುಮಾಕಣಗಳಿಂದಮೃತಮಯದಿಂಮಾನ್ಯಮಾಗೀ ॥೨॥
ಸಾವಿರದತುಂತುರ್ವನಿಗಳಾ ಸಾರಮಿರ್ಪುದದರ್ಕೆರವಿಚಂದ್ರಾವಸಥನಾಡೀವಿವರಬಂಧಂವಿರಚಿಸೀ ॥೩॥

ಸಮುದಾಯದಿಂದ ಕೂಡಿರುವದಾಗಿಯು, ಸೂರ್ಯಚಂದ್ರಾದಿನಾಡಿಗಳು ಅಂತರ್ನಾಡಿಗಳಿಂ ದೊಡಗೂಡಿರುವಂಥವುಗಳಾಗಿಯು, ಅಧಿದೇವತೆಗಳಿಂದೊಡಗೂಡಿಯು, ಜಟಿಲಗಳಾಗಿಯು ಇರುವವು. ॥೩॥ ಅಗ್ನಿಜ್ವಾಲಾ ಜಾಲವನ್ನು ವಹಿಸಿರುವ ಸುಷುಮ್ನಾನಾಡಿಯ ರಂಧ್ರವನ್ನು ತನ್ನ ಫಣಾಮಂಡಲದಿಂದ ಆವರಿಸಿ ಕೊಂಡಿರುವ ಕುಂಡಲಿಯೆಂಬ ಸರ್ಪದ ಹೆಡೆಯನ್ನು ಅಂದರೆ ಶಿರಸ್ಸನ್ನು ಯೋಗಧಾರಣಾ ವೈಚಿತ್ರ್ಯದಿಂದ ಔನ್ನತ್ಯವನ್ನು ಪಡೆಯುವಂತೆ ಮಾಡಿ ಅಂದರೆ ಏಳುವಹಾಗೆ ಮಾಡಿ ಬಹಿರಂಗವಾದ ವೃತ್ತಿಗಳನೆಲ್ಲವಂ ನಿವೃತ್ತಿಯಾಗುವಂತೆ ಆಚರಿಸಿ ॥ ೪ ॥ ಯಾವಾಗಲಾದರೆ ಸುಷುಮ್ನಾದ್ವಾರ ಪ್ರವೇಶ ಪ್ರವೃತ್ತಿಗೆ ಆರಂಭವಾಗುವದೋ ? ಆಗಲೇ ಅತ್ಯುತ್ತಮವಾಗಿರುವ ಬ್ರಹ್ಮಾಭಿಷೇಕವಾಯಿತೆಂದು ನಿರ್ಧರಿಸಬೇಕು. ಆಧರೆ ಆಗಲೆ ದೇಹದೊಳು ಸರ್ವಾವಯಗಳೂ ಸುಧಾರಸದಿಂದ ಸ್ನಾನಮಾಡಿದವುಗಳಂತೆ ಆಗುವವು. ॥೫॥ ಇಂದ್ರಿಯಾರ್ಥ ಜನ್ಯವಾದ ಹೇಯಸುಖವಾಸನೆಯೆಂಬ ಮಾಲಿನ್ಯವು ಕಳೆದು ಹೋಗುತ್ತಿರಲಾಗಿ ಆಗ ಬ್ರಹ್ಮಾನಂದವೆ ಸ್ಫುಟಸುತ್ತಲಿರುವುದು. ಈ ಸುಖವು ಬ್ರಹ್ಮೇಂದ್ರೇ ಮುಂತಾದ ನಿಖಿಲದೇವತೆಗಳ ಲೋಕಗಳಲ್ಲಿ ಉಂಟಾಗುವ ಎಲ್ಲಾ ಸುಖಪರಂಪರೆಗಳನ್ನು ಅತಿಕ್ರಮಿಸಿರುವದು. ಅದುದರಿಂದಲೇ ಆ ಆತ್ಮಾನಂದ ಸುಖವನ್ನು ಈ ರೀತಿಯಾಗಿರುವದೆಂದು ನಿರೂಪಿಸಲಶಕ್ಯವಾಗಿರುವದು ॥೬॥ ಇಂತಪ್ಪ

---

ದಹನವಾಹಿನಿಯಾದ ನಾಡೀದ್ವಾರಮಂಮುಚ್ಚಿದರ್ಕುಂಡಲಿ ।
ಯಹಿಯನೆಬ್ಬಿಸಿಬಾಹ್ಯವೃತ್ತಿಯನ್ಯೆದದಿರಲು ॥೪॥
ಆದುದಾಗಮಹಾಭಿಷೇಕಮುದಮೃತಮಯಮಾಗಂಶುಮತ್ಪರೆ ।
ಯ್ಯೈದಿದಖಿಲಾವಯವಮಧುರಸ್ವಾದುವಂತೆ ॥೫॥
ವಾಸನಾಕಲ್ಮಷವಳಿಯೆನಿಜವಾದಸುಖಮೊಪ್ಪೊಣ್ಮಿದುದು । ವಿಧಿ
ವಾಸವಾದಿಪದದಲಿಕಾಣದವಾಚ್ಯಸೌಖ್ಯಂ ॥೬॥
ಬಂದುದಾಗಮನೋನ್ಮಪಗೆಮುನಿವಂದನೀಯಮೆನಿಸುವ ಸಾ
ಮ್ರಾಜ್ಯಂದಿವಿಜರೊಗ್ಗಾಗಿಸೇವಿಸೆನಿಂದರಾಗಾ ॥೭॥

ಅಪರಿಮಿತಾನಂದವನ್ನು ಹೊಂದುತ್ತಿರುವಾಗಲೇ ಮನಶ್ಚಕ್ರವರ್ತಿಗೆ ಸಕಲ ಮುನಿಕುಲ ತಿಲಕರಿಂದ ವಂದನೀಯುವಾಗಿರುವ ಸಾಮ್ರಾಜ್ಯವು ಅಂದರೆ ಏಕಚಕ್ರಾಧಿಪತ್ಯವು ಸಮನಿಸಿದಂತಾಗುವದು. ಆದಕಾರಣದಿಂದಲೇ ಅಶೇಷರಾದ ದೇವತೆಗಳೂ ಇಷ್ಟಾನುಸಾರವಾದ ಸೇವೆಯನ್ನು ಮಾಡಲು ಸಿದ್ಧರಾಗಿರುವರು. ‖೭‖

೧೧ ವಚನ‖ ತಾ‖ ಭೂಮಿ, ಜಲ, ಅಗ್ನಿ, ಮಾರುತ, ಆಕಾಶಗಳೆಂಬ ಪಂಚಮಹಾ ಭೂತಗಳಿಗೆ ಅಧಿದೇವತೆಗಳಾಗಿರುವ ಬ್ರಹ್ಮನು,ವಿಷ್ಣುವು, ರುದ್ರನು, ಈಶ್ವರನು, ಸದಾಶಿವನು, ಎಂಬೀದೇವತೆಗಳು ಅತಿತೀವ್ರದೊಳು ಬಂದು ಎದುರಾಗಿ ನಿಂತವರಾಗಿ, ಸಕಲವಾದ ಇಷ್ಟಾರ್ಥಗಳನ್ನು ಏಕಕಾಲದಲ್ಲಿಯೆ ಅನುಭವಿಸುವಂಥವನಾಗು ಎಂಬದಾಗಿ ಬಲಭಾಗದಲ್ಲಿ ನಿಂತು ಪರಮ ಸಂತೋಷದಿಂದ ಆಶೀರ್ವಾದವನ್ನು ಮಾಡುವಂಥವರಾಗುವರು. ಮತ್ತು ಸತ್ವರಜಸ್ತಮೋಗುಣಗಳಿಗೆ ಅಭಿಮಾನ ದೇವತೆಗಳಾಗಿರುವ ಮೂರ್ತಿಭೇದದಿಂದ ಪ್ರಕಾಶಿಸುವ ಬ್ರಹ್ಮವಿಷ್ಣು ಮಹೇಶ್ವರರು ಬಂದು ಎಡಭಾಗದಲ್ಲಿ ನಿಂತು ಸಕಲೇಷ್ಟಸಿದ್ಧಿಗಳಾಗಲೆಂಬದಾಗಿ ಹರಸುವಂಥವರಾಗುವರು. ತರುವಾಯ ಮನಸ್ಸು,ಬುದ್ಧಿ, ಚಿತ್ತ, ಅಹಂಕಾರಗಳೆಂಬ ಅಂತಃಕರಣಭೇದಗಳಿಗೆ ಅಭಿಮಾನ ದೇವತೆಗಳಾಗಿರುವ ಚಂದ್ರನು, ಚತುರ್ಮುಖ ಬ್ರಹ್ಮನು, ಕ್ಷೇತ್ರಜ್ಞನು, ತ್ರಿಪುರಾಂತಕನು, ಎಂಬೀದೇವತೆಗಳು ಬಂದು ಹಿಂಭಾಗದೊಳು ಕುಳಿತು ಸಕಲೈಶ್ವರ್ಯ ಸಿದ್ಧಿಯಾಗಲೆಂದು

---

೧೧ ಮೂ ‖ ವಚನ‖ ಪಂಚಮಹಾಭೂತಾಧಿ ದೈವತಂಗಳಾದ ಬ್ರಹ್ಮವಿಷ್ಣು ರುದ್ರೇಶ್ವರ ಸದಾಶಿವರ್ಬಂದು ಸರ್ವಕಾಮಾಪ್ತಿರಸ್ತು ಯುಂದಭಿವಂದಿಸಿ ಒಲದಲ್ಲಿ ಕುಳಿತರು ಗುಣತ್ರಯಾಧಿದೈವತಂಗಳಾದ ಭವಮೃಡಹರರ್ಬಂದು ಇಷ್ಟಸಿದ್ಧಿರಸ್ತು, ಎಂದಾಶೀರ್ವದಿಸಿ ಎಡದೋಳ್ಕುಳಿತರೂ ಅಂತಃಕರಣಾದಿ ದೈವತಂಗಳಾದ ಚಂದ್ರಚತುರ್ಮುಖ ಕ್ಷೇತ್ರಜ್ಞ ತ್ರಿಪುರಾಂತಕರ್ಬಂದು ಐಶ್ವರ್ಯಮಸ್ತು ಎಂದುವಚಿಸಿ ಪಶ್ಚಾದ್ಭಾಗದಲ್ಲಿ ಕುಳಿತ

ಹೇಳುವಂಥವರಾಗುತ್ತಾರೆ. ಇನ್ನು ಕಿವಿಯು, ಚರ್ಮವು, ಕಣ್ಣು, ನಾಲಿಗೆಯು, ಮೂಗು, ಎಂಬೀಜ್ಞಾನೇಂದ್ರಿಯ ಪಂಚಕಕ್ಕೆ ಅಭಿಮಾನ ದೇವತೆಗಳಾಗಿರುವ ದಿಕ್ಕು, ವಾಯುವು, ಸೂರ್ಯನು, ವರುಣನು, ಅಶ್ವಿನೀದೇವತೆಗಳು, ಇವುರುಗಳಿಂದ ಸಹಿತರಾಗಿ ವಾಕ್ಕು,ಪಾಣಿ, ಪಾಯು, ಪಾದಗಳೆಂಬ ಕರ್ಮೇಂದ್ರಿಯ ಪಂಚಕಕ್ಕೆ ಅಧಿದೇವತೆಗಳಾದ ಅಗ್ನಿಯು, ಇಂದ್ರನು, ಉಪೇಂದ್ರನು, ಪ್ರಜಾಪತಿಯು ಮೃತ್ಯುವು, ಎಂಬ ದೇವತೆಗಳು ಅಪರಿಮಿತವಾದ ಪರಾಕ್ರಮವು ಸಿದ್ಧಿಸಿರಲಿ ಎಂಬದಾಗಿ ಮುಂಭಾಗದೊಳು ನಿಂದು ಗಂಭೀರಧ್ವನಿಯಿಂನುಡಿಯುವಂಥವರಾಗುವರು. ಆಹಿಂದೆ ಪೂರ್ವ ಮುಂತಾದ ದಿಕ್ಕುಗಳಲ್ಲಿ ಇಂದ್ರಾದಿ ದಿಕ್ಪಾಲರೊಡನೆ ಸೂರ್ಯ, ಚಂದ್ರ, ಅಂಗಾರಕ, ಬುಧ, ಬೃಹಸ್ಪತಿ, ಶುಕ್ರ, ರಾಹು, ಕೇತುಗಳೆಂಬ ನವಗ್ರಹಗಳು ಐತಂದು ಸರ್ವೋತ್ತಮನಾಗಿರೆಂಬದಾಗಿ ಹರಸುವರು. ಬಳಿಕ ಬಲಿಗಾವಾಸವಾಗಿರುವ ಪಾತಾಳಲೋಕ ನಿವಾಸಿಗಳಾಗಿ ವಿಶೇಷವಾದ ವಿಜ್ಞಾನಕ್ಕೆ ಆಶ್ರಯ ಭೂತರಾಗಿರುವ ಆದಿಶೇಷನು, ವಾಸುಕಿಯು ಮುಂತಾದ ನಾಗಾಧಿರಾಜರುಗಳು ಸಾಕ್ಷಾತ್ತಾಗಿ ಬಂದು ನಿಂತು ರಾರಾಜಿಸುವನಾಗೆಂದು ಅನೇಕಾವರ್ತಿ ಉಸುರುವಂಥವರಾಗುವರು. ತದನಂತರದಲ್ಲಿ

---

ರು ಜ್ಞಾನೇಂದ್ರಿಯಾದಿ ದೇವತೆಗಳಾದ ಅಗ್ನೀಂದ್ರೋಪೇಂದ್ರಮೃತ್ಯುಪ್ರಜಾಪತಿಗಳ್ಬಂದು ಪರಾಕ್ರಮೋಸ್ತುಯೆಂದು ಪರಸಿ ಪುರೋಭಾಗದಲ್ಲಿ ಕುಳಿತರು,ಪೂರ್ವದಿಕ್ಕುಗಳಲ್ಲಿ ದಿಕ್ಪಾಲಕರೊಡನೆ ಸೂರ್ಯಾದಿ ರಾಹ್ವಂತವಾದ ಗ್ರಹಂಗಳು ಬಂದು ಜಯಜಯವೆಂದರು, ಪಾತಾಲ ವಾಸಿಗಳಾದ ವಿಜ್ಞಾನನಿಧಿಗಳಾದ ಶೇಷವಾಸುಕಿ ಪ್ರಮುಖರಾದ ನಾಗೇಂದ್ರರ್ಬಂದು ಪ್ರಸ್ಫುರ ಪ್ರಸ್ಫುರಯೆಂದರು, ಮಧ್ಯಮಲೋಕವಾಸಿಗಳಾಗಿ ವಿಜ್ಞಾನನಿಧಿಗಳಾದ ಸ್ವಾಯಂಭುವಾದಿ ಮನುಗಳುಬಂದುನಿಂದು ಶ್ರೀಮನ್ ಭವಭವಯೆಂದರು, ಊರ್ಧ್ವಲೋಕವಾಸಿಗಳಾಗಿ ವಿಜ್ಞಾನನಿಧಿಗಳಾದ ಮರೀಚ್ಯಾದಿ ನವಪ್ರಜೇಶ್ವರರೊಡನೆ ಸನಕ

ಮಾನುಷಲೋಕ ಕುಟುಂಬಿಗಳಾಗಿ ಜ್ಞಾನನಿಧಿಗಳಾಗಿರುವ ಸ್ವಾಯಂಭುವ ಮನುವು, ವೈವಸ್ವತಮನು, ಮುಂತಾದ ಚತುರ್ದಶ ಮನುಗಳು ಬಂದು ಲೋಕೈಕ ವಿಖ್ಯಾತವಾದ ಕೀರ್ತಿವುಳ್ಳವನಾಗೆಂಬದಾಗಿ, ನುಡಿಯುವಂಥವರಾಗುವರು. ಹಾಗೆಯೇ ಉಪರಿತನ ಲೋಕನಿವಾಸಿಗಳಾದ ಮರೀಚಿ ಮುಂತಾದ ಒಂಭತ್ತುಜನ ಬ್ರಹ್ಮರೊಡನೆ ಸೇರಿ ಸನಕ ಸನಂದನ ಮುಂತಾದ ಮಹಾನುಭಾವರು ಬಂದು ತರುಣ ಜನಮಾರನಾಗಿರುವ ಮನ್ಮಥನು ಮುಂತಾದ ಶತ್ರುಜಾಲವನ್ನು ಜಯಿಸುವಂಥವನಾಗು ಎಂಬದಾಗಿ ಅಭಿಧಾನಮಾಡುವರು. ಇವರುಗಳಲ್ಲದೆ ಪರ್ವತೋತ್ತಮಗಳಾಗಿರುವ ಮೇರುಮುಂತಾದ ಸಪ್ತಕುಲಾಚಲಗಳು, ಇನ್ನು ಲವಣ, ಇಕ್ಷು, ಸುರಾ, ಸರ್ಪಿ, ದಧಿ, ಕ್ಷೀರ, ಜಲಾರ್ಣವಗಳೆಂಬ ಸಪ್ತಸಾಗರಗಳು, ಜಂಬು, ಪ್ಲಕ್ಷ, ಕುಶ ಕ್ರೌಂಚ, ಶಾಕಿ, ಶಾಲ್ಮಲಿ, ಪುಷ್ಕರಗಳೆಂಬ ಸಪ್ತದ್ವೀಪಗಳು, ಈ ಭೂಲೋಕವೆ ಮುಖ್ಯವಾಗಿರುವ ಭುವರ್ಲೋಕಾದಿ ಊರ್ಧ್ವಸಪ್ತಲೋಕಾಭಿಮಾನದೇವತೆಗಳು, ಹಾಗೆಯೆ ಅಧೋಲೋಕಾಭಿಮಾನ ದೇವತೆಗಳೂ ಒಟ್ಟಾಗಿ ಬಂದು ನಿಂದು ಪದೆಪದೆ ಅಸದೃಶವಾಗಿರುವ ತೇಜಃಪರಾಕ್ರಮಗಳು ವಶವರ್ತಿಗಳಾಗಿರಲೆಂಬದಾಗಿ ಅರುಹುವಂಥವರಾಗುತ್ತಾರೆ. ಇದು ಅಲ್ಲದೆ ಅಮೋಘವಾದ ಪ್ರಯತ್ನದಿಂದಲು ಶ್ಲಾಘನೀಯವಾದ ವಿವೇಕದಿಂದಲು ಪರಬ್ರಹ್ಮಸಾಕ್ಷಾತ್ಕಾರವಂ ಮಾಡಿಕೊಳ್ಳದೆ ಇರುವದರಿಂದ ಪ್ರಾರಬ್ಧ ಕರ್ಮಾನುಸಾರವಾಗಿ ಬಂದು ಒದಗಿರುವ ನಾನಾವಿ

---

ಸನಂದಾದಿಗಳು ಬಂದುನಿಂದು ಕಾಮಾದ್ಯರಿವರ್ಗಂ ಜಹಿಜಹಿಯೆಂದರು, ಇವರಲ್ಲದೆ ಮೇರ್ವಾದಿ ಕುಲಾಚಲಂಗಳು ಜಂಬುದ್ವೀಪಾದಿ ಸಮಸ್ತ ದ್ವೀಪಂಗಳುಂ ಅತಲಾದ್ಯಂಡಾಂತವಾದ ಸಪ್ತಪಾತಾಳ ಲೋಕಾಭಿಮಾನಿದೇವತೆಗಳುಂ, ಅವ್ಯಾಹತಪ್ರತಾಪವಾಕ್ ಭೂಯೊಭೂತ್ವಾ ಚಿರಂತಿಷ್ಠ ತಿಷ್ಠಯೆಂದರು ಇದಲ್ಲದೆ ಸ್ವರೂಪಸಾಕ್ಷಾತ್ಕಾರಮಂ ಪಡೆದು ಪ್ರಾರಬ್ಧಾನುಸಾರಿಯಾಗಿ ಬಂದ ನಾನಾವಿಧ ದೇಹಂಗಳಂ ಧರಿಸಿರ್ದ ಖದ್ಯೋತಾ

ಥವಾದ ದೇಹಗಳನ್ನು ಧರಿಸಿರುವ ಮಿಂಚುಹುಳ ಮುಂತಾದ ಕೀಟಗಳು, ಗರುಡನೆ ಮುಂತಾದ ಪಕ್ಷಿಗಳು, ಇಕ್ಷ್ವಾಕು ಮಹಾರಾಯನೇ? ಮುಂತಾದ ನರನಾಥರು, ಭೂತಪ್ರೇತ, ಪಿಶಾಚಾದಿ ಡಾಕಿನೀ ಗಣಗಳು, ಯಕ್ಷರು, ರಾಕ್ಷಸರು, ಇವರುಗಳು ಗಂಧರ್ವರು, ಸಿದ್ಧರು,ವಿದ್ಯಾಧರರು, ಚಾರಣರು, ಅಪ್ಸರರು, ವಸುಗಳು, ಮರುತ್ತುಗಳು, ವಿಶ್ವದೇವತೆಗಳು, ಇನ್ನು ವಾಚಾಮ ಗೋಚರರಾದವರೆಲ್ಲರು ಬಂದು ನಿಂದು ಶತಾಯುರ್ಭವ, ಅಂದರೆ ನೂರುವರ್ಷಗಳ ಕಾಲವು ಸ್ಥಿರಾಯುವಾಗಿರು ಎಂಬವಾಗಿ ಹೇಳುವರು, ಅದೇ ಸಮಯದಲ್ಲಿ ಅನೇಕ ವಿಧವಾದ ಲೋಕನಿವಾಸಿಗಳಾಗಿರುವ ದೇವಾದಿಗಳೊಳಗೆ ಕೆಲವರು ಮೃದಂಗಾದಿ ವಾದ್ಯಗಳನ್ನು ಕೈಯಲ್ಲಿ ಹಿಡಿದುಕೊಂಡು ಧ್ವನಿಮಾಡುತಲು ಮತ್ತೆ ಕೆಲಬರು ಭೇರಿ, ಕಾಹಳೆ, ತಾಳಮುಂತಾದವುಗಳನ್ನು ಶಬ್ದಮಾಡುತ್ತಲು, ಇನ್ನು ಕೆಲವರು ವೇಣುವಾದ್ಯಮುಂತಾದವುಗಳಿಂದ ನಾಗಸ್ವರ ಮುಂತಾದ ಚಮತ್ಕಾರವಾದ ವಾದನಗಳನ್ನು ಮಾಡುತ್ತಲು, ಪಲಬರು ವಿಜಾತೀಯಗಳಾದ ವೀಣೆಮುಂತಾದವುಗಳನ್ನು ಹಿಡಿದು ಅವುಗಳ ತಂತ್ರಿಗಳಿಂದ ತರತರವಾದ ಶಬ್ದಗಳನ್ನು ನುಡಿಸುವಂಥವರಾಗಿಯು,ಇನ್ನು ಕೆಲದಿವ್ಯಾಂಗನೆಯರು ಮನೋಹರ

---

ದಿ ಕೀಟಂಗಳುಂ ಗರುಡಾದಿ ಪಕ್ಷಿಗಳುಂ, ಸಿಂಹಾದಿಮೃಗಗಳುಂ, ಇಕ್ಷ್ವಾಕುಪ್ರಮುಖ ಮನುಷ್ಯರುಂ ಭೂತಪ್ರೇತ ಪಿಶಾಚ ಯಕ್ಷರಾಕ್ಷಸಾದಿಗಳುಂ ಗಂಧರ್ವ ಸಿದ್ಧವಿದ್ಯಾಧರ ಚಾರಣ ಅಪ್ಸರೋವಸು ವಿಶ್ವೇದೇವಾದಿಗಳುಂ ಬಂದು ನಿಂದು ಶರದಾಂ ಶತಂ ಜೀವಜೀವಯೆಂದರು, ಆ ಕಾಲದೊಳ್ ನಾನಾಲೋಕವಾಸಿಗಳಾದವಾದ್ಯಾಂಗಿಕಾದಿಗಳ ಕೈಯುಲ್ಲಿರ್ಪ ಭೇರೀಭಾಂಕಾರಂಗಳಿಂ ಕಾಂಸ್ಯತಾಳಾದಿ ಕ್ರೇಂಕಾರಂಗಳಿಂ ನಾಗಸ್ವರಾದಿ ಸುಷಿರೋದಿತತಾರಧ್ವನಿಗಳಿಂದಲು ಪ್ರವೀಣಾದಿತಂತ್ರೀಸಮುದ್ಗೀತನಿಕ್ವಾಣಧ್ವನಿಗಳಿಂ ಮೃದುಮಧುರ ಗೀತಾಕರ ದೇವಾಂಗನಾಕಂಠಧ್ವನಿಗಳಿಂ ಪಾತಕಮಾನಘಾದಿಗಳ ಪಾಂಚಾಲಾದಿ ಶಬ್ದಾ

ವಾದ ಕಂಠಧ್ವನಿಗಳಿಂದ ಕಿವಿಗಿಂಪಾಗಿ ಹಾಡುವದರಿಂದಲು, ವಂದಿವೈತಾಳಿಕಾದಿ ಸ್ತುತಿಪಾಠಕರ ವಿಚಿತ್ರವಾದ ಸ್ತುತಿ ವಚನಗಳಿಂದಲುಂ, ನೃತ್ಯಭೇದಗಳಿಂದಲು, ಶಯ್ಯಾ ಭೇದಗಳಿಂದಲು, ರೀತಿಭೇದಗಳಿಂದಲು, ಶಬ್ದಚಾತುರ್ಯಗಳಿಂದಲು, ರಸಭೇದಗಳಿಂದಲು, ಅಲಂಕಾರ ವೈಚಿತ್ರ್ಯಗಳಿಂದಲು ಒಡಗೂಡಿರುವ ಶ್ಲೋಕಗಳಿಂದ ವಿವಿಧವಾಗಿ, ಸ್ತೋತ್ರಮಾಡುವದಿಂದಲು, ಭೂನಭೋಂತರಿಕ್ಷಗಳು ಸಾಕ್ಷಾತ್ ಶಬ್ದ ಬ್ರಹ್ಮಮಯವಾಗುವಂಥದ್ದಾಗುತ್ತಿರಲಾಗಿ, ಆ ಮಹಾಸಭೆಯೊಳಗೆ ಇರುತ್ತಿರುವ ಸಂದರ್ಭದೊಳು ನಿಖಿಲ ದೇವತಾಧಿಪತಿಗಳ ವಿಲೋಕನ ಪ್ರಕಾಶಾತಿಶಯದಿಂದ ಬ್ರಹ್ಮಾಂಡ ಮಂಡಲವೆಲ್ಲವೂ ಸಾಕ್ಷಾತ್ ತಾರಕಬ್ರಹ್ಮಮಯವಾಗಿ ಶೋಭಿಸುತ್ತಿರಲಾಗಿ ಆ ಅಭಿನಂದನೀಯವಾದ ಕಾಲದಲ್ಲಿ ದೃಷ್ಟಿಹೀನತೆಯೆಂಬ ಮಾಲಿನ್ಯವು ದೂರವಾಗುತ್ತಲಿರಲು ಪರಮ ಪಾರಶುದ್ಧ್ಯವನ್ನು ಹೊಂದಿ ಅರ್ಧವಿಕಾಸವನ್ನು ಹೊಂದಿರುವ ಕೆಂದಾವರೆಯ ಸಾಮ್ಯವನ್ನು ನೇತ್ರಯುಗ್ಮವು ಹೊಂದುತಿರುವ ಸಂದರ್ಭದಲ್ಲಿ ಅಖಂಡಾತ್ಮಾಭಿಮುಖವಾಗಿರುವ ಚಿತ್ತವುಳ್ಳ ಸನ್ನಿವೇಶದೊಳಗೆ ಪೂರ್ಣಿಮಾ ದೃಷ್ಟಿಯಾದ ಪೂರ್ಣಲಗ್ನವನ್ನು ನಿರೀಕ್ಷಿಸಿಕೊಂಡಿದ್ದ ಜೀವನ್ಮುಕ್ತಿಯೆಂಬ ಪ್ರೌ

ನುಬದ್ಧ ಬಿರುದಾವಳಿ ಶ್ಲೋಕಧ್ವನಿಗಳಿಂ ಭೂನಭಶ್ಚಕ್ರವಾಳವೆಲ್ಲಾ ಶಬ್ದ ಬ್ರಹ್ಮಮಯವಾಗುತ್ತಿರೆ ಸಾಮಾಜಿಕರಾದಂದಿನ ಸಕಲ ವಿಬುಧೇಶ್ವರಾದಿಗಳ ವಿಲೋಕನಪ್ರಕಾಶದಿಂ ಬ್ರಹ್ಮಾಂಡಮಂಡಲಮೆಲ್ಲಂ ತಾರಕಬ್ರಹ್ಮ ಮಯವಾಗುತ್ತಿರೆ ದೇವಾಸುರ ಗುರುಗಳಾದ ಗುರುಕವಿಗಳ ನಿರ್ಮಲದೃಷ್ಟಿಯಿಂ ಪರಿಶುದ್ಧವಾದ ನಿಮಿಷೋನ್ಮೇಷಂಗಳಿಲ್ಲದರ್ಧಾವಲೋಕನದಿಂದಂತರ್ಮುಖವಾಗಿ ಪರಮಾತ್ಮನೊಳಗೆ ಲಜ್ಜಿತವಾದ ಚಿತ್ತವುಳ್ಳ ಹುಣ್ಣಿಮೆಯುಲಗ್ನವೆಂಬ ಲಗ್ನಮಂ ನಿರೀಕ್ಷಿಸಿಕೊಂಡಿರ್ದ ಜೀವನ್ಮುಕ್ತಿ ರಮಣೀಮಣಿಯು ಸ್ವಯಂವರಮಂ ಮಾಡಿದಳಾ ನೃಪನನದೆಂತೆನೆ.

ಥಳಾದ ಲಲನಾ ಶಿರೋಮಣಿಯು ಸ್ವಯಂವರಣದಿಂದ ಮನಸ್ಸಾರ್ವಭೌಮನನ್ನು ವರಿಸುವಂಥವಳಾದಳು. ಅದರ ವಿವರವೆಂತೆಂದರೆ ?

೧೨ ಜಂಪೆ॥ ಉದಯಾದ್ರಿಯ ಶಿಖರದೊಳಗೆ ಉದಿಸಿದ ಸೂರ್ಯ ಮಂಡಲವನ್ನು ಪ್ರಭಾಮಂಡಲವು ಯಾವರೀತಿಯಿಂದ ಹೊಂದಿತೊ? ಅದರಂತೆಯು ॥೧॥ ಕಾರ್ತೀಕಮಾಸದಲ್ಲಿ ಪೂರ್ಣಿಮಾ ವಿಭಾವರಿಯೊಳು ಚಂದ್ರಶರೀರವನ್ನು ಪರಿಪೂರ್ಣವಾದ ಅಮೃತಕಳೆಯು ಯಾವ ರೀತಿಯಿಂ ಪೊಂದುವದೊ ? ಅದರಹಾಗೂ, ॥೨॥ ಪದಕವೆಂಬ ಆಭರಣದೊಳಗೆ ಕುಂದಣದಿಂದ ಕೆತ್ತಿದ ಮಾಣಿಕ್ಯವೆಂಬ ರತ್ನದ ತೇಜೋವಿಶೇಷಗಳು ಆಸ್ಥಲವನ್ನು ಬೆಳಗುವದು ಹ್ಯಾಂಗೊ ? ಅದರ ಪರಿಯಾಗಿಯೂ, ॥೩॥ ಕನಕ ಕಮಲದ ಮಧ್ಯಭಾಗವನ್ನು ಹೊಂದಿದ್ದು ಹೊರಗೆ ಹೊರಡುವದುಂಬೆಗೆ ಶೈತ್ಯಸೌರಭ್ಯ ಮೊಂದ್ಯಗಳೆಂಬ ಗುಣಗಗಳಿಂದೊಡಗೂಡಿದ ಆಕಮಲ ಸಂಬಂಧವಾದ ವಾಯುವಿನ ಸುಖಸ್ಪರ್ಶವು ಎಂತು ಸಂಬಂಧಿಸುವುದೊ ? ಅದರ ಬಗೆಯಾಗಿಯು ॥೪॥ ಅನೇಕ ದಿವಸಗಳಿಂದ ಫಲಾಪೇಕ್ಷೆಯಿಂ ಬೂರಗದ ಮರವನ್ನು ಕಾದು ಹಸಿದು ಬಸವಳದಿರುವಅಂದರೆ ಬಳಲಿಸೊಕ್ಕಿಬಿದ್ದಿರುವ ಅರಗಿಳಿಗ ದಿವ್ಯವಾಗಿ ಫಲಪರಿಣಾಮವನ್ನು ಹೊಂದಿರುವ ಗೊಂಚಲಿನಿಂದ ಶೋಭಿಸು

---

೧೨ ಮೂ॥ ಜಂಪೆ॥ ಉದಯಾಚಲಾಗ್ರದೊಳಗುದಿಸಿದಿನಮಂಡಲವ।
ಚದರದೆಕಾಂತಿಮೇಲೊದಗಿನಿಂತಂತೆ ॥೧॥
ಕಾರ್ತಿಕದರಾಕೆಯಲಿಕಲಿತರಾತ್ರಿಯೊಳಿಂದು ಮೂರ್ತಿಯಸು
ಕಥಾಲಿಯುಮುದ್ಪಾಡಿದಂತೆ ॥೨॥
ಕುಂದನದಪದಕದಲ್ಲಿಕೂಡಿಸಿದಮಾಣಿಕ್ಯಬಿಂದು ರುಚಿಯಾಸ್ಥ
ಲವಬೆಳಗುತಿರುಪಂತೆ ॥೩॥
ಪೊಂದಾವರೆಯಪೊಕ್ಕುಪೊರಳುವಳಿಮಂಡಲದಿ ಮಂದಾನಿಲಸ್ಪ
ರ್ಶಿಸುತ್ತುಮಂತೆ ॥೪॥
ಯಲವದೊಳುತಿರುತಿರುಗಿಬಳಲಿ ಬಸವಳದಶುಕಗಳಿಗೆ ಜಾಳಿಯು
ಬನದನೆಳಲೊಂದಿದಂತೆ ॥೫॥

ತಲಿರುವ ರಸಬಾಳೆಯು ನೆರಳು ಸಿಕ್ಕಿದರೆ ಎಂತೋ? ಅದರಂತೆಯು ॥೫॥ ನೀರಿಲ್ಲದಕಾಡು ಚೌಳುನೆಲದೊಳಗೆ ಬಾಯಾರಿಕೆಯಿಂದ ನೀರಿಗಾಗಿ ಅಲದುಕಂದಿ ಹೋಗಿರುವ ಮನುಜನಿಗೆ ಪಚ್ಚಕರ್ಪೂರ ಮುಂತಾದ ಸುವಾಸನಾ ದ್ರವ್ಯಗಳಿಂದೊಡಗೂಡಿದ ಪಾನೀಯದ ಪಾನವು ಲಭಿಸಿದರೆ ಹ್ಯಾಗೊ? ಹಾಗೆಯು, ॥೬॥ ಜನನ ಮರಣ ಪ್ರವಾಹ ರೂಪವಾಗಿರುವ ಸಂಸಾರವೆಂಬ ಗಹನದಲ್ಲಿ ಶಿಲುಕಿ ತನಗೆ ಪರಮ ಪ್ರೇಮಪಾತ್ರವಾಗಿರುವ ವಸ್ತುವಿನ ವಿರಹವು ಉಂಟಾದ ಸಂದರ್ಭದೊಳು ಕ್ಷೀರಸಮುದ್ರದ ಅಲೆಗಳಂತೆ ದಯಾರಸವಿಂ ದೊಡಗೂಡಿರುವ ಪರಶಿವನ ಕೃಪಾಕಟಾಕ್ಷ ಪರಂಪರೆಯು ಸಂಪೂರ್ಣವಾಗಿ, ಪ್ರಾಪ್ತವಾದಂತೆಯು. ... ... ... ॥೭॥

೧೩ ವಚನ॥ ತಾ॥ ಮತ್ತು ಪೂರ್ವೋಕ್ತವಾದ ಸೂರ್ಯಚಂದ್ರಮಂಡಲಗಳಲ್ಲಿ ಸೂಕ್ಷ್ಮವಾದ ಭೇದದಿಂದೊಡಗೂಡಿದ ಪ್ರಭಾಮಂಡಲದಂತೆ ಭೇದವನ್ನು ಸುತರಾಂ ಹೊಂದದೆ ಇರತಕ್ಕವಳಾಗಿಯೂ,ಸುವರ್ಣದ ಫಲಕವನ್ನು(ಅಂದರೆ ಹಲಿಗೆಯನ್ನು) ಹೊಳೆಯುವಂತೆ ಮಾಡುವ ದಿವ್ಯವಾದ ಮಾಣಿಕ್ಯದ ತೇಜಸ್ಸನ್ನು ವಿಶೇಷವಾಗಿ ಪ್ರಕಾಶಿಸುವಂತೆ ಮಾಡುವಂಥವಳಾಗಿಯೂ ಮಕರಂದ ಪಾನವನ್ನು ಮಾಡಿ ತೃಪ್ತಿಯನ್ನು ಹೊಂದಿದ ದುಂಬಿಗಳು ಇತರ ವನಗಳಲ್ಲಿರುವ ಪುಷ್ಪಗಳ ಮಧುರಸವನ್ನು ಕುಡಿಯುವದಕ್ಕೋಸ್ಕರ ಹೋಗುತಿರುವ ಸ

ಮರುಭೂಮಿಯಲಿನೊಂದಮಾನವಗೆ ಕರ್ಪೂರಪರಿಮಳದಪನ್ನೀರಪಾನಮಾದಂತೆ ॥೬॥

ಇಷ್ಟವಿರಹಾಗ್ನಿಯಿಂ ಕಷ್ಟಪಟ್ಟವಗೆ ಸಿಪಿವಿಷ್ಟನದಯಾಪೂರ್ವದೃಷ್ಟಿಬಿದ್ದಂತೆ ॥೭॥

೧೩ ಮೂ॥ ವಚನ॥ ಮತ್ತಮಿಾ ಸೂರ್ಯಚಂದ್ರದೊಳೆಸೆವ ಕಾಂತಿಯಂತೆಭೇದ ಸಂಬಂಧಿನಿಯಾಗಿಯುಂ, ಸುವರ್ಣದಳ ಮನುದ್ದೀಪನಕ್ಕೆ ತಂದ ಮಾಣಿಕ್ಯಕಾಂತಿಯಾಂತು ದೀಪಿತೆಯಾಗಿಯುಂ ಮಧುಪಾನತೃಪ್ತಿಯಿಂ ಕಮಲದತ್ತಣಿಂದುಳಿದ ವನದ

ಮಯದಲ್ಲಿ ಪದೆಪದೆ ತನ್ಮ್ಮೆಮೇಲೆ ಬೀಸುವದರಿಂದ ಸಂಸಕ್ತವಾಗಿರುವ ಕಮಲಗಂಧದಿಂ ಮಕರಂದದ ಸ್ಥಿತಿಯನ್ನು ಸೂಚಿಸುವ ಮಲಯ ಪರ್ವತ ಸಂಬಂಧಿಯಾದ ಮಂದಪವನದ ಗಮನದಂತೆ ಸ್ಥಿರ ಪ್ರಜ್ಞೆಯನ್ನು ಕೊಡತಕ್ಕವಳಾಗಿಯು,ಗುಂಪಾಗಿ ಬೆಳದಿರುವ ಬೂರಗದ ಮರವನ್ನು ಕಾದುಸೊಕ್ಕಿರುವ ಗಿಳಿಗಳಿಗೆ ಫಲಪ್ರದಾನದಿಂದ ಸುಖವನ್ನುಂಟುಮಾಡುವಂತೆ ಪರಮ ಸುಖವನ್ನುಂಟು ಮಾಡತಕ್ಕವಳಾಗಿಯು, ಮರುಭೂಮಿಯಲ್ಲಿ ಬಾಯಾರಿಕೆಯಿಂದ ಬಳಲಿ ಕಂಗೆಟ್ಟಿರುವವನಿಗೆ ಸುಗಂಧಶೀತಲ ಪಾನೀಯ ಪಾನದಂತೆ ಪರಮ ವಿಶ್ರಾಂತಿಸುಖವನ್ನು ಕೊಡುವಂಥವಳಾಗಿಯು ಸಂಸಾರದೊಳು ಇಷ್ಟವಸ್ತುವಿಯೋಗದಿಂದ ಪೀಡಿತನಾದಮನುಜನಿಗೆ ಅಕುಂಠಿತ ಶಕ್ತಿಯಾಗಿರುವ ಪರಶಿವನ ದಯಾರಸತರಂಗಿತವಾದ ಕಟಾಕ್ಷ ಪರಂಪರೆಯಂತೆ ಅಸದೃಶ ಶಕ್ತಿಯುಕ್ತಳಾಗಿಯೂ, ಜೀವನ್ಮುಕ್ತಿ ಯೆಂಬ ಸೀಮಂತಿನೀ ಮಣಿಯು ಅಸಮಾನಳಾಗಿ ವಿರಾಜಿಸುತಲಿರಲಾಗಿ ವಿಚಾರನೆಂಬ ಸಚಿವ ಶಿರೋಮಣಿಯು ಬಂದಂಥವನಾಗಿ ಮನಸ್ಸಾರ್ವಭೌಮನಿಗೆ ಇಷ್ಟವಾದ ಮನೋರಥವು ಸಂಪೂರ್ಣವಾಗಿ ಫಲಿಸುವಂ

ಕುಸುಮಾಸವಾಸಕ್ತಿಯಿಂ ಸಂಚಾರೋತ್ಸುಕವಾದ ಭ್ರಮರಂಗಳಿಗೆ ಪುನಃ ಪುನರಾತ್ಮ ಪ್ರಕಂಪನೋದ್ಬುದ್ಧ ಕಮಲ ಗಂಧದಿಂ ಸ್ಥಿತಿಯಂಸಂಪಾದಿಸುವ ಮಲಯಾನಿಲಗತಿಯಂತೆ ಸ್ಥಿರಪ್ರಜ್ಞಾ ಪ್ರದೆಯಾಗಿಯುಂ ಕೂಟಶಾಲ್ಮಲಿ ಮರುಪ್ರದೇಶ ಸಂಚಾರಶ್ರಾಂತರಾದ ಶುಕಮಾನವರ್ಕಳ ತಾಪನಿವಾರಣವಾದ ಫಲಿತ ರಂಭಾಫಲ ಕರ್ಪೂರಶೀತಲ ವಾರಿಪಾನದಂತೆ ಪರಮವಿಶ್ರಾಂತಿ ಪ್ರದಳಾಗಿಯುಂ, ಭವಾರ್ತಂಗೆ ಸರ್ವಜ್ಞನಾದ ಅಲುಪ್ತಶಕ್ತಿಯಾದ ಶಿವಕಾರುಣ್ಯ ದೃಷ್ಟಿಯಂತೆ ಅಮೋಘಶಕ್ತಿಯಾಗಿಯುಂ, ಜೀವನ್ಮುಕ್ತಿದೇವಿ ಮೆರೆಯುಲಾ ಸವಿಚಾರಸಚಿವಂಬಂದು ಮನೋನೃಪಗಿಷ್ಟಪ್ರಾಪ್ತಿಯಾದುದು ಅರಿಷ್ಟನಿವಾರಣಂ ಮಾಡಬೇಕೆಂದೂ.

ಘಾದ್ದಾಯಿತು. ಇನ್ನು ವ್ಯಥೆಯಿಲ್ಲದಂತೆ ಮಾಡಬೇಕೆಂಬದಾಗಿ, ಯೋಚನೆಯನ್ನು ಮಾಡಿ. ... ... *

೧೪ ಸಾಂಗತ್ಯ ॥ ತಾ॥ ಮೂಲಾಧಾರ ಚಕ್ರವೆಂಬ ಮಹಾಪಟ್ಟಣದಲ್ಲಿರುವನ ಎಂಬವರ್ಣವೇ ದೇಹವಾಗಿರುವದಾಗಿರುವ ಸಾಧುಲಿಂಗದ ಈಶಾನಾದಿಮುಖಗಳೊಳಗೆ ಸದ್ಯೋಜಾತವೆಂಬ ಮುಖದಿಂ ಅಮೋಘವಾದ ಸಮಾಧಾನವಂಪಡೆದು॥ ಇರುವ ಪರಮ ಸಹಜವೀರವೆಂಬ ಮಹಾಯೋಗಕ್ಕೆ ಅತಿಶಯವಾದ ಆನಂದವನ್ನುಂಟುಮಾಡುವ ಬಂಧುವೃತ್ತಿಯನ್ನು ಆಶ್ರಯಿಸಿರುವ ಮಹನೀಯರನ್ನು ಅಸದೃಶವಾದ ಜೀವನ್ಮುಕ್ತಿ ಕಾಂತೆಯ ಕಲ್ಯಾಣಕ್ಕೆ ಅವಶ್ಯಕವಾಗಿ ಕರೆದುಕೊಂಡು ಬರಬೇಕೆಂದರೆ? ಗಂಧವೆಂಬ ಯೋಗ್ಯನಾದ ಪರಿಚಾರಕನನ್ನು ವಿಚಾರನೆಂಬ ಪುರೋಹಿತನು ಪೂರ್ವೋಕ್ತವಾದ ಆಧಾರ ಚಕ್ರವೆಂಬ ಪುರದ ಮಧ್ಯಭಾಗದೊಳು ಅಧಃಕುಂಡಲಿನಿಯು ಶಕ್ತಿಯು ಬಂಧುತ್ವವಿರುವದರಿಂದ ಹಿಂದೆ ಹೇಳಿದ ಗಂಧನೆಂಬ ಅನುಚರನಸಂಗಡ ತನ್ನ ಆವಾಸದ ಆಶೆಯನ್ನು ಬಿಟ್ಟು ಬರುವವಳಾದಳು ॥೩॥ ತರುವಾಯ ಸ್ವಾಧಿಷ್ಠಾನವೆಂಬ ಚಕ್ರದಲ್ಲಿರುವ ಮಕಾರವೇ ಶರೀರವಾಗಿ ಇರುವ ಶ್ಲಾಘನೀಯವಾಗಿ ಸಂಪತ್ತಿನಿಂದ ಯುಕ್ತವಾದ ವಾಮದೇವವೆಂಬಮು

---

೧೪ ಮೂ॥ ಸಾಂಗತ್ಯ॥ ಆಧಾರಚಕ್ರಪುರದನಕಾರಾತ್ಮಕವಾದ ಸ
ದ್ಯೋಜಾತಮುಖದಾ । ಸಾಧುಲಿಂಗಾನುಮತಿಯುಪಡೆದೀಶಾನಾ
ದಿಚತುರ್ದಳಗಳಲ್ಲಿ ॥೧॥
ಇರುತಿಹಪರಮಸಹಜವೀರಯೋಗಾಖ್ಯಪರಮಾನಂದಬಂಧು
ಗಳಾಕರಕೊಂಡು ಬಹುದು ಜೀವನ್ಮುಕ್ತಿಕಲ್ಯಾಣವರಮಂಟಪ
ಕ್ಕೆಂದಟ್ಟಿದನೂ ॥೨॥
ಗಂಧಾನುಚರನವಿಚಾರನಮಧ್ಯದಹೊಂದಿರ್ದ ಕುಂಡಲೀಶಕ್ತಿ।
ಬಂಧುತೆಯಿಂ ಬಂದಳವ ನೊಡಲಾಗಲೆ ಮುಂದಿರದಾಶೆಯ ತೊ
ರದೂ ॥೩॥
ಸ್ವಾಧಿಷ್ಠಾನದ ಚಕ್ರಪುರದ ಮಕರಾಂಗವಾದಶ್ರೀ ವಾಮದೇ

ಖವುಂಟಾಗಿರುವ ಸಾಧುಲಿಂಗದ ಅನುಜ್ಞೆಯನ್ನು ಪಡೆದಂಥವನಾಗಿ ಪ್ರಶ್ರಯ ಅಂದರೆ ವಿನೀತಿಯೆಂಬುವನನ್ನು ಹಿತಕರವಾದ ವಚನಜಾತಗಳಿಂದ ಕರೆತಂದು ಉಳಿದವರನ್ನು ॥೪॥ ಅಂದರೆ ಕ್ರೌರ್ಯವೆಂಬುವನನ್ನು, ನಾಶನವೆಂಬುವನನ್ನು, ಇನ್ನು ಮೂರ್ಖ, ಅವಜ್ಞಾ, ಎಂಬ ಅಂಗನೆಯರನ್ನು, ಅವಿಶ್ವಾಸವೆಂಬುವನನ್ನು, ಆರುಮನೆಗಳಿಂದ ಸತ್ವಗುಣವೆಂಬ ಯೋಗ್ಯನನ್ನು ಬಂಧನಾಲಯದೊಳಗೆ ಎಚ್ಚರಿಕೆಯಿಂದ ಕಾವಲಿರಿಸಿ ಜಾಗ್ರತೆಯಾಗಿ ಬರಬೇಕು. ॥೫॥

ಈ ಸಮಯದೊಳು ಈ ಪ್ರಕಾರವಾಗಿ ರಸಾನುಗಾಮಿಯೆಂಬ ಊಳಿಗದವನನ್ನು ಅಂದರೆ ಸೇವಕನನ್ನು ಕರೆತರಲು ತ್ವರಿತದಿಂ ಕಳುಹಿಸುವಂಥವನಾದನು. ಆ ತರುವಾಯ ಸ್ವಾಧಿಷ್ಠಾನವೆಂಬ ಚಕ್ರಕ್ಕಿಂತಲೂ ಊರ್ಧ್ವಭಾಗದೊಳಿರುವ ಮಣಿಪೂರಕ ಚಕ್ರವೆಂಬ ನಗರ ಮಧ್ಯಭಾಗದೊಳು ವಿರಾಜಮಾನವಾದ ಶಿ, ಎಂಬ ಅಮೃತವರ್ಣವನ್ನು ಕರೆವ ಕರ್ಣಿಕಾಕ್ಷರವೇ ಅಂದರೆ ಮಧ್ಯವರ್ಣವೇ ॥೬॥ ಶರೀರವಾಗಿ ಹೊಳೆಯುತಲಿರುವ ಸಾಧುಲಿಂಗದ ಅಘೋರವೆಂಬುವ ಮುಖದ ಸ್ನೇಹಭಾವದಿಂದ ಹತ್ತು ವಿಧವಾಗಿರುವ ದಳಗಳನ್ನಾಗಿ ವಿಂಗಡಿಸಿಕೊಂಡು ಇರು

---

ವಾಸ್ಯಾ । ಸಾಧುಲಿಂಗಾನುಜ್ಞೆಯಿಂ ಪ್ರಶ್ರಯನ ಪ್ರಿಯವಾದ ದಿಂಕೊಂಡಿತರರಾ ॥೪॥

ಕ್ರೂರತೆಯನು ನಾಶನನು ಮೂರ್ಖಾವಜ್ಞಾನಾರಿಯರ ವಿಶ್ವಾಸನನೂ । ಆರುಮನೆಗಳಿಂದಾ ಸತ್ವಗುಣನ ಕಾರಾಗಾರ ದೊಳಿಟ್ಟು ಬರುವುದೂ ॥೫॥

ಈಗಲಿಂತೆಂದು ರಸಾನುಗಾಮಿನಿಯನು ಬೇಸಗಿ ಕಳುಹಿದನು ಬಕಾ ॥ ಮೇಗೆ ಮಣಿಪೂರಕ ಚಕ್ರಪುರ ಮಧ್ಯಭಾಗದೊಳಿರುವ ಶಿಕಾರಾ ॥೬॥

ದೇಹವಾಗೆಸವಘೋರಾರನಲಿಂಗದ ಸ್ನೇಹದಿಂ ದಶಪಲಾಶಗಳಾ । ಗೇಹವಂ ಮಾಡಿಕೊಂಡಿಹ ಸುಷುಪ್ತಿ ಪ್ರೇಷ್ಯವೋಹ ಕಷಾಯ ವಿಷಾದಾ ॥೭॥

ವ ಅಸದೃಶವಾದ ಮನೆಯೊಳಗೆ ವಾಸಮಾಡುತಲಿರುವ ಗಾಢನಿದ್ರೆ ಯೆಂಬುವದನ್ನು ನಿಶ್ಚಲವಾದ ಮನೋವೃತ್ತಿಯ ಮೂಲಕ ಪ್ರೋಹಪಡಿಸಿ ಕೆಡಿಸುವ ಕಷಾಯುವೆಂಬುವದನ್ನು ಮತ್ತು ದುಃಖವೆಂಬುವದನ್ನು ॥೭॥ ಇನ್ನು ಅಂಜಿಕೆಯೆಂಬುವದನ್ನು, ಜಡತನ ಇಲ್ಲವೇ ದುರಾಶೆ ಅಥವಾ ಲೋಭಿತ್ವವೆಂಬುವದನ್ನು ಅತ್ಯಾಶೆಯನ್ನು ಒಡನೆಯೆ ಬಂದೀಖಾನೆಯಲ್ಲಿರುವಂಥವುಗಳನ್ನಾಗಿ ಮಾಡಿ ಅನಂತರದಲ್ಲಿ ವಿಜಯಧರ್ಮವನ್ನು ಆನಂದವೆಂಬುವದನ್ನು, ವಿವೇಕ ವೆಂಬುವದನ್ನು, ನಿಶ್ಚಯವೆಂಬುವದನ್ನು, ಸಂತೋಷವೆಂಬುವದನ್ನು, ಬುದ್ಧಿಯೆಂಬುವದನ್ನು ಇವುಗಳಲ್ಲದೆ. ॥೮॥ ಅಂತರಿಂದ್ರಿಯ ನಿಗ್ರಹತ್ವವೆಂಬುವದನ್ನು ಹಾಗೆ ಬಹಿರಿಂದ್ರಿಯ ನಿಗ್ರಹತ್ವವೆಂಬುವದನ್ನು, ನಾಚಿಕೆ ಕರುಣ, ಎಂಬ ನಾಮವುಳ್ಳ ಅಂಗನೆಯರೊಡನೆ ಕರದುಕೊಂಡು ಬರತಕ್ಕದ್ದು. ಎಂಬದಾಗಿ ಹುಸಿನಗು ಅಂದರೆ ಮುಗುಳ್ನಗೆಯಿಂದ ಕೂಡಿರುವ ರೂಪನೆಂಬ ಅನುಚರನನ್ನು, ಅಂತಃಕರಣಕ್ಕೆ ಸಂತೋಷವು ಉಂಟಾಗುವಂತೆ ಕಳುಹಿಸುವಂಥವನಾದನು. ॥೯॥ ಆ ಹಿಂದೆ ಹನ್ನೆರಡು ಎಸಳುಗಳುಳ್ಳ ಅನಾಹತವೆಂಬ ಚಕ್ರದ ಮಧ್ಯಭಾಗವೆಂಬ ಮನೆಯಲ್ಲಿರುವ ಚಾಪಲ್ಯವೆಂಬುವನನ್ನು, ಕಪಟನೆಂಬುವನನ್ನು ಇವರ ಸಂಗಡ ವಿಶೇಷವಾಗಿ ಸ್ನೇಹವನ್ನು ಬೆಳಸಿರುವ ಚಿಂತೆಯೆಂಬವಳನ್ನು,

---

ಭಯಪಿಶುನತ್ವ ತೃಷ್ಣೆಗಳಿಗೆ ಕಾರಾಶ್ರಯುವ ನೀನೀಗುಂಟು
ಮಾಡೀ । ಜಯಶೀಲಬೋಧವಿಖ್ಯಾತವಿವೇಕನಿಶ್ಚಯಹರ್ಷ
ಮತಿಗಳಿಂಮತ್ತೆ ॥೮॥
ದಮಸಂತೋಷಗಳಿಂಲಜ್ಜಾಘ್ರಾಣನಾಮಕರ ಮಣಿಯರನುಕ
ರತಹುದು । ಸುಮುಖನಾಗಂದುರೂಪಾನುಗನನುಭಾವಪ್ರಮು
ದವೊತ್ತರಿಪಲಟ್ಟಿದನೂ ॥೯॥
ಬಳಿಕದ್ವಾದಶದಳಮುಳ್ಳನಾಹತ ಚಕ್ರನಿಲಯಾದಲೌಲ್ಯಕಪ
ಟರಾ । ಬಳಿಸಂದಚಿತಾನ್ಮನುತಾಪಪ್ಪೈ ಕಲ್ಯರಬಿಲನಾಡಶಾಪ್ರಕಾ
ಶಕನಾ ॥೧೦॥

ಸಂತಾಪವೆಂಬಾತನನ್ನು, ವಿಕಲ್ಪನೆಂಬುವನನ್ನು, ಒಲಿಕಾಹಿತ್ಯವೆಂಬ ಅವಸ್ಥೆಯನ್ನು ಪ್ರಕಾಶಪಡಿಸುವವನನ್ನು. ॥೧೦॥ ಇವರುಗಳಲ್ಲದೆ ಡಂಭವೆಂಬುವನನ್ನು ವಿಶೇಷವಾಗಿ ನಾಶವಾಗುವವನನ್ನು, ಅಹಂಕಾರವೆಂಬುವನನ್ನು, ಆಶೆಯೆಂಬುವನನ್ನು, ಯಾಚನೆಯೆಂಬುವನನ್ನು, ಇವರುಗಳನ್ನು ಕ್ರಮದಿಂದ ಅವರವರು ಇರುವ ಸ್ಥಳವನ್ನುಬಿಟ್ಟು ಹೋಗದಂತೆ ನಿಲ್ಲಿಸಿ ಅತ್ಯಂತಪ್ರಕಾಶವಾನವಾದ ಧೈರ್ಯದಿಂದಲೂ, ಪ್ರೀತಿಯಿಂದಲೂ, ಸಂತೋಷದಿಂದಲೂ, ಅಪರಿಮಿತವಾದ ವಿಶ್ವಾಸವುಳ್ಳ ತೃಪ್ತಿಯಿಂದಲು, ॥೧೧॥ ಗಂಭೀರಭಾವದಿಂದಲು, ಯೋಗಬಲದಿಂದಲು, ಶಾಸ್ತ್ರಬಲದಿಂದಲು, ಜ್ಞಾನಬಲದಿಂದಲು, ಸಂತೃಪ್ತಿಯಿಂದಲೂ, ಭೀತಿಯನ್ನು ನಿವಾರಣಮಾಡುವ ಕರ್ಣಿಕಾ ಬೀಜವಾಗಿರುವ ವಾಕ್ಕಾರವೇ ದೇಹವಾಗಿರುವ ಸಾಧುಲಿಂಗದ ತತ್ಪುರುಷವೆಂಬ ಮುಖದ ಅನುಮತಿಯಂ ಪಡೆದು ಆಸ್ಥಾನದಲ್ಲಿ. ॥೧೨॥ ಕರೆದುಕೊಂಡು ಬರುವ ವಿವೇಕವೆಂಬುವನನ್ನು, ವಿತರ್ಕವೆಂಬುವನನ್ನು ಜಾಗ್ರತೆಯಿಂದ ಈಗಲೇ ಬರಬೇಕೆಂಬದಾಗಿ ಸುಖವನ್ನುಂಟುಮಾಡುವ ಸ್ಪರ್ಶವೆಂಬುವ ಅನುಚರನನ್ನು ಕಳುಹಿಸಿದವನಾದನು. ॥೧೩॥ ಇಂದ್ರ, ಅಗ್ನಿ, ಮೊದಲಾದ ದಿಕ್ಕುಗಳಲ್ಲಿಯು, ಇನ್ನು ಇವುಗಳ ವಿದಿಕ್ಕುಗಳ

---

ಡಂಬಪ್ರಣಾಶಾಹಂ ಕೃತಿತೃಷಾ ಣ್ಣರ್ಥೀಶೆಯರಂ ಸ್ತಂಬಿಸಿಪರಿ
ಪಾಟಿಯಿಂದಾ।ಜೃಂಭಿತಧೈರ್ಯ ವಿಶ್ವಾಸಮೋದಗಳಿಂ ವಿಸ್ರಂಭಿ
ಸುವೀರ್ಯತೃಪಿ ಟ್ಟಗಳಿಂ ॥೧೧॥

ಗಾಂಭೀರ್ಯಯೋಗಶಾಸ್ತ್ರಜ್ಞಾನ ತೃಪ್ತಿಗಳಿಂಭಯಹಾರವಕರಾ।
ಮುಂಭಾವಮಾಗಿತಾಳಿದ ಸತ್ಪುರುಷಲಿಂಗ ಸಂಭಾವನೆಯುಪ
ಡದಲ್ಲೀ ॥೧೨॥

ಕರಕೊಂಡುಬಹುದು ವಿವೇಕ ವಿತರ್ಕರ ಭರದಿಂದೀಗೆಂದುಸು
ಸ್ಪರ್ಶ। ಚರನಕಳುಹಿದನು ವಿಮಲವಿಶುದ್ಧಿಯ ಸರಸಿಜಚ
ಕ್ರಪುರದಲೀ ॥೧೩॥

ಲ್ಲಿಯು, ಹದಿನಾರು ಬಗೆಗಳಾಗಿರುವ ದಳಗಳೆಂಬ ಆ ವಾಸದಲ್ಲಿ ನಿಬಿಡವಾದ ವಿಶ್ವಾಸದಿಂದ ಉಚ್ಚಸ್ವರದಿಂದ ಉಚ್ಚರಿಸಲ್ಪಟ್ಟ ಪ್ರಣವವೇ ಆದಿಯಾಗಿ ಕಡೆಯಲ್ಲಿ ಸಂಗತವಾಗಿರುತ್ತ ನಮಃಶಬ್ದಗಳನ್ನು. ||೧೪|| ಹೊಂದಿ ಕ್ರಮವಾಗಿ ಹುಂಕಾರವು, ಷಟ್ಕಾರವು, ವಷಟ್ಕಾರವು, ಔಷಟ್ಕಾರವು, ಸ್ವಾಹಾಕಾರವು, ಸ್ವಧಾಕಾರವು, ಎಂಬ ಉತ್ತಮವಾದ ಮಂತ್ರಗಳ ಆರುದಳಗಳಿಂದ ಹೊಳೆಯುತಲಿರುವ ಮೂರ್ತಿಗಳನ್ನು, ಅಮೃತಮಯವಾಗಿರುವ, ಸರಿ, ಗಮ, ಪದ, ಎಂಬ ಸಪ್ತಸ್ವರಗಳನ್ನು, ಸಾವಕಾಶವನ್ನು ಮಾಡದೆ ಕರೆತರತಕ್ಕದ್ದು. ||೧೫|| ಎಂದು ವಿಶುದ್ಧಚಕ್ರದ ಮಧ್ಯಭಾಗದೊಳಗೆ ವಿಷವನ್ನು ಚಂದ್ರನನ್ನು ಧಾರಣಮಾಡಿಕೊಂಡು ರಮಣೀಯವಾಗಿರುವ ಯಕಾರ ಪ್ರಣವದೇಹವನ್ನು ಧರಿಸಿರುವ ಸಾಧುಲಿಂಗದ ಈಶಾನವೆಂಬ ಮುಖದ ಸಮಾಧಾನದಿಂದ ಉತ್ತಮವಾಗಿರುವ ಶಬ್ದವೆಂಬುವ ಸೇವಕನನ್ನು, ||೧೬|| ಪ್ರೀತಿಯಿಂದ ಕಳುಹಿಸುವಾಥವನಾದನು. ಆ ತರುವಾಯ ಚಿನ್ಮಯವಾಗಿರುವ ನೇತ್ರಸ್ಥಾನದೊಳಗೆ ಲಲನಾಚಕ್ರವೆಂಬ ನಗರ

---

ಇಂದ್ರಾದಿದಿಗ್ವಿದಿಕ್ಕುಗಳಲ್ಲಿಹದಿನಾರುಚೆಂದದೆಲೆಯಮನೆಗಳಲಿ।
ಸಾಂದ್ರಪ್ರೀತಿಯೊಳುದ್ಗೀಥಪ್ರಣವಂ ಕೊನೆಯೊಂದಿರುವನಮಶ್ಶಬ್ದಗಳಾ||೧೪||

ತಾಳಿದಹುಂಷಡ್ವೌಷಡ್ವಷಟ್ಸ್ವಾಹಾಸ್ವಧಾಲಸಚ್ಛಬ್ದಮೂರ್ತಿಗಳಾ। ಮೇಲಮೃತವಸರಿಗಮಪದನಿಗಳ ಸಂಭಾಳಿಸದೆ
ಕರೆತಹುದೂ ||೧೫||

ಅಲ್ಲಿಯಕಡೆಯ ವಿಷವಚಂದ್ರನಿಂ ಮೆಣ್ಮೆಸಲ್ಲಲಿತ ಯಕಾರಪನೂ। ನಿಲ್ಲದೆತಾಳ್ದೀಶಾನಲಿಂಗದ ಬಲದೇಳ್ದೊಂದು ಶಬ್ದಾಗ್ರೇಸರನಾ ||೧೬||

ಕಳುಹಿದನಾಗ ಸಂಪ್ರೀತಿಯಿಂದಾಮೇಲೆಲಲನಾಚಕ್ರದಪುರದೊಳಗೇ।ನೆಲಸಿರ್ಪಪೂರ್ವಾದಿಗಳಗೃಹಸ್ಥರನುಕರೆಯಲು ಮನೋನ್ಮನಿಯನಟ್ಟಿದನೂ ||೧೭||

ದೊಳಗೆ ಚತುರಶ್ರವಾಗಿರುವ ಪೂರ್ವಮೊದಲಾದ ದಿಕ್ಕುಗಳಲ್ಲಿ ಇರುತಿರುವ ಎಸಳುಗಳೇ ಆಶ್ರಯುವಾಗಿರುವ ಬಂಧುಗಳನ್ನು ಕರೆತರಲು ಉನ್ಮನೀಭಾವವೆಂಬ ಭಂಟನನ್ನು ಕಳುಹಿಸಿದನು. ॥ ಆಮೇಲೆ ವ್ಯಾಸವಾದ ಅಂದರೆ ವಿಂಗಡವಾದ ಆಕಾರಪ್ರಣವದಲ್ಲಿ ಅಭಿನವದಿಂದುಟಾಗಿರುವ ಭವ, ಎಂಬ ನಾಮವುಳ್ಳ, ಲಿಂಗದ ಕೃಪೆಯುನ್ನು ಸಂಪಾದಿಸಿಕೊಂಡು ನೀನು ಮದವೆಂಬುವನನ್ನು, ಅಭಿಮಾನವೆಂಬುವನನ್ನು ವಿಶೇಷವಾಗಿ ವಿಷಯು ವಿಶ್ವಾಸದುಃಖವೆಂಬುವರಗಳನ್ನು ಭೇದಮಾಡುವನನ್ನು, ತೊಂದರೆ ಪಡಿಸುವವನನ್ನು ಇನ್ನು, ಅನಾಸಕ್ತಿ, ಜಾಗರೂಕತೆಯೆಂಬುವರುಗಳನ್ನು. ॥೧೪॥ ಮತ್ತು ಕೋಪವೆಂಬುವನನ್ನು ಅಪರಾಧಮಾಡುವವರನ್ನು ಕಾದುಕೊಂಡಿರುವಂತೆ ಸಾಧುವೃತ್ತಿಯನ್ನು ನಿಯಮಿಸಿ ಆ ತರುವಾಯ ಪ್ರಮೋದದಿಂದ ಚಾತುರ್ಯವಾಗಿ ಮಾಡುವವನನ್ನು ಭಕ್ತಿಯೆಂಬುವನೊಡನೆ ನೀನೇ ಜಾಗ್ರತೆಯಿಂದ ಬರಬೇಕೆಂಬದಾಗಿ ವಿಚಾರಸಚಿವ ಶಿರೋಮಣಿಯು ಹೇಳುವಂಥವನಾದನು. ॥೧೫॥ ತದನಂತರದಲ್ಲಿ ಆಜ್ಞಾಚಕ್ರವೆಂಬ ನಗರದ ಮಧ್ಯಭಾಗದೊಳಗೆ ಪ್ರಣವದಿಂದ ಆವೃತವಾಗಿ ಮಕಾರವೆಂಬ ದೇಹವುಳ್ಳ ದಿವ್ಯಲಿಂಗವನ್ನು ಶ್ರಮೆಯನ್ನು ಹೊಂದದೆ ಸೇವೆಯನ್ನುಮಾಡದೆ ದಕ್ಷಿಣೋತ್ತರ ಭಾಗಗಳಲ್ಲಿರುವ ಎಸಳುಗಳೆಂಬ ಆವಾಸದಲ್ಲಿ ಕ್ರಮದಿಂದ ॥೨೦॥

---

ಆತ್ಮಾಭಿಮಾನಿಭವಾಜ್ಯಲಿಂಗದ ಕೃಪೆವೆತ್ತುನೀಂಮದಮಾನರುಗಳಾ। ಸತ್ವದಿಂಸ್ನೇಹಶೋಕರಭೇದಸ್ಖಲಿತರ ಮತ್ತಮರತಿಸಂಭ್ರಮರನೂ ॥೧೪॥

ದೋಷಪರಾಧೀನತೆಯರಮೇಲೆಕಾವಲಿಟ್ಟು ಸಾಧುವೃತ್ತಿಯಬಳಿಕಾ । ತೋಷಾದಿಚಾಟುಶ್ರದ್ಧೆಯರೊಡಗೊಂಡು ನೀನೇಸಾಕೆಂದಾಸಚಿವೇಂದ್ರಾ ॥೧೫॥

ಆಯುಜ್ಞಾಚಕ್ರಪುರದ ಮಧ್ಯದೊಳು ಕಾರಕಾಯಮೃಡಾಖ್ಯಲಿಂಗವನೂ ॥ ನೋಯದೆಭಜಿಸಿಯುತ್ತರದಕ್ಷಿಣ ಚ್ಛಂದದಾಯಾಸದರಿಕ್ರಮದಲ್ಲಿ ॥೨೦॥

ಜನನಮರಣ ಪರಂಪರೆಯನ್ನು ಹೊಂದುತ್ತಿರುವ ಸತ್ವಾದಿ ಗುಣತ್ರಯವನ್ನು ತಾರೆಯೆಂಬುವನನ್ನು ಕಳುಹಿಸಿ ನಯನದ ಕರಿಗುಡ್ಡಗಳಲ್ಲಿಯೇ ನಿಲ್ಲಿಸಿ ಮನಸ್ಸೆಂಬ ಚಕ್ರಾಕಾರವಾದ ಪಟ್ಟಣದೊಳಗೆ ಇರುತಿರುವ ಸ್ವಪ್ನವೆಂಬುವನನ್ನು ತಿಳುವಳಿಕೆಯೆಂಬುವನನ್ನು, ಪಂಚಭೂತಗಳನ್ನು, ‖೧‖ ಹಾಗೆಯೇ ಅರಿವು ಎಂಬುವನನ್ನು ವಾಸನಾರಾಹಿತ್ಯದಿಂದ ವೇಷ್ಟಿತವಾದ ಪ್ರಣವವೆಂಬ ಮಕಾರಸ್ವರೂಪವಾಗಿರುವ ಬಿಂದುವೇ ಮುಂತಾದವರುಗಳಿಗೆ ಅಧೀಶ್ವರನಾಗಿ ಶುದ್ಧಸತ್ವವನ್ನಳವಟ್ಟಿರುವ ಲಿಂಗದ ದಯೆಯುಂ ಪಡೆದು ಪೂರ್ವದಲ್ಲಿ ಉದಹರಿಸಿದವರನ್ನು ನೀನು ಅಲ್ಲಿ ಇರುವಂತೆ ಮಾಡತಕ್ಕದ್ದೆಂಬದಾಗಿ ಆ ಕಾಲದಲ್ಲಿ ಹೇಳಿ ಕಳುಹಿಸಿದನು. ‖೨‖ ಆ ಬಳಿಕ ಮೂಡಲು ದಿಕ್ಕಿನಲ್ಲಿರುವ ದಳವನ್ನು ಮೊದಲುಮಾಡಿಕೊಂಡು ಹದಿನಾರು ಎಸಳುಗಳುಳ್ಳ ಚಂದ್ರಮಂಡಲ ಚಕ್ರದ ನಡುಭಾಗದಲ್ಲಿ ಇರುವ ಸಮಷ್ಟಿ ಪ್ರಣವದೊಳಗೆ ಸೋಮಶೇಖರ ಮೂರ್ತಿಯೆಂಬ ದಿವ್ಯತೇಜಃ ಪುಂಜವಾದ ಲಿಂಗವಿರುವದು. ‖೩‖ ಆ ಲಿಂಗದ ಅನುಗ್ರಹವನ್ನು ಪಡೆದು ಆ ಚ

---

ಜನಿಮೃತಿಗಳ ತಾಳುತಿಹಗುಣಗಳತಾರೆಯನುಕಳುಹಿಸಿ ಯಲ್ಲೆ
ನಿಲಿಸೀ । ಮನದಚಕ್ರದಪುರದೊಳಗಿಹ ಸ್ವಪ್ನಭೇದನ ಪಂಚ
ಭೂತಗಣಗಳಾ ‖೧‖
ಬೋಧರ ನಿರ್ವಾಸನೆಯ ನೀನೀಬೈಧವಾಧಿದೈವತವಾದ ಹರ
ನಾ । ಸಾಧುಲಿಂಕೆದಕೃಪೆವೆತ್ತುತುಳಿಪುದೆಂದು ಬೋಧಿಸಿಕಳು
ಹಿದನಾಗಾ ‖೨‖
ಆಮೇಲೆಪೂರ್ವಾದಿದಳ ಷೋಡಶಗಳಿಂದಸೋಮಚಕ್ರವು ರಾ
ಜಿಸುವದೂ । ಆಮಧ್ಯವರ್ತಿಸಮಷ್ಟಿಪ್ರಣವದಲ್ಲಿ ಸೋಮಶೇ
ಖರಲಿಂಗವಿಹುದು ‖೩‖
ಅದರಕೃಪಾಬಲವನು ಪಡೆದಲ್ಲಿಹ ವಿದುರರಿಗೆಮ್ಮಬಂಧುಗಳೂ ।
ಮುದದಿಂದ ನೀನವರನುಕೊಂಡು ಬಂದರಾದುದು ಜೀವನ್ಮು
ಕ್ತಿಕಲ್ಯಾಣಾ ‖೪‖

ಕ್ರದಲ್ಲಿಯೇ ಇದ್ದುಕೊಂಡು ತಿಳಿಯುವಂಥವರು ಯಾರೋ? ಅವರೆ ನಮ್ಮ ಬಂಧುಗಳು ಆದ್ದರಿಂದ ನೀನು ಸಂತೋಷದಿಂದ ಅವರುಗಳನ್ನು ಕರೆದುಬಂದರೆ ಒಡನೆಯೇ ಜೀವನ್ಮುಕ್ತಿಯು ವಿವಾಹವು ನೆರವೇರಿತೆಂದು ತಿಳಿಯತಕ್ಕದ್ದು. ॥೨೪॥ ಆ ಹಿಂದೆ ಕೃಪೆಯನ್ನು, ಶಾಂತಿಯನ್ನು, ರುಜುತ್ವವನ್ನು, ಧೈರ್ಯವನ್ನು, ವೈರಾಗ್ಯವನ್ನು, ಪರಮ ಸಂತೋಷವನ್ನು, ಇನ್ನು ಸನ್ಮಾರ್ಗವುಳ್ಳವರನ್ನು, ಹಾಸ್ಯವೆಂಬುವನನ್ನು ಪುಲಕಾಂಕುರವೆಂಬುವನನ್ನು, ವಿಜಯವೆಂಬುವನನ್ನು, ಧ್ಯಾನವೈಖರಿಯೆಂಬವನನ್ನು, ಇವರುಗಳನ್ನೆಲ್ಲ ತಪ್ಪದಹಾಗೆ. ॥೨೫॥ ಸ್ಥೈರ್ಯವೆಂಬುವನು, ಔದಾರ್ಯವೆಂಬುವನು, ಇವರನ್ನು ಸಹ ಮರೆತುಹೋಗದೆ ಐಕಾಗ್ರ್ಯವೆಂಬುವನ ಸಂಗಡ ಕರದುಕೊಂಡು ಬರತಕ್ಕದ್ದೆಂಬದಾಗಿ ವಿಚಾರನೆಂಬ ಸಚಿವಶಿರೋಮಣಿಯು ತಿಳುವಳಿಕೆಯುಳ್ಳವರ ಮನಸ್ಸಿಗೆ ಕೇವಲ ಪ್ರೀತಿಪಾತ್ರನಾಗಿರುವ ವಿಜ್ಞಾನನೆಂಬ ಯೋಗ್ಯನಾದ ಮನುಷ್ಯನನ್ನು ಕಳುಹಿಸಿದಂಥವನಾದನು. ॥೨೬॥ ಈ ಪೂರ್ವೋಕ್ತ ಪ್ರಕಾರದಿಂದ ಕ್ರಮವಾಗಿ ಕರೆಕಳುಹಿಸಿ ಬಂದ ಬಾಂಧವರೆಲ್ಲರು ಪರಮಪ್ರೇಮದಿಂದ ಬಂದು ಸಂಭ್ರಮದಿಂದ ಕೂಡಿ ನೀನು ಕೋರಿದ ಕೋರಿಕೆಯು ಸಂಪೂರ್ಣವಾಗಿ ಫಲಿಸಿತೆಂಬದಾಗಿ ಪುಲಕಾಂಕುರಭರಿತರಾಗಿ ಸರ್ವರೂ ಆನಂದಪರವಶರಾದರು. ॥೨೭॥

---

ಕೃಪೆಯುಕ್ಷಮೆಯುನಾರ್ಜವವ ಧೈರ್ಯವೈರಾಗ್ಯರ ಪಟುಧೃತಿಯು
ಸಮ್ಮಂಧನನೂ। ಸುವಧರಹಾಸ್ಯರೋಮಾಂಚವಿಜಯಧ್ಯಾನ
ದಪರಿಪಾಟಿಯನುತಪ್ಪಿಸದೆ ॥೨೫॥

ಸ್ಥಿರತೆಯುಗಾಂಭಿರೋದ್ರಮ ಸತ್ವೌದಾರ್ಯರ ಮರೆಯದೇಕಾ
ಗ್ರತೆಯೊಡನೆ। ಕರತಹುದೆಂದುವಿಜ್ಞಾನನಕಳುಹಿದನರಿವರಮನ
ದರಗಿಳಿಯೂ ॥೨೬॥

ಇಂತುಕಳುಹಿಕರಸಿಪರವರೆಲ್ಲರು ಸಂತೋಷದಿಂಬಂದುನಿಂದೂ।
ಚಿಂತಿತ ಫಲಸಿದ್ಧಿಸಿದುದೆಂದು ರೋಮಾಂಚಮಂತಾಳಿ ಮುದ
ದಿಂದುಬ್ಬಿದರೂ ॥೨೭॥

೧೫ ಕಂದ॥ ತಾ॥ ಈ ಆಶ್ಚರ್ಯವನ್ನು ಯೇನಹೇಳಲಿ ! ಲೋಕದಲ್ಲಿ ಕೆಲವರು ಸಂತೋಷದಿಂದ ತಮ್ಮ ಸತಿಯರನ್ನು ತೊಡೆಯಮೇಲೆ ಕುಳ್ಳಿರಿಸಿಕೊಳ್ಳುವಂಥವರಾದರು. ಮತ್ತು ಕೆಲರು ಅಂದರೆ ಶ್ರೀ ಮಹಾ ವಿಷ್ಣುಮುಂತಾದವರು ಎದೆಯಲ್ಲಿ ಧರಿಸಿದವರಾದರು. ಇನ್ನು ಚತುರಾನನ ಮುಂತಾದವರು ನಾಲಿಗೆಯಲ್ಲಿರಿಸಿಕೊಂಡರು. ಪರಮೇಶ್ವರನು ಅರ್ಧಾಂಗವಾಗಿ ಮಾಡಿಕೊಂಡನು ಇವರದೆಲ್ಲ ಸಾಮಾನ್ಯವಾಗಿರುವದು. ಈ ಮನೋನರನಾಥನ ಕೌಶಲ್ಯವೇ ಪರಮ ಶ್ಲಾಘನೀಯಮಾಗಿರುವದು. ... *

೧೬ ವೃತ್ತ॥ ತಾ॥ ನೋಡಿದರೆ ಮಾತ್ರ ಕಾಣುವದಿಲ್ಲ. ಮನೋಹರವಾದ ನೋಟವನ್ನು ಮಾತ್ರ ಹೊಂದಿರುವಳು. ಆಲಿಂಗನಮಾಡಿಕೊಳ್ಳುವದಕ್ಕೆ ಆಗುವದಿಲ್ಲ ತಾನುಮಾತ್ರ ಚನ್ನಾಗಿ ಅಪ್ಪಿಕೊಂಡಿರುವಳು. ಚಾಂಚಲ್ಯವನ್ನು ಹೊಂದಿಸ್ಪರ್ಶಮಾಡುವದಿಲ್ಲ. ಹಾಗಿಲ್ಲದಿದ್ದರೂ ಅನುಭವಪಿಶಾರದರಾದ ಸಮಸ್ತ ಜೀವನ್ಮುಕ್ತರೂ ಘನವಾಗಿ ಕೊಂಡಾಡುವಂತೆ ಅಂತರದಲ್ಲಿ ಅಮೋಘವಾದ ಬ್ರಹ್ಮಾನಂದವನ್ನುಂಟುಮಾಡುತಲಿರುವಳು ಆಹಾ !! ಲೋಕದಲ್ಲೆಲ್ಲಿಯೂ ಕಾಣದಿರುವ ಪರಮಾಶ್ಚರ್ಯವನ್ನು ಕಂಡೆವಲ್ಲಾ, ಎಂಬದಾಗಿ ನೆರದವರೆಲ್ಲರೂ ಪರಮಾನಂದ ಭರಿತರಾದರು. ... *

---

೧೫ ಮೂ॥ ಕಂದ॥ ತೊಡೆಯೊಳಗಿಟ್ಟರ್ಕೆಲರ್ಕೆಲರ್ |
ಮಡದಿಯಕೆಲರೆದೆಯಮೇಲೆತಾಳಿದರಿತರರ್ನುಡಿ|
ವೆಡೆಯೊಳ್ತಾಳಿದರವ |
ರಡಕಳಂತಿರಲಿಈತನಕೃತಿವಿಚಿತ್ರಂ ॥

೧೬ ಮೂ॥ ವೃತ್ತ॥ ನೋಡುವದಿಲ್ಲನೋಟವಮನನಾರತ ಪೊಂದಿಹ
ಳಪ್ಪಲಿಲ್ಲತಾಂ ಕೂಡಿಹಳೊಪ್ಪಮ್ಮೆಯುಂತೆರಳಲ್ಕೆದಿ ವಿಮಲಾಸವು
ನೊಂಪಲಿಲ್ಲಾಕೊಂಡಾಡುವ್ರೋ ವಿವೇಕಿಜನಮಾಂತರಮೋದಮ
ನುಂಟುಮಾಡುವಳ್ನೋಡದಚಿತ್ರಮಂ ಭುವನದೊಳ್ಮಿಗೆನೋ
ಡಿದೆವೆಂದುಹಿಗ್ಗಿದರ್ ॥

೧೭ ವಚನ॥ ತಾ॥ ಲೋಕೈಕವೀರನಾದ ಈ ಮನಸ್ಸ್ಪರ್ಶಭೌಮನಿಗು, ಜೀವನ್ಮುಕ್ತಿಯೆಂಬ ಲಲನಾ ಶಿರೋಮಣಿಗೂ ಉಂಟಾದ ಸಂಶ್ಲೇಷಾನಂದವನ್ನು ಏನು ಹೇಳೋಣವೆಂಬದಾಗಿ ಕೆಲಬರು ಶ್ಲಾಘಿಸುತ್ತರ್ದ್ದರು. ... ... *

೧೮ ಕಂದ॥ ತಾ॥ ಲೋಕದಲ್ಲಿ ಶಾಸ್ತ್ರೋಕ್ತ ಪ್ರಕಾರವಾಗಿ ಪಾಣಿಗ್ರಹಣ ಮಾಡಿಕೊಳ್ಳಲ್ಪಟ್ಟ ಧರ್ಮಪತ್ನಿಯು ಪತಿವ್ರತಾ ಶಿರೋಮಣಿಯಾಗಿದ್ದರೆ ಪತಿಯಾದವನಿಗೆ ಬಂಧನಿವೃತ್ತಿರೂಪವಾಗಿರುವ ಮುಕ್ತಿಸುಖವು ಸಮನಿಸುವದೆಂಬದಾಗಿರುವ ಶಾಸ್ತ್ರವಚನವು ಮತ್ತು ಅನುಭವೋಕ್ತಿಯು ಸುಳ್ಳಾಗುವದುಂಟೆ ? ಧರ್ಮಪತ್ನಿಯಿಂದಲೆ ಮೋಕ್ಷವು ಬರುವಂಥಾದ್ದಾಯಿತು, ಕೊನೆಯಿಲ್ಲದ್ದಾಗಿಯು, ಅಖಂಡವಾಗಿಯು, ನಿತ್ಯವಾಗಿಯು, ಅವಿಕಾರವಾಗಿಯು ಇರುವ ಐಶ್ವರ್ಯವು ಲಭಿಸುವಂಥಾದ್ದಾಯಿತು. ಇದು ಅತ್ಯಾಶ್ಚರ್ಯಕರವಾಗಿರುವದು.

೧೯ ವಚನ॥ ತಾ॥ ಈ ರೀತಿಯಿಂದ ಕೆಲವರು ತಾತ್ಪರ್ಯ ಗರ್ಭಿತವಾಗಿರುವ ಚತುರೋಕ್ತಿಗಳನ್ನು ಹೇಳಿಕೊಳ್ಳುತಿದ್ದರು. ಹೀಗಿರುವಲ್ಲಿ ವಸಿಷ್ಠಾದಿ ಮಹರ್ಷಿ ಧರ್ಮಪತ್ನಿಯರಾಗಿ ಪತಿವ್ರತಾ ಶಿರೋಮಣಿಗಳಾಗಿರುವ ಅರುಂಧತಿ, ಅನಸೂಯೆ ಮುಂತಾದ ವಧುಗಳು ಮನಶ್ಚಕ್ರವರ್ತಿಗೆ ಮಂಗಳಾರತಿಯನ್ನು ಸಂತೋಷದಿಂದ ಬೆಳಗುವಂಥವರಾದರು. ಅದರ ವಿವರವೆಂತೆಂದರೆ. ... *

---

೧೭ ಮೂ॥ ವ॥ ಈಕೆಯೊಳೀತನೊಳೆಂದು ಕೆಲರಾಡುತ್ತಿರೆ ಕೆಲಬರ್.

೧೮ ಮೂ॥ ಕಂದ॥ ಸತಿಯಾಗಲ್ಸಹಧರ್ಮಿಣಿ ।
ಪತಿಗಪ್ಪುದಮೋಘಸೌಖ್ಯಮೆಂಬಿದುಪುಸಿಯೆ॥
ಸತಿಯಾಗೆಮುಕ್ತಿಬಂದುದು ।
ಮಿತಿಯಿಲ್ಲದಭಾಗ್ಯಮಿದುಮಹಾವಿಚಿತ್ರಮಲಾ ॥

೧೯ ಮೂ॥ ವ ॥ ಇಂತೆಂದು ಕೆಲಬರು ಸಹೇತು ಚತುರೋಕ್ತಿಗಳನಾಡುತ್ತಿರೆ ಅರುಂಧತ್ಯನಸೂಯಾದಿ ಪರಮಮುನೀಂದ್ರ ಪುರಂಧ್ರಿಯರ್ ಮಂಗಳಾರತಿಯ ನೆತ್ತಿದರದೆಂತೆನೆ.

೨೦ ರಾಗ॥ ಭೈ॥ ತಾ॥ ಬೊಗಸೆಯಗಲವಿರುವ ನಯನವೆಂಬ ತಟ್ಟೆಯೊಳಗೆ ಕಣ್ಣಿನ ನಡುಭಾಗದೊಳಿರುವ ಕರಿಗುಡ್ಡಿನ ವ್ಯಾಪ್ತಿಯೆಂಬನೀಳವಾದ ಬತ್ತಿಯೊಳಗೆ ಅಪಾರವಾದ ತೇಜಸ್ಸುಳ್ಳ ಪ್ರಜ್ಞಾನವೆಂಬ ದೀವಿಗೆಯನ್ನು ಹತ್ತಿಸಿ ಶಾಂತಿಯೆಂಬ ಪದಾರ್ಥಕ್ಕೆ ಶರೀರವಾಗಿರುವ ಮನೋನರನಾಥನಿಗೆ ಪರಮ ಸಂತೋಷದಿಂದ ಜನನಮರಣ ಪ್ರವಾಹರೂಪವಾಗಿರುವ ಸಂಸಾರವೆಂಬ ಘನಸಾಗರದ ಪಾರವನ್ನು ಕಂಡನಿನಗೆ ನಿರಂತರವೂ ಶುಭಮಂಗಳಗಳ ಪರಂಪರೆಯು ಸಮನಿಸಲೆಂಬದಾಗಿ ಹರಸುತ ಆರತಿಯನ್ನು ಬೆಳಗಿದರು॥೧॥ಮತ್ತು, ಕಾಮಕ್ರೋಧ ಲೋಭಮೋಹ ಮದಮಾತ್ಸರ್ಯಗಳೆಂಬ ಅಂತರಂಗ ಶತ್ರುಜಾಲವನ್ನು ಧ್ವಂಸಮಾಡಿದವನಾಗಿಯು, ಸ್ವಚ್ಛವಾಗಿರುವ ಮುಕುತಿಯನ್ನಳವಟ್ಟವನಾಗಿರುವದರಿಂದಲೇ ಪರಮವಿಜ್ಞಾನ ಸ್ವರೂಪನಾಗಿರುವನಾಗಿಯು, ಮುನಿಕುಲತಿಲಕನಾಗಿಯು, ಕುತ್ಸಿತ ಜನರನ್ನು ದೂರವಾಗಿ, ತ್ಯಜಿಸಿರುವವನಾಗಿಯು, ಕುಚೇಷ್ಟಾವಿರಹಿತನಾಗಿಯು, ಸರ್ವಭೂತಗಳಲ್ಲಿಯೂ ದಯಾಶಾಲಿಯಾಗಿಯು, ಸಾಕ್ಷಾತ್ ಬ್ರಹ್ಮಸ್ವರೂಪದೊಳು ಆಸ್ಪದವುಳ್ಳವನಾಗಿಯೂ ಇರುವ ಮನೋಧೀರನಿಗೆ ಆರತಿಯಂ ಮಂಗಳೋಕ್ತಿಯಿಂದ ಬೆಳಗಿದವರಾದರು ॥೨॥ ಮಾಯಾವರಣ ರಹಿತವಾಗಿರುವ ಅಮೋಘವಾದ ಸಹಜಾನುಭವವು

---

೨೦ ಮೂ॥ ರಾಗ-ಭೈರವಿ॥ ಕುಡಿತೆಗಣ್ಣೆಂಬತಟ್ಟೆಯಲಿ ತಾರಕವೆಂಬನಿಡಿದಾದಬತ್ತಿಯ ಲಿಜ್ಞಾನವೆಂಬಾಕಡುಹೆಚ್ಚಿಯನುಳ್ಳದೀಪವ ಮುಟ್ಟಿಸಿಯೆ ಶಾಂತಿಗೊಡಲಾದಮನವಬೆಳಗಿದರ್ಕರಿಂ । ಜಯ ಮಂಗಳಂಸದಾಶುಭಮಂಗಳಂ । ರಯದೆಭವಸಿಂಧುಪಾರವಪಡೆದವಗೆ ॥೧॥

ವಿಜಿತಷಡ್ವರ್ಗನಿಗೆ ಭಜಿತವಿಜ್ಞಾನನಿಗೆಪಟುವಮೌನನಿಗೆ । ಕುಜನಜನದೂರನಿಗೆ ಕುಹಕಸಂಹಾರನಿಗೆ ॥ ನಿಜಪದವಿಹಾರನಿಗೆ ನಿರ್ವೈರಗೆ ॥೭॥

ಆಗಲಿಸಿರಾವರಣ ಮಾದಸಹಜಾನುಭವಮಾಗಲಿ ವಿಷಜ್ವಾಲದಲಿ

ಒದಗಲಿ ಪ್ರತಿಬಂಧಕಗಳಾದ ವಿಪತ್ತುಗಳ ವಿನಾಶವುಂಟಾಗಲಿ, ಸ್ವ ಸ್ವರೂಪ ಸಾಕ್ಷಾತ್ಕಾರವೆಂಬುವದು ದೃಢವಾಗಲಿ, ಅಸದೃಶವಾದ ಶಶಿ ರೇಖೆಯಿಂದ ಚುಂಬಿತವಾದ ಶಿರೋಮಂಡಲವುಳ್ಳ ಪರಶಿವನಿಂದ ಅನುಗ್ರಹಿಸಲ್ಪಟ್ಟ ಪರಮಾರ್ಥರೂಪವಾಗಿರುವ ಜೀವೇಶ್ವರೈಕ್ಯರೂಪ ವಾಗಿರುವ ಅಬಾಧಿತಸಾಮ್ರಾಜ್ಯವು ಶಾಶ್ವತವಾಗಿರಲಿ ಎಂದು ಹರಸುತ ಆ ರತಿಯಂ ಬೆಳಗಿದರು. ... ... ... *

೨೧ ವ॥ ತಾ॥ ಈ ಪ್ರಕಾರವಾಗಿ ವಿಚಿತ್ರತರವಾದ ನಾನಾವಿಧ ಮಂಗಳಾರತಿ ಸೂಕ್ತಿಗಳಿಂದ ಮುಕ್ತಿಕಾಂತಾವಿವಾಹ ಮಹೋತ್ಸ ವವನ್ನು ಪೂರ್ವೋಕ್ತರಾದ ಅರುಂಧತಿ ಮುಂತಾದ ಸತಿಶಿರೋಮ ಣಿಯರು ನೆರವೇರಿಸಲಾಗಿ ಆ ಸಮಯದಲ್ಲಿ ಯಥೋಚಿತವಾದ ನಮ ಸ್ಕಾರ ಪರಂಪರೆಗಳಿಂದಲು, ಸ್ತೋತ್ರಜಾಲಗಳಿಂದಲು, ನಿಖಿಲರಾದ ದೇವತೆಗಳೂ ಉಪಚಾರಗಳನ್ನಾಚರಿಸಿ ಆಬಳಿಕ ಜೀವನು ಬ್ರಹ್ಮನಾ ಗುವನೊ ? ಇಲ್ಲವೊ? ಎಂಬರ್ಥವುಳ್ಳ ಸಂಶಯವು. ಸ್ವಸ್ವರೂಪ ಪರಿ ಜ್ಞಾನವಿಲ್ಲದೆ ಅವಿವೇಕದಿಂದ ಜಡವಾದ ದೇಹವೆ ತಾನೆಂಬದಾಗಿ ತಿಳಿ ಯುವಿಕೆಯೆಂಬರ್ಥವುಳ್ಳ ವಿಪರೀತಭಾವನೆಯು ಅಂತಃಕರಣ ಧರ್ಮವಾ ದ ಕಾಮಸಂಕಲ್ಪ, ಭಯ, ಅಧೈರ್ಯಮುಂತಾದವುಗಳನ್ನು ಬ್ರಹ್ಮಸ್ವ ರೂಪವಾಗಿರುವ ನಾನು ಅನುಭವಿಸುತಿರುವೆನೆಂಬದಾಗಿ ತಿಳಿದುಕೊಂ ಡಿರುವಿಕೆಯೆಂಬರ್ಥವುಳ್ಳ ಅಸಂಭಾವನೆಯು, ಎಂಬೀಮೂರನ್ನು ದ್ಧ

---

ವೃತಳಿವಿಂ ಆಗಲಿ ಶಶಾಂಕರೇಖಾಚುಂಡದತಾತ್ಮ ನಿಜಯೋಗಸಾ ಮ್ರಾಜ್ಯಮವ್ಯಾಹತಪದಂ ॥

೨೧ ಮೂ॥ ವಚನ॥ ಇಂತು ನಾನಾವಿಧಾರಾರ್ತಿಕೆಗಳಿಂ ಶಾಂತಿಕಲ್ಯಾ ಣಮಹೋತ್ಸವಮಂ ಪುಣ್ಯಾಂಗನೆಯರ್ವಿರಚಿಸಲಾ ಕಾಲದಲ್ಲಿ ಸಮುಚಿತ ನಮಸ್ಕಾರಸ್ತೋತ್ರಂಗಳಿಂ ಸಕಲದೇವತೆಗಳಂ ನ ಮಸ್ಕರಿಸಿ ಸಂಶಯ ವಿಪರೀತ ಅಸಂಭಾವನೆಗಳೆಂಬ ಪಟು ತ್ರಯಂಗಳಂ ನಿವಾಳಿಸಿ ದೂರಂಬಿಸುಟು ಮುಕುಳಿತಾಂಜಲಿ ಬ ದ್ಧನಾಗಿ ಮುಕ್ತಿಕಾಂತಾ ಸಹಾಯನಾಗಿ ಮನೋರಾಜನಿರಲಾ

ಷ್ಟದೋಷಪರಿಹರಾರ್ಥವಾಗಿ ಇಳಿತೆಗದು ದೂರವಾಗಿ ಬಿಸುಟು ಅಂಜಲಿಬದ್ಧನಾಗಿ ಮನೋನರನಾಥನು ಮುಕ್ತಿಕಾಂತಾಲಿಂಗಿತನಾಗಿರಲು ಆ ಸಂಧರ್ಭದಲ್ಲಿ ಪ್ರೂರ್ವೋಕ್ತರಾದ ದೇವತೆಗಳೆಲ್ಲರು ನೀನುದೂರವಾಗಿ ಬಿಸುಟ ಸಂಶಯಾದಿಗಳು ಭೂತಾದಿ ಕಾಲತ್ರಯದಲ್ಲಿಯಾಗಲಿ, ಪೂರ್ವಾದಿದೇಶದಲ್ಲಿಯಾಗಲಿ, ಘಟಪಟಾದಿ ವಸ್ತುಗಳಲ್ಲಿಯಾಗಲಿ, ಸರ್ವಥಾತೋರದೆ ಹೇಗಲೆಂಬದಾಗಿ ದಿವಿಜರು ಮಂಗಳೋಕ್ತಿಗಳಿಂದ ಚೆನ್ನಾಗಿ ಹರಸಿದಂಥವರಾಗಿ ತಮ್ಮತಮ್ಮ ಆವಾಸಗಳನ್ನು ಕುರಿತು ಸಮ್ತೋದದಿಂತೆರಳುವಂಥವರಾದರು. ಆಗಲಾ ವಿಚಾರಸಚಿವೋತ್ತಮನು ಮನೋನರನಾಥನೊಡನೆ ಈ ಮುಂದೆ ವಿವರಿಸುವತೆರನಾಗಿ ನುಡಿಯುವಂಥವನಾದನು. ... ... ... *

೨೨ ಜಂಪೆ॥ ತಾ॥ ಎಲೈ ಮನೋನರನಾಥನೆ ಕೇಳು, ಅಮೋಘವಾದ ವಿವಾಹೋತ್ಸವಕಾಲದಲ್ಲಿಯು, ಇನ್ನು ಇತರಮಹೋತ್ಸವಕಾಲಗಳಲ್ಲಿಯೂ, ವಿಶೇಷವಾಗಿ ಖಲರಾಗಿರುವ ನೀಚರು ಕೊಲೆಗೆ ಪಾತ್ರರಾದಾಗ್ಯೂ, ॥೧॥ ನಿರ್ಬಂಧದಿಂದ ಬಿಡಬೇಕೆಂಬುವದು ಲೋಕಾನುಭವದಿಂದ ಸಿದ್ಧವಾಗಿರುವದು. ಆದುದರಿಂದ ಮೂಲಾಧಾರಾದಿ ಅಷ್ಟಚಕ್ರಪುರದೊಳಗೆ ನಿರ್ಬದ್ಧರಾಗಿರುವಂಥವ ರಕಷ್ಟವು ಪರಿಹಾರವಾಗುವದಕ್ಕೋಸ್ಕರ ಕಾವಲಿಗುವ ಸೇವಕರನ್ನು ಬಿಡುವಂತೆ ಆ

---

ಸಕಲತೇವತೆಗಳೆಲ್ಲರುಂ ನಾವು ಕಾಂಬಂತೆ ನಮ್ಮಮುಂದೆ ನಿವಾಳಿಸಿ ಬಿಸುಟ ಸಂಶಯುವಿಪರೀತಾ ಸಂಭಾವನೆಗಳೆಂಬ ಪಟುತ್ರಯಂಗಳಾವಕಾಲದಲ್ಲಿಯು ಆವದೇಶದಲ್ಲಿಯು ಆವವಸ್ತುವಿನಲ್ಲಿಯು ತೋರದೆ ಪೋಗಲೆಂದುಪರಸಿನಿಜಾವಾಸವುಂ ಸೇರಲಾಮನೋನೃಪನೊಡನೆ ವಿಚಾರನಿಂತೆಂದಪನದೆಂತೆನೆ.

೨೨ ಮೂ॥ ಜಂಪೆ॥ ಎಲೆರಾಯಕಲ್ಯಾಣದಲಿ ಮಹೋತ್ಸವದಲ್ಲಿ ಬಲ
ರಾದರಾಗದಲೆಕೊಲೆಗೆಪಾತ್ರರ್ಕಳ್ ॥೧॥
ಅಷ್ಟಮಂಡಲಪುರದೊಳಡಿಗೊಡಲಾದವರಕಷ್ಟಮಂ ಪರಿಹ
ರಿಸುಕಾಲವಂತೆಗೆಸೂ ॥೨॥

ಜ್ಞೆಮಾಡು ॥೧॥ ಪೂರ್ವದೊಳು ದಹರಿಸಿದ ವಿಷಯ ರಾಗಾದಿಗಳು ಪ್ರವೃತ್ತಿಯ ಸಂಗಡ ಸೇರಿದಂಥವುಗಳಾಗಿ ಪ್ರಕಾಶಿಸುತ ತಮ್ಮ ತಮ್ಮ ಸ್ಥಾನಗಳಲ್ಲಿ ಇರುವಂಥವುಗಳಾಗಲಿ ॥೩॥ ಗೌರವಾಸ್ಪದರಾಗಿರುವ ವೈರಾಗ್ಯಾದಿಗಳೂ ಈ ಸಾಕ್ಷಾತ್ತಾಗಿರುವ ವಿರಕ್ತಿಯೊಡನೆ ಸೇರಿದಂಥರಾಗಿ ಅವರವರ ಪೂಜ್ಯತಾನುಸಾರವಾಗಿ ಇರುವಂಥರಾಗಲಿ ॥೪॥ ಪ್ರವೃತ್ತಿ ನಿವೃತ್ತಿಗಳೆಂಬ ಉಭಯ ಪಕ್ಷವನ್ನು ಆಶ್ರಯಿಸಿರುವದರಿಂದ ಮಾಧ್ಯಸ್ಥ್ಯವನ್ನವಲಂಬಿಸಿರುವ ರಾಜಸ ಗುಣವೆಂಬುವದೂ ತನ್ನ ಬಳಕೆಯು ಯಾವ ಮೇರಿಗಿರುವದೋ ? ಆದರಂತೆಯೆ ರೂಢಿಯಲ್ಲಿ ಬಾಳಿಕೊಂಡಿರಲಿ ॥೫॥

೨೩ ವಚನ॥ ತಾ॥ ಈ ರೀತಿಯಿಂದ ಸಚಿವಾಗ್ರಗಣ್ಯನಾದ ವಿಚಾರನು ಹೇಳಲು ಒಡನೆಯೇ ವಿತರ್ಕನೆಂಬುವನು ಬಂದು ಆತನ ಸಂಗಡ ಪನ್ನೈ, ಕಾಮಾದಿಗಳೆಲ್ಲರು ಪುನಃ ಬರುವಂಥವರೇ ಆದರೆ ಬ್ರಹ್ಮಾನುಭವಕ್ಕೆ ಸಾಧಕ ಭರಿತವಾಗಿರುವ ಶಾಂತಿಮಾರ್ಗವು ಮಲಿನವಾಗಿ ಹೋಗದಿರುವದೆ ! ಎಂಬದಾಗಿ ಕೇಳಲು.

೨೪ ॥ವೃತ್ತ॥ ತಾ॥ ಲೋಕದೊಳು ರೋಗದಿಂದ ಪೀಡಿತನಾಗಿದ್ದ ಒಬ್ಬಾನೊಬ್ಬ ಪುರುಷನಿಗೆ ಆರೋಗದ ವಿನಾಶಾರ್ಥವಾಗಿ ಅಪ

---

ಆಪ್ರವೃತ್ತಿಯಬೆರಸಿ ಅಖಿಲರಾಗಾದಿಗಳು ಸಪ್ರಭೆಯೊಳ್ಳೈದಲಿ
ಸಂಸ್ಥಾನಮುಖವಾ ॥೩॥
ಈನಿವೃತ್ತಿಯಬೆರಸಿಇರಲಿ ವೈರಾಗ್ಯದಿ ಮಾನನಿಧಿಗಳು ತಮ್ಮ
ಮಾನ್ಯನಿರ್ದಂತೆ ॥೪॥
ಬಾಳುವಂದಿನೊಳು ಭಯಪಾಕ್ಷಿಕತ್ವವನಡೆದ ಲೋಲರಾಜಸವಿ
ರಲಿರೂಢಿಯಾಂತಂತೂ ॥೫॥

೨೩ ಮೂಲ॥ ವಚನ॥ ಇಂತೆಂದ ವಿಚಾರದೊಡನೆ ವಿತರ್ಕನಂಬಂದು
ಪಿಂತಣ ಕಾಮಾದಿಗಳು ಬಂದರೆ ಶಾಂತಿಮಾರ್ಗಕ್ಕಂತರಾಯ
ಮಾಗದೆ ಎನಲು.

೨೪ ಮೂ॥ ವೃತ್ತ॥ ರೋಗದಿಂದ್ದಾಯುಪಡೆದುತದ್ವಿಲಯಕ್ಕೆ ಭಿ

ದ್ಯತನಾದ ವೈದ್ಯನು ಬಂದು ರೋಗದ ಮೂಲವನ್ನು ಕಂಡು ಹಿಡಿದು ಸುಮುಖವಾಗಿರುವ ತನ್ನ ಹಸ್ತದಿಂದ ಉತ್ತಮವಾದ ಔಷಧವನ್ನು ಕೊಟ್ಟು ಕಠಿಣತರವಾದ ಪಥ್ಯವನ್ನಿಟ್ಟು ಹೋದ ತರುವಾಯ ರೋಗಿಯು ಪಥ್ಯಕ್ರಮದಿಂದ ಆರೋಗ್ಯ ಭಾಗ್ಯವನ್ನು ಅನುಭವಿಸುವಂಥವನಾಗಿ ಪಥ್ಯವನ್ನು ಬಿಟ್ಟು ಪೂರ್ವದಂತೆ ಇತರಪದಾರ್ಥಗಳನ್ನು ಭೋಜನಮಾಡುವದಿಲ್ಲವೆ, ಆಗ ಭುಜಿಸಲ್ಪಟ್ಟ ಪದಾರ್ಥಗಳು ವಿರೋಧವನ್ನು ಮಾಡಬಲ್ಲವೆ ? ಮಾಡಲಾರವು. ಅದರಂತೆಯೇ ಪ್ರಕೃತದಲ್ಲಿಯು ಪೂರ್ವೋಕ್ತವಾದ ಕಾಮಾದಿಗಳು ಬಂದರು ಈತನನ್ನು ಲೇಶವಾದರು ಬಾಧಿಸಲಾರವು.

೨೫ ವಚನ॥ ತಾ॥ ಮತ್ತು ಈ ಹಿಂದೆ ಉದಹರಿಸಿದ ಅರ್ಥದಿಂದಲೇ ಪ್ರಾರಬ್ಧಕರ್ಮಾನುಗುಣವಾಗಿ ಆವಶ್ಯಕವಾಗಿ ಅನುಭವಿಸತಕ್ಕವುಗಳಾಗಿಯು, ಜ್ಞಾನಾಭ್ಯಾಸಕ್ಕಿಂತಲೂ ಪೂರ್ವಭಾವಿಯಾಗಿ ಅನುಭವಿಸುತಿದ್ದ ಅಂಗನೆಯೇ ಮೊದಲಾದ ವಿಷಯಾಸಕ್ತಿಯಿಂದ ದುಷ್ಟವಾಗಿರುವ ಪಾಂಚ ಭೌತಿಕಗಳಾದ ಪ್ರತಿಬಂಧಕಗಳು, ಇನ್ನು ಹರಿವಿರಿಂಚಿಮೊದಲಾದವರ ಲೋಕಸುಖಾನುಭವಗಳಲ್ಲಿ ಆಸಕ್ತಿಯು, ಪ್ರಮಥಗಣಗಳೇ ಮುಂತಾದವರಿಗೆ ಉಂಟಾಗಿರುವ ಸಿದ್ಧಿ ವಿಶೇಷಗಳು ತನಗೆ ಉಂಟಾಗ ಬೇಕೆಂಬ ವಾಂಛಾವಿಶೇಷವು, ಮತ್ತು ಭವಿಷ್ಯದೈಶ್ವರ್ಯಾದಿ ಪ್ರತಿಬಂಧಕಳಾದ ಭವಿಷ್ಯ ತ್ಪ್ರಯತ್ನಾದಿ ರೂಪವಾಗಿ

---

ಪಕ್ವ್ರಸನ್ನಹಸ್ತಗತ ವೈದ್ಯಮಂತೆಗೆದು ಕೊಂಬೆಡೆಯೊಳು
ಪಥ್ಯಮಿದ್ದುಚೆನ್ನಾಗಲದಂವಿಸರ್ಜಿಸುವನೆ ಮರಣಾವಧಿಯಾಗಿ
ಕೊಂಬನೋರೋಗಿ ನಿರಾಮಯಗಿಹವೆ ದುರ್ಜಲಭೋಜ್ಯಗಳೀ
ಧರಿತ್ರಿಯೋಳ್ ॥

೨೫ ಮೂಲ ॥ ವಚನ॥ ಅದರಿಂದ ಪ್ರಾರಬ್ಧ ಕರ್ಮಾನುಸಾರವಾಗಿ ಅವಶ್ಯಂ ಭಾವಮಂ ಪಡೆದುಬರುವ ಅನುಭೂತವನಿತಾಟವಿಷಯ ರುಚಿರೂಪಂಗಳಾದ ಭೌತಿಕ ಪ್ರತಿಬಂಧಂಗಳುಂ ಜಡಬುದ್ಧಿ ಜನಸಂಗರತಿ ದುರಭಿಮಾನ ಚಾಪಲ್ಯಾದಿ ರೂಪಂಗಳಾ

ರುವ ಪ್ರತಿಬಂಧಕಗಳು, ಇವುಗಳೆಲ್ಲವೂ ತಮತಮಗೆ ಎಷ್ಟು ಶಕ್ತಿಯುಂಟೊ? ಅಷ್ಟು ಬಲದಿಂದ ಕೂಡಿರುವಂಥವುಗಳಾಗಿದ್ದಾಗ್ಯೂ, ಇನ್ನು ಪೂರ್ವದೊಳು ಪರಾಜಯವನ್ನು ಹೊಂದಿರುವ ಕಾಮಾದಿ ಶತ್ರುಗಳೂ ಸ್ವೇಚ್ಛಂದವಾಗಿದ್ದಾಗ್ಯೂ, ಎಲೈ ಮನೋನರನಾಥನೆ ಇವುಗಳಿಂದ ನಿನಗೆ ಯಾವವಿಧವಾದ ತೊಂದರೆಯು ಲೇಶಮಾತ್ರವೂ ಇರುವದಿಲ್ಲವು. ಪುನಃ ಜನನಮರಣ ಪ್ರವಾಹ ರೂಪವಾಗಿರುವ ಸಂಸೃತಿ ಯೆಂಬುವದು ನಿನಗೆ ಎಂದೆಂದಿಗೂ ಸಂಭವವಾಗುವದಿಲ್ಲವು. ಇನ್ನು ಇದರಗೊಡವೆಯನ್ನು ಖಂಡಿತವಾಗಿ ಬಿಟ್ಟುಬಿಡು.

೨೬ ಜಂಪೆ॥ ತಾ॥ ಇನ್ನು ಸಂಸೃತಿಯ ಸಂಬಂಧವೆಂಬುವದು ನಿನಗೆ ಉಂಟಾಗುವದಿಲ್ಲ ವೆಂಬರ್ಥದಲ್ಲಿ ದೃಷ್ಟಾಂತ ಮೂಲಕವಾಗಿ ವಿವರಿಸುವೆನು. ನಾನಾಪ್ರಕಾರವಾಗಿ ಮೇಘಗಳ ಗುಂಪು ತಂಡೋಪತಂಡದಿಂದ ಆವರಿಸಿ ಕೊಂಡಿದ್ದರೂ ಭೂತಾದಿ ಕಾಲತ್ರಯದಲ್ಲಿಯೂ ಇವುಗಳ ವಿಕಾರವೆಂಬುವದು ಆಕಾಶಕ್ಕೆ ಸಂಬಂಧಿಸುವದೆ? ಸಂಬಂಧಿಸುವದಿಲ್ಲವು॥೧॥ ಮತ್ತು ಗಾಢಾಂಧಕಾರದಲ್ಲಿ ಹಗ್ಗವನ್ನು ನೋಡಿ ಸರ್ಪಭ್ರಾಂತಿಯುಂಟಾಗಲು ಆಗ ಕಲ್ಪಿತವಾದ ಆ ಹಾವುಬಂದು ಕಚ್ಚಿದರೆ ಅದರ ವಿಷವೇರಿ ಯಾರಾದರು ಸಾಯುವದುಂಟೆ? ಇಲ್ಲವು, ॥೨॥ ಬೆಳಕಿನಿಂದೊಡಗೂಡಿರುವ ಮಂದಿರದಲ್ಲಿ ಸೂಕ್ಷ್ಮವಾದ ಪದಾರ್ಥಗಳನ್ನು

---

ದೆ ವರ್ತಮಾನಿಕ ಪ್ರತಿಬಂಧಂಗಳುಂ ಬ್ರಹ್ಮಾದಿಲೋಕ ವಾಂಛೆಪ್ರಮುಖಾದಿ ಕಾಮ್ಯಾಭೀಪ್ಸಿತ ವಿಭೂತಿ ಪ್ರಯತ್ನಗಳಾದ ಭವಿಷ್ಯತ್‌ಪ್ರತಿಬಂಧಂಗಳುಂ ಯಥಾಸಾವಕಾಶವಾಗಿರಲಿ ಇವರೊಳ್ಪರಾಜಿತರಾದ ಕಾಮಾದಿಗಳು ವಿಹರಿಸಲಿ ನಿನಗಿನ್ನುಪ್ಪದೆ ಭವಮಾಲೆ ಇವೆತ್ತಣಭಯಂ ಬಿಡಾ.

೨೭ ಮಾ॥ಜಂಪೆ॥ ಥರಥರದಿಜಲಧರನಿ ಕರಮೊತ್ತರಿಸಲು ಪುಷ್ಕರಕೆಂದಿಗಾದೊಡಂಬರುವುದೆವಿಕೃತಿ ॥೧॥
ಕಾಳವದಹಗ್ಗದಲಿ ಕಲ್ಪಿಸಿದ ಸಟೆಯಾದ ಹಾವುಕಚ್ಚಿದರಾರು ಸಾವರ್ಕೆಜಗದಿ ॥೨॥

ಕಂಡುಹಿಡಿಯುವವನು ಗಾಢಾಂಧಕಾರದಿಂದ ನಿಬಿಡವಾದ ಅದೇಸ್ಥಳದಲ್ಲಿ ಆ ಸೂಕ್ಷ್ಮಪದಾರ್ಥವನ್ನು ಕಂಡು ಹಿಡಿಯುವವನು ಯಾರಾದರು ಉಂಟೆ? ಇಲ್ಲವು. ॥೨॥ ಹಾಲುಕಾದು ಹೆಪ್ಪೆಂಬ ಸಂಸ್ಕಾರವನ್ನು ಪಡೆದು ಮೊಸರಾಗಿ ತರುವಾಯ ಕಡೆಯುವದರ ಮೂಲಕ ನವನೀತವಾಗಿ ಆ ಹಿಂದೆ ಕಾಸುವದರಿಂದ ಮನೋಹರವಾದ ಘೃತವಾಗಿ ಪುನಃ ಆ ತುಪ್ಪವೇ ಹಾಲಿನಭಾವವನ್ನು ಹೊಂದಲಾದಿಸುವದಕ್ಕೆ ಆಗುವದುಂಟೆ? ಆಗುವದಿಲ್ಲವು. ॥೪॥ ಬಟ್ಟೆಯು ಸುಟ್ಟುಹೋದಂಥಾದ್ದಾಗುತಿರಲಾಗಿ ಆ ದಗ್ಧಪಟವನ್ನು ಉಟ್ಟು ಛಳಿಯನ್ನು ನಿವಾರಣ ಮಾಡಿಕೊಂಡ ವಿವೇಕಿಗಳು ಈ ಭೂಮಂಡಲದಲ್ಲಿ ಯಾರಾದರು ಇರುವರೆ? ಇಲ್ಲವು. ॥೫॥ ಇನ್ನು ಅಮೋಘವಾದ ಗರುಡಮಂತ್ರ ಪುರಶ್ಚರಣೆಯಿಂದ ಹಾವು ಕಚ್ಚಿದ್ದವನ ವಿಷವೇಗವು ಇಳಿದು ಹೋಗಿ ಪುನಃ ಆ ವಿಷದ ಸಾಮರ್ಥ್ಯವು ಆ ಪುರುಷನಿಗೆ ಮೋಹಮೂರ್ಛೆಯನ್ನು ಉಂಟು ಮಾಡಬಲ್ಲದೆ? ಎಂದಿಗೂ ಮಾಡಲಾರದು. ॥೬॥ ಸ್ವಪ್ನಾವಸ್ಥೆಯಲ್ಲಿ ತನಗೆ ಒಬ್ಬಾನೊಬ್ಬ ಕಾಮಿನಿಯು ಪ್ರಾಪ್ತವಾಗಲು ಆಕೆಯ ಸಂಸರ್ಗವನ್ನು ಮನಃಪೂರ್ತಿಯಾಗಿ ಆಚರಿಸಿ ಹಾಗೆಯೆ ಆಕೆಗೆ ಗರ್ಭವನ್ನು ಉಂಟುಮಾಡಿ ತನ್ಮೂಲಕ ಆಕೆಯಲ್ಲಿ ಅಮೋಘವಾದ ಪು

---

ಬೆಳಕಿನಿಂಕೋಣೆಯ ಬೇಕಾದುದಂಪಡೆದು ಛಳಿಸೆನೆಂಬವರು
ಕಾವಳದೊಳಾರುಂಟೂ ॥೩॥
ಹಾಲುಸಂಸ್ಕಾರದಿಂದಾಗಿ ಘೃತರೂಪವಾದಮೇಲೆಪೂರ್ವಾಕೃತಿ
ಯತಾಳಿಮೊಸರಹುದೆ ॥೪॥
ದಗ್ಧಪಟವೆಂದಿನಂದದಿ ತೋರಲಿಳೆಯಲ್ಲಿ ವಿದಗ್ಧರಾರದನು
ಟ್ಟು ತಳ್ಳದರುಹಿಮಮಂ ॥೫॥
ಗರುಡಮಂತ್ರದೊಳಿದ್ದ ಗರಳಶಕ್ತಿಯು ಜೀವಕರಣಮಂ ವಿ
ಸ್ಮೃತಿಯುಮರಳಿಪೊಂದಿಪುದೇ ॥೬॥
ಕನಸಿನೊಳುಬಂದ ಕಾಮಿನಿಯ ಸಂಸಾರದಿಂ ತನಯರಂಪಡ
ದಿರ್ಪಮನುಜರಾರುಂಟು ॥೭॥

ತ್ರರನ್ನು ಪಡೆದಿರುವಂಥವರು ಯಾರಾದರು ಇರುವರೆ? ಅಂಥವರನ್ನು ಯಾರೂ ಕಂಡಿದ್ದಿಲ್ಲವು.

೨೭ ವಚನ॥ ತಾ॥ ಈ ಪ್ರಕಾರವಾಗಿ ವಿವರಿಸಿದ್ದರಿಂದ ಅನ್ನಮಯ ಕೋಶವಾಗಿರುವ ಸ್ಥೂಲ ದೇಹಕ್ಕೆ ಬಂದೊದಗುವರೋಗ ಮುಂತಾದವುಗಳು ಇಹಲೋಕ ದುಃಖಗಳು ಈ ಭೂಮಂಡಲದಲ್ಲಿ ದಾನಧರ್ಮಾದಿಗಳ ಮೂಲಕ ಪುಣ್ಯವನ್ನು ಸಂಪಾದನೆ ಮಾಡಬೇಕೆಂಬುವದೆ ಪರಲೋಕ ದುಃಖವೆನ್ನಲ್ಪಡುವದು. ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯವೆಂಬ ಪಂಚಕೋಶಗಳಿಗಿಂತಲೂ ವಿಲಕ್ಷಣನಾಗಿ ಆತ್ಮನು ಪ್ರಕಾಶಿಸುವದರಿಂದಲೇ ಸರ್ವಸಾಕ್ಷಿಯಾಗಿ ಅತೀತನಾಗಿರುವನು. ಆದುದರಿಂದಲೇ ಇಹಪರ ದುಃಖಗಳೆರಡೂ ಇಲ್ಲದೇಹೋಯಿತು. ಲೋಕದಲ್ಲಿ ಒಬ್ಬ ಸಾರ್ವಭೌಮನನ್ನು ಮೊದಲು ಮಾಡಿಕೊಂಡು ಚತುರ್ಮುಖಬ್ರಹ್ಮನವರಿಗಿರುವ ಆನಂದಗಳೆಲ್ಲವು ಇಷ್ಟು ಎಂಬದಾಗಿ ಗಣನೆಮಾಡುವದಕ್ಕೆ ಅರ್ಹಗಳಾಗಿ ಇರುವದರಿಂದ ತಾರತಮ್ಯಕ್ಕೆ ಒಳಪಟ್ಟಿರುವವು. ಆತ್ಮಾನುಭವಿಗೆ ಉಂಟಾಗುವ ಸಾಕ್ಷಾತ್ ಬ್ರಹ್ಮಾನಂದವಾದರೊ ಎಣಿಸಲಿಕ್ಕೆ ಅಸಾಧ್ಯವಾಗಿಯು ಅನನ್ಯ ಸದೃಶವಾಗಿಯು, ದುಷ್ಪ್ರಾಪ್ಯವಾಗಿಯು ಇರುವದು. ಆದರೆ, ವ್ಯವಸಾಯ ವಿಷಯಗಳಾದ ಸರ್ವ ಕಾಮನೆಗಳೊಳಗೆ ಸ್ಥೂಲಾದಿ ದೇಹಪ್ರಾಪ್ತಿಯ ಮೂಲಕಾಮಿತವಾದ ದುಃಖಪರಂಪರೆಗಳಿಗೆ ಕೃಷ್ಯಾ

---

೨೭ ಮೂಲ ॥ ವಚನ॥ ಇದರಿಂ ದೇಹವ್ಯಾಧ್ಯಾದಿಗಳಿಹಲೋಕ ದುಖ್ಖಂಗಳು ಪುಣ್ಯಾರ್ಜನಾದಿ ಪರಲೋಕದುಖಃಖಂಗಳು ತಾನು ಪಂಚಕೋಶಂಗಳಿಗೆ ಸಾಕ್ಷಿಯಾದುದರಿಂದಿವೆರಡು ದುಖ್ಖಂಗಳಿಲ್ಲವಾದುದು ಈದುಖ್ಖಾಭಾವದಿಂದಲೂ ಬ್ರಹ್ಮಧ್ಯಾನಾನಂದಗಳು ಪರಿಗಣಿತಂಗಳು ತನ್ನಾನಂದಮಾದರೊ ಅಪರಿಮಿತಮಾದುದರಿಂದೀ ಸರ್ವ ಕಾಮಾಪ್ತಿಯಿಂದಲು ಕೃಷ್ಯಾದಿ ಯಾದುದು ದೇಹಕ್ಕೆ ಯಾಗಾದಿ ಯಾದುದು ವಾಕ್ಯಕ್ಕೆ ಶ್ರವಣಾದಿ ಯಾದುದುಮನಸ್ಸಿಗೆ ಕರ್ತವ್ಯಂಗಳೂ,

ದಿಗಳು, ಮತ್ತು, ಯಾಗಾದಿಗಳು, ಮಿತಿಸುಖಮೋಕ್ಷಕ್ಕೆ ಶ್ರವಣಾದಿಗಳೂ ಮನೋನರನಾಥನಿಗೆ ಕರ್ತವ್ಯಗಳಾಗಿರುವವು.

೨೮ ಶ್ಲೋ॥ ತಾ॥ ಲೋಕದೊಳಗೆ ಕರ್ತವ್ಯಗಳಾಗಿರುವ ಕರ್ಮಪರಂಪರೆಯೆಂಬ ಪ್ರಚಂಡತರವಾದ ಮಾರ್ತಾಂಡನ ಜ್ವಾಲಾಜಾಲದಿಂದ ಸುಡಲ್ಪಟ್ಟು ಅಂದರೆ ಬೆಂದು ಕುಂದಿ ಹೋಗಿರುವವರಿಗೆ ಅಸಮಾನವಾದ ಬ್ರಹ್ಮಜ್ಞಾನವೆಂಬ ಸುಧಾರಸಾಭಿಷೇಕವನ್ನು ಬಿಟ್ಟು ಮತ್ತೆ ಯಾವದೂ ಈ ಚತುರ್ದಶ ಭುವನದಲ್ಲಿಯೂ ಆನಂದವನ್ನು ಪಡಿಸತಕ್ಕ ಪದಾರ್ಥವು ಇಲ್ಲವು. ಎಂದೀ ಪ್ರಕಾರವಾಗಿ ಪುರಾತನರಾದ ಮುಹನೀಯರೆಲ್ಲರು ನಿರಾಬಾಧವಾಗಿ ಸಿದ್ಧಾಂತಮಾಡಿದವರಾದರು.

೨೯ ವಚನ॥ ತಾ ॥ ಪೂರ್ವದೊಳುದಹರಿಸಿದ ಕೃಷಿ ಮೊದಲಾದವುಗಳು, ಯಾಗಮುಂತಾದವುಗಳು, ಶ್ರವಣಮನನಾದಿಗಳು, ಇವುಗಳೊಳಗೆ ಯಾವದೊಂದೂ ಬ್ರಹ್ಮವಿದಗ್ರಗಣ್ಯನಾದುದರಿಂದಲಿ ಬ್ರಹ್ಮನಿಷ್ಠನಾದ ನಿನಗೆ ಬೇಕಾಗಿರುವದಿಲ್ಲವು. ಆದಕಾರಣದಿಂದಲೇ ಕೃತಕೃತ್ಯನಾದೆ. ಪ್ರಾರಬ್ಧಾನುಗುಣವಾಗಿರುವ ಈ ದೇಹಪಾತ ಪರ್ಯಂತಕೂ ಬುದ್ಧಿನೈರ್ಮಲ್ಯವೆಂಬ ಜ್ಞಾನಪರಿಪಾಲನದಿಂದಲೂ, ವೃತ್ಯಂತರೋತ್ಪತ್ತಿ ಇಲ್ಲದೆ ಇರುವಿಕೆಯೆಂಬ ತಪಸ್ಸಿನಿಂದಲೂ, ಸರ್ವಜನಸಂಭಾವ್ಯಮಾದ ಮಾನ್ಯತೆಯೆಂಬ ಸಂಪಾದದಿಂದಲೂ, ಮನಸ್ಸಿಗೆ ಯಾವ ವಿಧವಾದ ಕ್ಲೇಶಗಳಿಲ್ಲದೆ ಇರುವಿಕೆಯೆಂಬ ದುಃಖಾಭಾವದಿಂ

---

೨೮ ಶ್ಲೋ॥ ಕರ್ತವ್ಯದುಃಖಮಾರ್ತಾಂಡ ಜ್ವಾಲಾದಗ್ಧಾಂತರಾತ್ಮನಾಂ। ಕುತಃಪ್ರಶಮಪೀಯೂಷ ಧಾರಾಸೇಕಾಮೃತೇ ಸುಖಂ ॥

೨೯ ಮೂಲ॥ ವಚನ ॥ ಇಲ್ಲವಾದುದರಿಂದ ಕೃತಕೃತ್ಯತ್ವದಿಂದಲು ಎಷ್ಟು ಮೋಕ್ಷಸಾಧನಂಗಳುಂಟೊ ಅಷ್ಟು ನಿನಗೆ ದೊರಕೊಂಡಿತ್ತಾಗಿ ಇದರಿಂ ಸೇರಿದ ಪ್ರಾಪ್ತಪ್ರಾಪ್ಯತ್ವದಿಂದಲು ಧನ್ಯನಾದಿಹರಾಗಿ ಆ ದೇಹಾಂತರಮುಂ ಬುದ್ಧಿನೈರ್ಮಲ್ಯವೆಂಬ ಜ್ಞಾನರಕ್ಷೆಯಿಂ ಏಕಾಗ್ರಮನಸ್ಸೆಂಬ ತಪಸ್ಸಿನಿಂ ಸಾರ್ವಜನೀನಮಾದ ಸರ್ವಜನ ಪೂಜ್ಯತೆಯೆಂಬಾ ಶೀರ್ವಾದದಿಂ ಕ್ಲೇಶಂಗಳಿಲ್ಲ

ದಲೂ, ಇತರ ವಿಧವಾದ ಸಾಧನಾಂತರಾಪೇಕ್ಷೆ ಇಲ್ಲದೆ ಸ್ವಸ್ವರೂಪ ವಾಗಿರುವ ನಿಜಸುಖವೆಂಬುವದು ಸ್ಫುರಿಸಿರುವದರಿಂದಲೇ ನಿನಗೆ ಯಾ ವಕಾಲದಲ್ಲಿಯೂ ಸ್ವರೂಪ ವ್ಯತಿರಿಕ್ತವಾಗಿ ಮತ್ತೆ ಯಾವದೂ ತೋ ರುವದಿಲ್ಲವು. ಆದಕಾರಣ ನಿರ್ಭಯವಾಗಿದ್ದುಕೊಂಡು ವಿಶೇಷವಾದ ಕುಸುಮಗಳಿಂದೊಡಗೂಡಿದ ವೃಕ್ಷದಂತೆಯು, ಸುವಾಸನೆಯಿಂದೊಡ ಗೂಡಿಯು, ಸುಫಲಗಳಿಂ ಸಂಶೋಭಿಸುವ ಶೀವಮಾವಿನಗಿಡದಂತೆಯು ಶ್ಲಾಘ್ಯವಾದ ರಸವುಳ್ಳವನಾಗಿಯೂ, ಆಶಂಸನೀಯವಾದ ಉದ್ಯಾನ ನದಂತೆ ಮುಕುತಿಯನ್ನು ಬಯಸುವ ಮುಹನೀಯರಿಗೆ ನೆಳಲಾಗಿಯು ಅಮರವಾಹಿನಿಯಂತೆ ದರ್ಶನ ಮಾತ್ರದಿಂದಲೇ ಸಮಸ್ತವಾಗಿರುವ, ಪಾಪ ಸಮುದಾಯಮನ್ನೆಲ್ಲಮಂ ಪರಿಹಾರಮಾಡತಕ್ಕವನಾಗಿಯೂ, ಸೂರ್ಯಮಂಡಲದಂತೆ ತೇಜಸ್ಸಿಗೆ ಆಸ್ಥಾನವಾಗಿಯೂ, ಪೂರ್ಣಚಂದ್ರ ನಂತೆ ಅಶೇಷ ವಿಬುಧರಿಗೆ ಸುಧಾರಸವನ್ನು ಕೊಡುವದರಲ್ಲಿ ದಕ್ಷನಾ ಗಿಯೂ, ಸಮುದ್ರನ ಹಾಗೆ ಸಂಶೋಭಿಸುವ ಗಾಂಭೀರ್ಯವುಳ್ಳವ ಗಿಯೂ ಸುಕೃತಗಳ ಪರಂಪರೆಗೆ ಆಕರನಾಗಿಯೂ, ಬ್ರಹ್ಮವಿದ್ಯಕ್ಕೆ ತೌರುಮನೆಯಾಗಿಯೂ, ಮುಕುತಿಯೆಂಬ ಲಕ್ಷ್ಮೀದೇವಿಯ ಉತ್ಪ ತ್ತಿಗೆ ಸಮುದ್ರಪ್ರಾಯನಾಗಿಯೂ, ಇದ್ದುಕೋಂಡು ಸಚ್ಚಿದಾನಂದ ಸ್ವರೂಪವಾಗಿರುವ ಸಾಕ್ಷಾತ್ ಪರಶಿವನ ಅನುಗ್ರಹದಿಂದ ಶ್ರೀ ಶಿವಭ

---

ದಿಹಣವೆಂಬ ದುಃಖಕ್ಷುಯದಿಂ ಸಾಧನ ಪ್ರತಿಬಾಧರಾಹಿತ್ಯವೆಂ ಬ ಸುಖಾವಿರ್ಭಾವದಿಂದಿಪ್ಪೇಯಾಗಿ ನಿನಗಾವ ಕಾಲದೊಳ್ ಭ ಯವಿಲ್ಲಸೆ ಪುಷ್ಪಿತದ್ರುಮದಂತೆ ತದ್ವಾಸನನಾಗಿ ಫಲಿತ ರಸಾಲ ದಂತೆ ಸುರಸನಾಗಿ ಮಹೋದ್ಯಾನದಂತೆ ಮುಮುಕ್ಷುಗಳಿಗೆ ನೆಳಲಾಗಿ ದೇವಗಂಗೆಯಂತೆ ದರ್ಶನಮಾತ್ರದಿಂ ಪಾಪಹಾರ ಕನಾಗಿ ಸೂರ್ಯನಂತೆ ತೇಜೋನಿಧಿಯಾಗಿ ಚಂದ್ರನಂತೆ ವಿಬುಧ ರ್ಕಳಿಗೆ ಅಮೃತಮಂ ಬೀರುವನಾಗಿ ಸಮುದ್ರನಂತೆ ಗರ್ಭೀ ಕೃತ ಗಂಭೀರನಾಗಿ ಪುಣ್ಯರಾಶಿಯಾಗಿ ಬ್ರಹ್ಮವಿದ್ಯಾನಿಧಿಯಾ ಗಿ ಮೋಕ್ಷಲಕ್ಷ್ಮೀ ಜನ್ಮಸ್ಥಾನವಾಗಿ ಶಿವಪ್ರಸಾದದಿಂ ಶಿವ

ಕ್ತಿಯು, ಮತ್ತು ಜೀವನ್ಮುಕ್ತಿಯು, ಎಂಬಿಬ್ಬರಾದ ಧರ್ಮಪತ್ನಿಯ ರನ್ನು ಹೊಂದಿ ಅಪರಿಮಿತವಾದ ಆನಂದದಿಂದ ಬಾಳಿಕೊಂಡಿರೆಂಬದಾಗಿ ಮಂಗಳಾಶಾಸನವನ್ನು ಮಾಡಲು ತರುವಾಯ ಮನೋನರೇಂದ್ರನು ವಿಚಾರನೆಂಬ ಪುರೋಹಿತನಿಗೆ ಪ್ರಣಾಮಪರ್ಯಾಯಗಳನ್ನಾಚರಿಸಿ ನಿಜವಾದ ಸುಖದಿಂದ ಇರುತಿರ್ದನು. ಅದರ ವಿವರವೆಂತೆಂದರೆ ?

೩೦ ವೃ॥ ತಾ॥ ನ್ಯೂನತೆಯಂ ಪಡೆಯದಿರುವ ತೇಜೋವಿಶೇಷವನ್ನುಹೊಂದಿ ನಿಖಿಲವಾದವೃತ್ತಿಗಳಲ್ಲಿಯೂ ಸಾಮ್ಯವಾಗಿರುವ ಸಂಚಾರವನ್ನು ಅಳವಟ್ಟು ವಿಕೃತಿಯಂಪಡೆಯದಿರುವ ವಿಲಾಸ ಸಂದೋಹದಿಂದುಬ್ಬಿ ವಿಚಾರನೆಂಬ ಸಚಿವಮುಖ್ಯನಿಂದ ಲಭಿಸಿದ ವಿಶಾಲವಾದ ವಿವೇಕದಿಂದ ಸಕಲರಾದ ಶತ್ರುಜಾಲವನೆಲ್ಲವಂ ಜಯಿಸುವ ಅಮೋಘವಾದ ಶಕ್ತಿಯನ್ನು ಹೊಂದಿ ವೇದಶಾಸ್ತ್ರೋಕ್ತಾನುಸಾರವಾಗಿ ಶ್ರೀಗುರುವಿನಲ್ಲಿ ಅಖಂಡವಾದ ಭಕ್ತಿಯನ್ನಿಟ್ಟುಕೊಂಡು ಸೂರ್ಯಚಂದ್ರನಕ್ಷತ್ರಸ್ಥಿರಿಯ ಪರ್ಯಂತವು ಸ್ಥಿರವಾಗಿ ರಾರಾಜಿಸುತಲಿರ್ದನು

೩೧ ವೃತ್ತ॥ತಾ॥ಪರ್ವತಪುತ್ರಿಯಾದ ಪಾರ್ವತಿದೇವಿಗೆ ವಲ್ಲಭನಾದ ಪರಮೇಶ್ವರನ ಹೊಂಬಣ್ಣವಾಗಿರುವ ಜಟಾಮಂಡಲವೆಂಬ ಭಯಂಕರವಾದಗಹನದಲ್ಲಿ ವಿಜೃಂಭಿಸಿಹರಿಯುತಲಿರುವ ಅಮರವಾಹಿನಿಯ ದಿವ್ಯ

---

ಭಕ್ತಿ ಜೀವನ್ಮುಕ್ತಿಯರೆಂಬ ಕಲತ್ರದ್ವಯದಿಂ ಕೂಡಿ ಸುಖದಿಂ ಬಾಳೆಂದು ಹರಸಲಾ ವಿಚಾರಂಗೆ ನಮಸ್ಕರಿಸಿ ನಿಜಸುಖದಿಂದ ಮನೋರಾಜನಿರ್ದಪನ ದೆಂತೆನೆ.

೩೦ ಮೂಲ॥ ವೃತ್ತ॥ ಕಳಿಯದಕಾಂತಿಯಿಂ ಸಕಲವೃತ್ತಿಗಳಲ್ಲಿ ಸಮಾನಚಾರಮಂ ಬಳಿಸಿ ವಿಕಾರಮೈದದ ವಿಲಾಸದೊಳುಬ್ಬಿ ವಿಚಾರನಿಂದೆ ಬಂದು ಲಘುವಿವೇಕದಿಂದ ಪರಜಯಪರಾಕ್ರಮನಾಗಿವೇದಮುದ್ಗಲ ಗುರುಭಕ್ತಿಯಿಂಪೊರದನಾ ಕಮಲಾಪ್ತಶಶಾಂಕತಾರಕಂ ॥

೩೧ ಮೂಲ॥ವೃ॥ಇದುಗೌರೀಶತಟತ್ಪಿಶಂಗೀ ಮಹಾಜಟಾಘೋರಾಟವಿಬಾಭ್ರಮತ್ರಿದಶೊತ್ತುಂಗ ತರಂಗಿಣಿ ಸಲಿಲಮೃಣ್ಮಾಧ್ವೀರ್ಘು

ಜಲೌಘದ ಮಾಧುರ್ಯಕ್ಕೆ ಸಮಾನವಾದರಸಭರಿತವಾಗಿರುವೀ ನಿರು ಪಮವಾದ ಕಾವ್ಯವನ್ನು ನಿಜ ಭಾವಜ್ಞರಾದ ಕವಿಶಿರೋಮಣಿಗಳು ಇತರ ಕೃತಿಗಳಂತೆ ಸಮಾನ್ಯವಾಗಿ ನೋಡದೆ ಸೂಕ್ಷ್ಮವಾದ ದೃಷ್ಟಿ ಯಿಂದ ಅನುಕೂಲಕೂಡವಾಗಿ ಅವಲೋಕಿಸಿ ಗುಣಪರಿಭಾವನೆಯಿಂದ ರಸಾಸ್ವಾದವನ್ನು ಮಾಡಬೇಕೆಂಬದಾಗಿಕವಿಯಹೃದಯಂಗಮವಾದ ಆಶಯವು ಪ್ರಕಟಿತವಾಗಿರುವುದು.

೩೦ ಶ್ಲೋ॥ ತಾ॥ ಇನ್ನು ಗ್ರಂಥ ಕರ್ತನು ಪ್ರಬಂಧ ನಿರ್ಮಾಣಾವ ಸರಕ್ಲೃಪ್ತಿಯನ್ನು ತಿಳಿಸುತಲಿದ್ದಾನೆ, ವರ್ತಮಾನವಾದ ಕಲಿಯುಗ ದಲ್ಲಿ ನಾಲ್ಕು ಸಾವಿರದೇಟು ನೂರೆಪ್ಪತ್ತೊಂದು ಸಂವತ್ಸರಗಳು ಕ ಳೆದು ಹೋಗುತಿರಲಾಗಿ ರೌದ್ರಿಸಂವತ್ಸರದ ಅಶ್ವಿನಿ ನಕ್ಷತ್ರದಿಂದೊಡ ಗೂಡಿದ ಪ್ರಥಮ ಶುಭದಿವಸದಲ್ಲಿ ಶ್ರೀಕೃಷ್ಣನರ ಪಾಲನಿಂ ಪ್ರಾ ರಂಭಿಸಿ ಬರೆಯಲ್ಪಟ್ಟೀ "ನಿಜದೀಪಿಕಾ ಶಿರೋರತ್ನಂ,, ಎಂಬೀ ಸ ತ್ಕೃತಿಯು ಶ್ರೀದಕ್ಷಿಣಾಮೂರ್ತಿಯ ಚರಣಾರ ವಿಂದಗಳಲ್ಲಿ ಉಪಹಾ ರ ರೂಪವಾಗಿ ಸಮರ್ಪಿಸಲ್ಪಟ್ಟಿತು. ಆದುದರಿಂದಲೇ ಆ ಚಂದ್ರಾ ರ್ಕ ಸ್ಥಾಯಿಯಾಗಿರಬೇಕೆಂಬದಾಗಿ ಪ್ರಾರ್ಥನೆಯೂ.

೩೧ ಗದ್ಯ॥ ತಾ॥ ಇಂತು ಅಮೋಘವಾಗಿರುವೀಕೃತಿಯು ಶ್ರದ್ಧಾಭ ಕ್ತಿಗಳಿಂದೊಡಗೂಡಿಕೇಳುವ, ಮತ್ತು, ಹೇಳುವರಿಗು ಅನುಭವಿಸುವವರಿ

---

ರಿಸೋರಂ ಪದಕಾವ್ಯಂಕವಿಗಳ್ ವಿಚಾರಿಪುದಿದಂ ಸೌಲಭ್ಯಮಂ ಮಿಕ್ಕಲೋಕಂಗಳ ಕಾವ್ಯಗಳವೋಲ್ನಿರೀಕ್ಷಿಸದೆ ಧೀಮತ್ಸ್ವಾ ಮಿಸದೃಷ್ಟಿಯಿಂ ॥

೩೦ ಶ್ಲೋ॥ ಕಲ್ಯಬ್ದೇಷುಗತೇಷು ಚಂದ್ರನಗನಾಗಾಬ್ಧಿಷ್ವಿದಂನಿ ರ್ಮಿತಂ । ಕಾವ್ಯಂಕೃಷ್ಣಮಹೀಭುಜಾಭಿನಮನಂ ಶ್ರೀದಕ್ಷಿ ಣಾಮೂರ್ತಯೆ । ಕೃತ್ವಾಬ್ದೆವಿಕೃತೌವಿರಾಮಮುಗಮಾದ್ರೌ ದ್ರಾಶ್ವಿನಿಸತ್ತಿಥಾ । ವಾರಜ್ಞಂನಿಜದೀಪಿಕಾ ಪದಶಿರೋರತ್ನಾ ಭಿಸಂವರ್ಧತಾಂ ॥ ... ... ... ... *

೩೧ ಮೂ॥ ಗದ್ಯ॥ ಶ್ರಾವಕಜನವರ್ತಮಾನ ಪ್ರತಿಬಂಧಶಿರಸ್ಥಾನೀ

ಗೊ ಸಮಸ್ತವಾದ ಪ್ರತಿಬಂಧಕಗಳನ್ನು ನಿವೃತ್ತಿಮಾಡುವದರ ಮೂಲಕ ಇಹಲೋಕದೊಳು ಅಶೇಷ ಸಾಮ್ರಾಜ್ಯ ಸುಖವನ್ನು ಉಂಟುಮಾಡುವದಲ್ಲದೆ ನಿಖಿಲೋಪನಿಷತ್ಸಾರಭೂತವಾಗಿರುವ ಪರಾತ್ಮಜ್ಞಾನವನ್ನುಂಟುಮಾಡುವದರಮೂಲಕ ಬಂಧನಿವೃತ್ತಿಯನ್ನುಂಟುಮಾಡಿ ತ್ರಿಕಾಲಾಬಾಧಿತ ಸತ್ವರೂಪವಾಗಿಯೂ, ಸ್ವತಃ ಪ್ರಕಾಶಮಾನವಾಗಿಯೂ, ಆನಂದ ಘನವಾಗಿಯೂ ಅವಿಕಾರಿಯಾಗಿಯೂ, ಅಖಂಡವಾಗಿಯೂ, ನಿರ್ದೋಷವಾಗಿಯೂ, ನಿರ್ಮಲವಾಗಿಯೂ, ಶಾಶ್ವತವಾಗಿಯೂ, ಇರುವ ಸುಖವನ್ನುಂಟುಮಾಡುವದೆಂಬದಾಗಿ, ಗ್ರಂಥಕರ್ತನು ಪರಿಸಮಾಪ್ತಿಯ ಮಂಗಳವನ್ನು ಮಾಡುವಂಥವನಾದನು.

ಈ ಪ್ರಕಾರವಾಗಿ ದೊಡ್ಡಬೆಲೆ, ಎಂಬ ಪುರವಾಸಿಯಾದ,
ಬ್ರಹ್ಮಶ್ರೀ, ನಾರಾಯಣಶಾಸ್ತ್ರಿಯಿಂದ ಮಂದೋಪಕಾರಾ
ರ್ಥವಾಗಿ ಯಥಾಮತಿ ವಿರಚಿತವಾದ " ರತ್ನಪ್ರಭೆ ,,
ಎಂಬ ಟೀಕೆಯೊಡನೆ ಸಂಗತವಾದ " ನಿಜದೀಪಿ
ಕಾರತ್ನ ,, ಎಂಬ ಗ್ರಂಥವು ಮುಗಿದುದು.

ಇಂತು ವಿಶೇಷವಿಷಯ ವಿಚಾರವು ಮುಗಿದುದು.

---

ಯಾಲಸ್ಯ ನಿವೃತ್ತಿಯಿಂದಶೇಷಬೃಂದಾರಕ ಸಂದೋಹಸ್ತೂಯಮಾನನಿಜಾಪವರ್ಗ ಫಲಪ್ರದಾಯಕ ಪುನಃಪುನರುಪ ನಿಷದಶ್ರವಣ ರುಚಿರೂಪಶ್ರೀಯುಃಪದಂ ಸಿದ್ಧಸಲೋಸುಗಂ ಸಮಾಪ್ತಿಯಾದಪಂಚಮಪಟಲ ಪೂರ್ತಿಯಂಗೈದು ಕವಿಯುತ್ತರಮಂಗಲಮಾಚರಿಸಿದಪಂ ॥

ಶ್ರೀಮದನೇಕ ಸುರಾಸುರ ಶಿರೋದೇಶ ಕಿರೀಟ ಮಣಿಪ್ರಭಾ
ನೀರಾಜಿತ ಪಾದಾರವಿಂದ ಪರಮೇಶ್ವರಾಸಕ್ತ ಚಿತ್ತನಾದ
ಕೃಷ್ಣಪ್ರಭು ವಿರಚಿತವಾದ " ನಿಜದೀಪಿಕಾರತ್ನ ,,
ವೆಂಬ ಗ್ರಂಥವು ಮುಗಿದುದು.

